# ಉತ್ತರ ರಾಮಚರಿತ್ರಕಥೆ

ಎಂಬ

ಮಹಾಕವಿ ಶ್ರೀ ಭವಭೂತಿ ಪ್ರಣೀತವಾದ

## ಉತ್ತರರಾಮಚರಿತ ನಾಟಕದ ಕನ್ನಡಗದ್ಯಾನುವಾದ

---

ದ್ವಿತೀಯ ಮುದ್ರಣ

---

ಕರ್ಣಾಟಕ ಕಾವ್ಯಕಲಾನಿಧಿ ಪ್ರವರ್ತಕರಾದ

ಮಂ॥ ಆ॥ ರಾಮಾನುಜೈಯಂಗಾರ್ಯರಿಂದ

ಪರಿಶೋಧಿತವಾಗಿ

ಮಂ॥ ಆರ್. ನರಸಿಂಹಚಾರ್, ಬಿ ಎ. ಇವರಿಂದ

ಮೈಸೂರು

ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿತವಾಗಿ, ಪ್ರಕಟಿಸಲ್ಪಟ್ಟಿದೆ.

1924

# ಪೀಠಿಕೆ.

---

## ಉತ್ತರ ರಾಮಚರಿತ್ರಕಥೆ

ಈ ಗ್ರಂಥವು ಅತ್ಯಂತಪ್ರಸಿದ್ಧನಾದ ಭವಭೂತಿ ಮಹಾಕವಿಯಿಂದ ಸಂಸ್ಕೃತಭಾಷೆಯಲ್ಲಿ ವಿರಚಿತವಾದ " ಉತ್ತರ ರಾಮಚರಿತ " ವೆಂಬ ನಾಟಕದ ಸರಳವಾದ ಕನ್ನಡ ಗದ್ಯಾನುವಾದವಾಗಿದೆ. ಈ ಗ್ರಂಥಕ್ಕೆ " ಉತ್ತರ ರಾಮಚರಿತ್ರ ಕಥಾತಾತ್ಪರ್ಯಂ " ಎಂಬ ಮತ್ತೊಂದು ಹೆಸರೂ ಇರುವಂತೆ ತೋರುತ್ತದೆ

ಈ ಗ್ರಂಥವನ್ನು ಕನ್ನಡಿಸಿದ ಕವಿಯಾರೋ ಗೊತ್ತಿಲ್ಲ. ಈತನು ಬಹುಶಃ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲೋ ಅಥವಾ ಅದಕ್ಕಿಂತ ಸ್ವಲ್ಪ ಪೂರ್ವದಲ್ಲಿಯೋ ಇದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಈತನು ಬ್ರಾಹ್ಮಣ ಕವಿಯಾಗಿರಬಹುದು. ಈ ಕವಿಯು ಈ ಗ್ರಂಥದಲ್ಲಿ ಸಂಸ್ಕೃತನಾಟಕದಲ್ಲಿ ಆಯಾ ಪಾತ್ರಗಳ ತಿಳುವಳಿಕೆಗಾಗಿ ಬರೆದಿರುವ (ವಿಷ್ಕಂಭಕ, ನೇಪಥ್ಯ, ಆಕಾಶೇ, ಇತ್ಯಾದಿ) ಭಾಗಗಳನ್ನು ಕೂಡ ವಾಕ್ಯರೂಪವಾಗಿ ಕಥಾಭಾಗಕ್ಕೆ ಸೇರಿಸಿ ಬರೆದಿರುತ್ತಾನೆ. ಈ ಗ್ರಂಥದಲ್ಲಿ ವಾಕ್ಯರಚನಾಕ್ರಮವು ಬಹಳ ಮಟ್ಟಿಗೆ ಸಂಸ್ಕೃತ ಶೈಲಿಯನ್ನೇ ಹೋಲುತ್ತದೆ. ಕವಿಯು ಭವಭೂತಿಯ ಗಂಭೀರವಾದ ಉಕ್ತಿಯನ್ನೆಲ್ಲಾ ಸ್ಪಷ್ಟವಾಗುವಂತೆ ಬಹಳ ಮಟ್ಟಿಗೆ ಸುಲಭ ಶೈಲಿಯಲ್ಲಿ ಬರೆದಿರುತ್ತಾನೆ. ಈತನ ಶೈಲಿಯು ನದಿಯ ಪ್ರವಾಹದಂತೆ ಗಂಭೀರವಾಗಿಯೂ ಆಹ್ಲಾದಕರವಾಗಿಯೂ ಏಕರೂಪವಾಗಿಯೂ ಇದೆ. ಈ ಪುಸ್ತಕದಲ್ಲಿ ಮೂಲಗ್ರಂಥದ ಗಾಂಭೀರ್ಯವು ಪ್ರಕಾಶಿತವಾಗುತ್ತದೆ. ಇದರ ವಾಕ್ಯಸರಣಿಯು ವಿಜಾತೀಯವಾಗಿ ಮೊದಲು ಕಂಡುಬಂದರೂ ಕ್ರಮೇಣ ಸುರಸವಾಗಿ, ಅದರ ಮನೋಹರತ್ವವು ಕಂಗೊಳಿಸುವುದು. ಭವಭೂತಿಯ ಉನ್ನತಾಭಿಪ್ರಾಯಗಳ ಅನುವಾದವಾದುದರಿಂದ ಸಾವಧಾನವಾಗಿ ಪಠಿಸಿದ ಹೊರತು ಅರ್ಥ ಸ್ಫೂರ್ತಿಯಾಗುವುದು ಕಷ್ಟ.

" ಉತ್ಪತ್ಸ್ಯತೇ ಮಮತು ಕೋಪಿ ಸಮಾನಧರ್ಮಾ "

ಎಂಬದಾಗಿ ಭವಭೂತಿಯೇ ಹೇಳುವಂತೆ, ಆತನ ಹೃದಯವನ್ನು ತಿಳಿದು ಆತನಂತೆಯೇ ಹೇಳಬಲ್ಲ ಸಾಮರ್ಥ್ಯವುಳ್ಳವರು ಬಹಳ ವಿರಳವಾಗಿದ್ದಾರೆ. ಹೀಗಿರುವುದರಿಂದ ಸೂರ್ಯನ ಬಿಂಬಕ್ಕೂ ಪ್ರತಿಬಿಂಬಕ್ಕೂ ಎಷ್ಟು ಅಂತರವೋ, ಅಷ್ಟೇ ಅಂತರವು ಸಂಸ್ಕೃತದ ಮೂಲಕ್ಕೂ ಈ ಕನ್ನಡದ ಟೀಕೆಗೂ ಇದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಆದರೂ ಈ ಟೀಕಾಕಾರನು ಇಂಥ ದುರ್ಘಟವಾದ ಪರಿವರ್ತನೆಯ ಕಾರ್ಯವನ್ನು ಕೈಕೊಂಡು ಸ್ತ್ರೀಬಾಲರಿಗೆ ತಿಳಿಯಲು ಸಾಧ್ಯವಾಗುವಂತೆ ವಿರಚಿಸಿದುದು ಮಹೋಪಕಾರವಾಗಿದೆ. ಜನರಿಗೆ

ವಿವೇಕವೂ ಉನ್ನತವಾದ ಅಭಿಪ್ರಾಯಗಳೂ ಉಂಟಾಗಬೇಕಾದರೆ ಇಂಥ ಮಹಾಕವಿಗಳ ಗ್ರಂಥಪರಿಶೀಲನಕ್ಕಿಂತಲೂ ಉತ್ತಮವಾದ ಉಪಾಯಾಂತರಗಳು ಯಾವುವೂ ಇಲ್ಲ.

ಸಂಸ್ಕೃತಕವಿಗಳೆಲ್ಲರೂ ಏಕಕಂಠರಾಗಿ ರಸಪುಷ್ಟಿಯಾಗುವಂತೆ ಕಥಾಸಂವಿಧಾನವನ್ನು ಕಲ್ಪಿಸುವುದರಲ್ಲಿಯೂ, ಕಥಾಸಂವಿಧಾನಕ್ಕೂ ರಸಪುಷ್ಟಿಗೂ ಅನುಕೂಲವಾಗಿಯೂ ಉತ್ತೇಜಕವಾಗಿಯೂ ಇರುವಹಾಗೆ ಪದಪ್ರಯೋಗ ಮಾಡುವುದರಲ್ಲಿಯೂ ಭವಭೂತಿಯ ಸಾಮರ್ಥ್ಯವು ಅನ್ಯಾದೃಶವೆಂದು ಒಪ್ಪಿಕೊಂಡು

"ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ"

ಎಂದು ಹೇಳುತ್ತಾರೆ. ಗೋವರ್ಧನದಾಸನೂ ತನ್ನ ಗ್ರಂಥದಲ್ಲಿ ಹೀಗೆ ತಿಳಿಸುತ್ತಾನೆ :—

"ಭವಭೂತೇ ಸ್ಸಂಬಂಧಾತ್ ।
ಭೂಧರಭೂರೇವ ಭಾರತೀ ಭಾತಿ ॥
ಏತತ್ಕೃತಕಾರುಣ್ಯೇ ।
ಕಿಮನ್ಯಥಾ ರೋದಿತಿ ಗ್ರಾವಾ ॥"

[ಟೀಕೆ—ಭವ, ಎಂದರೆ, ಈಶ್ವರನ ; ಭೂತೇಃ—ಸಂಪತ್ತಿನ ; ಸಂಬಂಧಾತ್—ಸಂಬಂಧದಿಂದ ; ಭೂಧರಭೂ ಎಂದರೆ ಪಾರ್ವತಿಯು ಯಾವರೀತಿಯಲ್ಲಿ ಪ್ರಕಾಶಿಸುತ್ತಾಳೆಯೋ, ಅದೇ ರೀತಿಯಲ್ಲಿ ಭವಭೂತೇಸ್ಸಂಬಂಧಾತ್—ಭವಭೂತಿಕವಿಯ ಸಂಬಂಧದಿಂದ ; ಭಾರತೀದೇವಿಯು ಎಂದರೆ ಸರಸ್ವತಿಯು ಒಪ್ಪುತ್ತಾಳೆ ಏತತ್ಕೃತಕಾರುಣ್ಯೇ—ಈಶ್ವರಕೃತವಾದ ಕರುಣೆಯಲ್ಲಿ ಎಂದರೆ ದಕ್ಷಾಧ್ವರದಲ್ಲಿ ಪಾರ್ವತೀದೇವಿಯು ಅಗ್ನಿಕುಂಡದಲ್ಲಿ ಶರೀರವನ್ನು ಬಿಟ್ಟಕಾಲದಲ್ಲಿ ಹೇಗೋ ಹಾಗೆ, ಭವಭೂತಿಯಿಂದ ಕಲ್ಪಿತವಾದ ಕರುಣರಸಪ್ರಧಾನವಾದ ಈ ನಾಟಕದಲ್ಲಿ "ಅಪಿ ಗ್ರಾವಾ ರೋದಿತ್ಯಪಿ ದಳತಿ ವಜ್ರಸ್ಯ ಹೃದಯಂ" ಎಂಬ ವಾಕ್ಯದಂತೆ ಸೀತಾವಿಯೋಗಪರಿತಪ್ತನಾದ ಶ್ರೀರಾಮಚಂದ್ರನ ಶೋಕದಲ್ಲಿ—"ಕಿಮನ್ಯಥಾ ರೋದಿತಿ ಗ್ರಾವಾ"—ಕಲ್ಲೂ ಕರಗಿ ನೀರಾಗಿ ಹೋಗುವುದು ಒಂದಾಶ್ಚರ್ಯವಲ್ಲ.]

ಈ ರೀತಿಯಲ್ಲಿ ಅಚೇತನವಾದ ಪಾಷಾಣಾದಿಗಳಿಗೂ ಕೂಡ ರಸೋದ್ರೇಕವುಂಟಾಗುವಂತೆ ಬರೆದಿದ್ದಾನೆ ಎಂಬುದರಿಂದ ಈ ನಾಟಕದಲ್ಲಿ ರಸಪುಷ್ಟಿ ಎಷ್ಟೊಂದು ಸಮೃದ್ಧವಾಗಿದೆ ಎಂಬುದನ್ನು ಪಾಠಕರೇ ಊಹಿಸಿಕೊಳ್ಳಬಹುದು.

ಈ ಉದ್ಗ್ರಂಥದ ಸ್ವಾರಸ್ಯವನ್ನು ಸವಿಯಲು ಸಹಾಯಮಾಡುವುದಕ್ಕಾಗಿ ಇಲ್ಲಿ ಕೆಲವು ಸೂಚನೆಗಳನ್ನು ಮಾಡುತ್ತೇವೆ :—

(1) ಕಥಾಚಮತ್ಕಾರ :—ಪೂರ್ವರಾಮಚರಿತ್ರೆಯ ಕಥಾಭಾಗವನ್ನು ತಿಳಿಸದೆ ಉತ್ತರಕಥಾಭಾಗವನ್ನು ಹೇಳುವುದಕ್ಕಾಗುವುದಿಲ್ಲ. ಅದನ್ನೆಲ್ಲಾ ಇಲ್ಲಿ

ಕಥಾಭಾಗವಾಗಿ ಹೇಳುತ್ತ ಬಂದರೆ, ಕಥೆಯು ನೀರಸವಾಗಿ ಹೋಗುತ್ತದೆ. ಈ ಎರಡು ವಿಧವಾದ ದೋಷವನ್ನು ಪರಿಹರಿಸಿ ಪೂರ್ವಕಥೆಯ ಮುಖ್ಯ ಮುಖ್ಯ ವಾದ ಭಾಗಗಳನ್ನೆಲ್ಲಾ ಕಥಾನಾಯಕನ ಗುಣಪ್ರಕಾಶವಾಗುವಂತೆ ತಿರಿಗಿಸಿ ಕೊಂಡು ಸ್ವಲ್ಪದರಲ್ಲಿಯೇ ವಿವರಿಸುವುದಕ್ಕಾಗಿ ಚಿತ್ರಪಟದ ದರ್ಶನವನ್ನು ಕಲ್ಪಿಸಿರುವುದು ಕವಿಯ ಕಲ್ಪನಾಶಕ್ತಿಗೆ ಅನ್ಯಾದೃಶವಾದ ದೃಷ್ಟಾಂತವಾಗಿದೆ. ಚಿತ್ರದರ್ಶನ ಕಾಲದಲ್ಲಿ ಪ್ರಸಕ್ತವಾದ ಅಯೋಧ್ಯಾನಗರಪ್ರವೇಶ, ಮಂಥರಾವೃತ್ತಾಂತ, ಇವೇ ಮೊದಲಾದ ಭಾಗಗಳಿಂದ ಈ ವಿಷಯವು ವ್ಯಕ್ತವಾಗುತ್ತದೆ.

(2) ವರ್ಣನಾಭಾಗ :—ದ್ವಿತೀಯಾಂಕದ ಅಂತ್ಯದಲ್ಲಿ • ಮಾಡಿರುವ ದಂಡಕಾರಣ್ಯ, ಜನಸ್ಥಾನ—ಇವುಗಳ ವರ್ಣನೆಯು ಅದ್ಭುತವಾಗಿಯೂ ಅವುಗಳನ್ನೇ ಸಾಕ್ಷಾತ್ತಾಗಿ ಕಣ್ಣೆದುರಿಗೆ ತಂದು ತೋರಿಸುವಂತೆಯೂ ಇದೆ.

(3) ರಸ :—ಸೀತಾಪ್ರಲಾಪ, ರಘುರಾಮನ ಶೋಕ ಇವುಗಳ ವರ್ಣನೆಯಂತೂ ಓದುವವರ ಹೃದಯದಲ್ಲಿ ಶೋಕರಸವನ್ನೇ ಮೂರ್ತಿಗೊಳಿಸಿ, "ಅಪಿ ಗ್ರಾವಾ ರೋದಿತಿ" ಎಂದು ಕವಿಯು ಹೇಳುವಂತೆ ಚೇತನಾಚೇತನ ರೂಪವಾದ ಸಮಸ್ತಪ್ರಪಂಚವನ್ನು ಕರುಣರಸದಲ್ಲಿ ಮುಳುಗಿಸಿ, ಅದರಲ್ಲಿಯೇ ಲಯಿಸಿಹೋಗುವಂತೆ ಮಾಡುತ್ತದೆ.

ಮೇಲೆ ದಿಕ್ಪ್ರದರ್ಶನಾರ್ಥವಾಗಿ ಸೂಚಿಸಿದ ಭಾಗಗಳಲ್ಲಿಯೂ ಇತರ ಭಾಗಗಳಲ್ಲಿಯೂ ಕೂಡ ತುಂಬಿ ತುಳುಕಾಡುತ್ತಿರುವ ಸಮಸ್ತ ರಸವನ್ನೂ ಆಸ್ವಾದಿಸಿ ಸುಖಪಡಬೇಕಾದ ಗ್ರಂಥವಲ್ಲದೆ ಇದು ಕಾಡುಕಟ್ಟುಕಥೆಗಳಂತೆ ಮೇಲೆಮೇಲೆ ಇಲ್ಲಿ ಅಲ್ಲಿ ವಾಕ್ಯಗಳನ್ನು ಓದಿ ತೃಪ್ತಿಪಡುವ ಪುಸ್ತಕವಲ್ಲ.

ಈ ನಾಟಕವು ಕರುಣರಸಪ್ರಧಾನವಾದುದು. ಇತರ ರಸಗಳೂ ಯಥೋಚಿತವಾಗಿ ತೋರಿಸಿಕೊಂಡು ಪ್ರಧಾನ ರಸವಾದ ಕರುಣರಸವನ್ನು ಪುಷ್ಟೀಕರಿಸುತ್ತವೆ. ಮುಖ್ಯವಾಗಿ ಪ್ರಥಮಾಂಕದಲ್ಲಿ ಶೃಂಗಾರರಸವೂ, ತೃತೀಯಾಂಕದಲ್ಲಿಯೂ ಷಷ್ಠಾಂಕದ ಆದಿಯಲ್ಲಿಯೂ ವೀರರಸವೂ ತೋರಿಬರುತ್ತವೆ. ಇತರ ರಸಗಳೂ ಅಲ್ಲಲ್ಲೇ ಕಂಡು ಬರುತ್ತವೆ. ಭವಭೂತಿಯೂ ಕೂಡ ನಾಟಕದಲ್ಲಿಯೇ ತಮಸೆಯ ಮೂಲಕ ಈ ಅಭಿಪ್ರಾಯವನ್ನೇ ಅನುಮೋದಿಸುತ್ತಾನೆ. [ಪುಟ ೬೧ ಪಙ್ಕ್ತಿ 17-21]

"ಈ ಸಂವಿಧಾನವು ಆಶ್ಚರ್ಯಕರವಾದುದು. ಅದು ಹೇಗೆಂದರೆ :—ಯಾವ ರೀತಿ ಒಂದು ಜಲವು ಸುಳಿಗಳೆಂದೂ, ನೊರೆಗಳೆನುತಲೂ, ನಾನಾವಿಕಾರಂಗಳನ್ನೈದಿದರೂ ಅದೆಲ್ಲವೂ ಜಲವೇ ಹೊರತು ಮತ್ತೊಂದಲ್ಲವೋ, ಅದೇರೀತಿ ಒಂದು ಶೋಕ (ಕರುಣ) ವೆಂಬ ರಸವೇ ಒಂದೊಂದು ನಿಮಿತ್ತವಿಶೇಷದಿಂ ಭಿನ್ನಿಸಿ ನಾನಾಪ್ರಕಾರಂಗಳಾಗಿರುವ ರೂಪಾಂತರಂಗಳಂ ವಹಿಸುತ್ತಲಿದೆಯಲ್ಲವೆ?"

# ಉತ್ತರ ರಾಮಚರಿತ್ರ ಕಥೆಯ ವಿಷಯವಿವರಣಂ

# ಉತ್ತರ ರಾಮಚರಿತ್ರಕಥೆ.

---

ಭವಭೂತಿಯೆಂಬ ಮಹಾಕವಿಯು ಸ್ವಕೃತವಾದ ಮಹಾವೀರಚರಿತ್ರವೆಂಬ ನಾಟಕದಲ್ಲಿ ಪೂರ್ವರಾಮಚರಿತ್ರವಂ ಸರಸವಾಗಿ ನಿರೂಪಿಸಿ, ಪ್ರಕೃತದಲ್ಲಿ ಉತ್ತರ ರಾಮಚರಿತ್ರವಂ ನಿರೂಪಿಸಲೋಸುಗ ಉತ್ತರ ರಾಮಚರಿತ್ರವೆಂಬ ನಾಟಕವಂ ರಚಿಸುವವನಾಗಿ, ವಿಘ್ನವಿಲ್ಲದಂತೆ ತನ್ನ ಗ್ರಂಥವು ಸಮಗ್ರವಾಗಬೇಕೆಂದು ಮೊದಲು ಮಹಾಕವಿಪ್ರಣಾಮಪೂರ್ವಕವಾಗಿ ತನ್ನ ಇಷ್ಟದೇವತೆಯಂ ವಂದಿಸುವನದೆಂತೆನೆ :—

" ಇದಂಕವಿಭ್ಯಃ ಪೂರ್ವೇಭ್ಯೋ ನಮೋವಾಕಂ ಪ್ರಶಾಸ್ಮಹೇ |
ವನ್ದೇಮಹಿ ಚ ತಾಂ ವಾಣೀಮಮೃತಾಮಾತ್ಮನಃ ಕಲಾಂ ||"

ಸಾಂಪ್ರತ ವರ್ತಮಾನರಾದ ಮಹಾಕವಿಗಳಿಗೂ, ಪೂರ್ವಿಕರಾದ ಮಹಾಕವಿಗಳಿಗೂ ನಮಸ್ಕರಿಸಿದವನಾಗಿ ಪರಮಾತ್ಮನ ಶಕ್ತಿಸ್ವರೂಪಳಾಗಿ ಅಮೃತಸ್ವರೂಪಳಾಗಿಯೂ ಇರುವ ಸರಸ್ವತೀದೇವಿಯಂ ವಂದಿಸುವೆನು ಎಂಬದಾಗಿ.

ಕವಿಯಿಂ ರಚಿತವಾದ ಸರಸ್ವತಿಯ ಪ್ರಣಾಮರೂಪವಾದ ಈ ಮಂಗಳ ಶ್ಲೋಕಾರ್ಥದಲ್ಲಿ ಶಬ್ದಚಮತ್ಕಾರದಿಂ ಅರ್ಥಚಮತ್ಕಾರದಿಂದಲೂ ಸೂಚಿತವಾಗುವ ಈ ನಾಟಕದ ಕಥಾಭಾಗವೇನೆಂದರೆ :—

ಶ್ರೀರಾಮಸ್ವಾಮಿಯು ರಾವಣವಿಜಯಾನಂತರದಲ್ಲಿ ಅಖಂಡವಾಗಿ ಪೃಥ್ವೀಸಾಮ್ರಾಜ್ಯವನ್ನಾಳುತ ಗೂಢಚಾರರ ಮುಖದಿಂ ಒಂದಾನೊಂದು ಜನವಾರ್ತೆಯಂ ಕೇಳಿದುದಱಿಂದ, ತಾನು ಸೀತಾದೇವಿಯು ಪರಿಶುದ್ಧಳೆಂಬುದಂ ತಿಳಿದವನಾದರೂ ಲೋಕಾಪವಾದ ನಿಮಿತ್ತವಾಗಿ ಪೂರ್ಣಗರ್ಭಿಣಿಯಾದ ಸೀತಾದೇವಿಯಂ ವ್ಯಾಜಾಂತರದಿಂ ರಥವನ್ನೇಱಿಸಿ ಲಕ್ಷ್ಮಣನ ಮುಖಾಂತರವಾಗಿ ವಾಲ್ಮೀಕ್ಯಾಶ್ರಮದ ಸಮಿಪದಲ್ಲಿ ತ್ಯಾಗಂಗೈಸಿದವನಾಗಲು ; ಆ ಬಳಿಕ ಆಶ್ರಮವಾಸಿಗಳಾದ ವಾಲ್ಮೀಕಿಗಳ ಅನುಗ್ರಹದಿಂ ಶ್ರೀರಾಮಪತ್ನಿಯಾದ ಆ ಸೀತೆಯು ಕ್ಷೇಮಯುಕ್ತಳಾಗಿ ಪುತ್ರವತಿಯಾಗಿ ಪುನಃ ತನ್ನ ಪತಿಯ ಸಮಿಪವನ್ನೈದಿ ಚಂದ್ರನೊಡಗೂಡಿದ ಚಂದ್ರಿಕೆಯಂತೆ ಅತಿಪ್ರಕಾಶಮಾನಳಾಗಿ ಸುಖವನ್ನೈದುವಳು—ಎಂಬ ಈ ನಾಟಕದ ಕಥಾಭಾಗವು ಈ ಪದ್ಯದಲ್ಲಿ ಸಂಕ್ಷೇಪದಿಂ ಸೂಚಿತವಾಗುವುದು.

ಈ ರೀತಿ ವಾಚ್ಯ ಸೂಚ್ಯ ಎಂಬ ಉಭಯಾರ್ಥಗಳಿಂ ಶೋಭಿತವಾದ' ಮಂಗಳ ಶ್ಲೋಕವಂ ಕೇಳಿ ಸೂತ್ರಧಾರನು ನಾಟ್ಯರಂಗಸ್ಥಾನದಲ್ಲಿ ಪಠಿಸಿದವನಾಗಿ ಪೂರ್ವರಂಗದಲ್ಲಿ ನಿಂತವನಾಗಲು ; ಆ ಬಳಿಕ ಅದೇರೀತಿ ಮತ್ತೊಬ್ಬನಾದ ಸೂತ್ರಧಾರನು ನಾಟ್ಯಕ್ಕೆ ಉಪಯುಕ್ತರಾದ ತನ್ನ ಪರಿಜನರೊಡಗೂಡಿ ರಂಗಸ್ಥಾನವಂ ಪ್ರವೇಶಂಗೈದು

ಮಹಾಸಭೆಗೆ ಅಭಿಮುಖನಾಗಿ ನಿಂತು ಪುಷ್ಪಾಂಜಲಿಯಂ ಸಮರ್ಪಿಸಿ ರಂಗಪೂಜಾ ಪೂರ್ವಕವಾದ ನಾಟಕಕಥಾಪ್ರಸ್ತಾವಂಗೈದನದೆಂತೆನೆ :–" ಎಲೈ ಸಭಾನಾಯಕರಾದ ವಿದ್ವಾಂಸರೇ, ಸಾಂಪ್ರತ ಭಗವಂತನಾದ ಕಾಳಪ್ರಿಯನಾಥನೆಂಬ ಪರಮೇಶ್ವರನ ಈ ಮಹೋತ್ಸವಯಾತ್ರೆಯಲ್ಲಿ ಪೂಜ್ಯರಾದ ನಿಮ್ಮಂ ಕುಱಿತು ವಿಜ್ಞಾಪಿಸುವೆನು. ಪೂಜ್ಯ ರಾದ ನೀವು ಈ ರೀತಿ ನನ್ನ ವಿಜ್ಞಾಪನೆಯಂ ಚಿತ್ತವಿಸುವವರಾಗಬೇಕು. ಅದೇನೆಂದರೆ :– ಈ ಭೂಮಂಡಲದಲ್ಲಿ ಕಾಶ್ಯಪಗೋತ್ರೋತ್ಪನ್ನನಾಗಿ ಶಬ್ದಶಾಸ್ತ್ರವಂ ನ್ಯಾಯಶಾ ಸ್ತ್ರವಂ ಪೂರ್ವೋತ್ತರಮೀಮಾಂಸಾಶಾಸ್ತ್ರಂಗಳಂ ತಿಳಿದವನಾಗಿ ಇರುವ ಶ್ರೀಕಂಠ ಭವಭೂತಿಯೆಂಬ ಮಹಾಕವಿಯು ಇರುವನಲ್ಲವೆ. ವಾಗ್ದೇವಿಯಾದ ಸರಸ್ವತಿಯು ದ್ವಿಜೋ ತ್ತಮನಾದ ಯಾವ ಭವಭೂತಿಯೆಂಬ ಕವಿಯಂ ವಶ್ಯಳಾದಂತೆ ಅನುಸರಿಸಿಕೊಂಡಿಹಳೊ, ಅಂಥ ಪ್ರಸಿದ್ಧನಾದ ಭವಭೂತಿಯೆಂಬ ಮಹಾಕವಿಯಿಂದ ರಚಿತವಾದ ಉತ್ತರ ರಾಮ ಚರಿತ್ರವೆಂಬ ನಾಟಕವಂ ನಿಮ್ಮ ಸನ್ನಿಧಿಯಲ್ಲಿ ನಾನು ಅಭಿನಯಂಗೈಸುವೆನು. ಆದುದ ಱಿಂದ ನೀವು ನನ್ನಲ್ಲಿ ಅನುಗ್ರಹವನ್ನಿಟ್ಟು ಚಿತ್ತವಿಸಬೇಕು. ನಾನು ದೇಶಾಂತರಸ್ಥನಾ ದರೂ ಈಗ ಈಗ ಕವಿಕಲ್ಪಿತವಾದ ನಾಟಕದ ಕಥೆಯಿಂ ಅಯೋಧ್ಯಾಪಟ್ಟಣಸ್ಥನೂ, ಶ್ರೀರಾಮಸ್ವಾಮಿಯು ರಾಜ್ಯವನ್ನಾಳುವ ಕಾಲದಲ್ಲಿ ಸಹ ಇರುವವನೂ ಆಗುತ್ತಲಿ ದ್ದೇನೆ.'' ಎಂದು ಸಭೆಯಂ ಕುಱಿತು ವಿಜ್ಞಾಪಿಸಿ, ಕಥಾಘಟಕನಾದ ಆ ಸೂತ್ರಧಾರನು ಕಥೆಯಂ ಪ್ರಸ್ತಾವಂಗೈಸಲೋಸುಗ ಸುತ್ತಲೂ ನೋಡಿದವನಾಗಿ ಇಂತೆಂದನು :– " ಎಲೊ! ಎಲೊ! ನಟನೆ, ಪೂಜ್ಯನಾಗಿ ರಾವಣವಂಶಕ್ಕೆ ಕಾಲಾಗ್ನಿಯಾಗಿ ಮಹಾರಾ ಜನಾಗಿಯೂ ಇರುವ ಶ್ರೀರಾಮಸ್ವಾಮಿಯ ಈ ಪಟ್ಟಾಭಿಷೇಕಮಹೋತ್ಸವಕಾಲದಲ್ಲಿ ದಿವಾರಾತ್ರಿಗಳಲ್ಲಿಯೂ ಎಡಹಿಲ್ಲದಂತೆ ವಾದ್ಯಘೋಷಪೂರ್ವಕವಾಗಿ ಶುಭವ್ಯಾಪಾರಂ ಗಳು ನಡೆಯುತ್ತಲಿರುವುವು. ಈಗ ಏನುಕಾರಣ ರಾಜಗೃಹಂಗಳಲ್ಲಿ ರಾಜಭೃತ್ಯರ ಸಂಚಾರವು ನಿಂತು ಇದೆ ?'' ಎಂದು ಸೂತ್ರಧಾರನು ಪ್ರಶ್ನೆಗೈಯಲು ; ಆಗ ನಟನು ರಂಗಸ್ಥಾನವಂ ಪ್ರವೇಶಿಸಿ ಉತ್ತರವನ್ನಿತ್ತನು. " ಎಲೈ ಸೂತ್ರಧಾರನೆ, ಶ್ರೀರಾಮ ಸ್ವಾಮಿಯು ಲಂಕಾಪುರದಲ್ಲಿ ನಡೆದ ಮಹಾಯುದ್ಧದಲ್ಲಿ ಸಹಾಯರಾಗಿ ಮಹಾತ್ಮರಾ ಗಿಯೂ ಇರುವ ಸುಗ್ರೀವ ಮೊದಲಾದ ವಾನರರಂ, ವಿಭೀಷಣ ಮೊದಲಾದ ರಾಕ್ಷಸರಂ ಸಹ ತಮ್ಮ ತಮ್ಮ ಸ್ಥಾನಗಳಂ ಕುಱಿತು ಕಳುಹಿಸಿದವನಾದನು. ಮತ್ತು ಸ್ವಾಮಿಯಂ ಸೇವಿಸುವವರಾಗಿ ನಾನಾ ದೇಶಾಂತರಗಳಿಂದ ಬಂದಿದ್ದ ಬ್ರಹ್ಮಋಷಿಗಳೂ ದೇವರ್ಷಿ ಗಳೂ ರಾಜರ್ಷಿಗಳೂ ಸಹ ರಾಮಾಜ್ಞೆಯಿಂ ಸ್ವಸ್ಥಾನಂಗಳನ್ನೈದಿದರು. ಇಷ್ಟು ದಿನಗಳಲ್ಲಿಯೂ ದೇಶಾಂತರಂಗಳಿಂ ಬಂದಿರುವ ಆ ಜನರಂ ಸೇವಿಸಲೋಸುಗ ವಿಶೇಷ ವಾಗಿ ಉತ್ಸವವು ಬಳೆಯಿತು '' ಎಂಬದಾಗಿ ನಟನು ಪೇಳಲು ; ಅದಂ ಕೇಳಿ, ಸೂತ್ರಧಾರನು, ಈ ರೀತಿ ಮಹಾರಾಜದ್ವಾರದಲ್ಲಿ ವಿಶೇಷದಿಂ ಜನಸಂಚಾರವಿಲ್ಲದಿರುವು ದಕ್ಕೆ ಆ ಸುಗ್ರೀವಾದಿಗಳೆಲ್ಲರೂ ಹೊಱಟು ಹೋಗಿರುವುದೇ ಕಾರಣವಹುದೆಂದು ಸಮ್ಮತಿ ಸಲು ; ಮತ್ತು ನಟನು ಇಂತೆಂದನು. " ಎಲೈ ಸೂತ್ರಧಾರನೆ, ಇದಕ್ಕೆ ಮತ್ತೊಂದು ಕಾರಣವುಂಟು. ಅದೇನೆಂದರೆ–ಶ್ರೀರಾಮಮಾತೃಗಳಾದ ಕೌಸಲ್ಯಾದೇವಿ ಮೊದಲಾದ

ಮಹಾರಾಜಪತ್ನಿಯರು ವಸಿಷ್ಠರೊಡನೆ ಅವರ ಆಜ್ಞಾನುಸಾರವಾಗಿ ಅರುಂಧತೀದೇವಿಯಂ ಮುಂದಿಟ್ಟುಕೊಂಡು ಯಜ್ಞವಂ ನೋಡಲೋಸುಗ ಅಳಿಯನ ಆಶ್ರಮವಂ ಕುಱಿತು ತೆರಳಿಹೋದರು.'' ಎನ್ನಲು ; ಅದಂ ಕೇಳಿ ಸೂತ್ರಧಾರನಿಂತೆಂದನು :-'' ಎಲೈ ನಟನೆ, ನಾನು ದೇಶಾಂತರಸ್ಥನಾದುದಱಿಂದ ನಿನ್ನ ಕೇಳುವೆನು. ಈ ಮಹಾರಾಜಪತ್ನಿಯರುಗಳಿಗೆ ಅಳಿಯನೆಂಬವನು ಯಾರು ?'' ಎಂದು ಪ್ರಶ್ನೆಮಾಡಲು ನಟನು ಇಂತೆಂದನು. '' ಎಲೈ ಸೂತ್ರಧಾರನೆ, ಕೇಳು. ಪೂರ್ವದಲ್ಲಿ ದಶರಥಮಹಾರಾಯನು ಕೌಸಲ್ಯಾದೇವಿಯಲ್ಲಿ ಶಾಂತಾದೇವಿಯಂ ಪಡೆದವನಾಗಿ ಆ ಪುತ್ರಿಯಂ ತನಗೆ ಪರಮಮಿತ್ರನಾದ ರೋಮಪಾದರಾಯನಿಗೋಸುಗ ಇವಳು ನಿನಗೆ ಪುತ್ರಿಯಾಗುವಳೆಂದು ಕೊಟ್ಟನು. ಆ ಬಳಿಕ ರೋಮಪಾದರಾಯನ ಅರಮನೆಯಲ್ಲಿ ಪ್ರವರ್ಧಮಾನಳಾಗಿರುವ ಆ ಶಾಂತಾದೇವಿಯಂ ವಿಭಂಡಕನೆಂಬ ಮುನಿಗೆ ಪುತ್ರನಾದ ಋಷ್ಯಶೃಂಗನೆಂಬ ಮುನಿಯು ವಿವಾಹವಂ ಮಾಡಿಕೊಂಡನು. ಆದಕಾರಣ ಈ ಋಷ್ಯಶೃಂಗಮುನಿಯು ಕೌಸಲ್ಯಾದೇವಿ ಮೊದಲಾದ ಈ ಮಹಾರಾಜಪತ್ನಿಯರುಗಳಿಗೆ ಅಳಿಯನೆನಿಸಿಕೊಂಬನು. ಪ್ರಕೃತದಲ್ಲಿ ಆ ಋಷ್ಯಶೃಂಗಮುನಿಯು ದ್ವಾದಶವರ್ಷಸಾಧ್ಯವಾದ ಮಹಾಯಜ್ಞವಂ ಮಾಡಲೋಸುಗ ಸಂಕಲ್ಪಿಸಿದನು. ತನ್ನಿಮಿತ್ತವಾಗಿ ಪೂಜ್ಯರಾದ ಶ್ರೀರಾಮಮಾತೃಗಳೆಲ್ಲರು ಸೀತಾದೇವಿಯು ಪೂರ್ಣಗರ್ಭಿಣಿಯಾಗಿದ್ದಾಗ ಅಂಥ ಸೊಸೆಯಂ ಬಿಟ್ಟು ಆ ಅಳಿಯನ ಮಹಾಯಜ್ಞವಂ ನೋಡಬೇಕೆಂದು ಋಷ್ಯಶೃಂಗಾಶ್ರಮವಂ ಕುಱಿತು ಪೋದರು '' ಎಂದು ನಟನು ಪೇಳಲು ; ಸೂತ್ರಧಾರನಿಂತೆಂದನು. '' ಎಲೈ ನಟನೇ, ಈ ರಾಜಬಂಧುತ್ವ ವಿಚಾರದಿಂ ಫಲವೇನು ? ನಮ್ಮ ಜಾತಿಗೆ ಉಚಿತವಾದ ಸಂಪ್ರದಾಯದಿಂ ರಾಜದ್ವಾರದಲ್ಲೇ ಕಾದುಕೊಂಡಿರೋಣ, ಬಾರೈ.'' ಎಂದು ಪೇಳಲು ; ಆ ಸೂತ್ರಧಾರನ ವಚನವಂ ಕೇಳಿ ನಟನು ಇಂತೆಂದನು. '' ಎಲೈ ಭಾವನೇ, ನಾವು ಮಹಾರಾಜನಾದ ಶ್ರೀ ರಾಮಸ್ವಾಮಿಯ ದರ್ಶನವನ್ನಪೇಕ್ಷಿಸಿಕೊಂಡು ರಾಜದ್ವಾರದಲ್ಲಿ ಕಾದುಕೊಂಡಿರಬೇಕಾದಕಾರಣ ಶಬ್ದ ಶುದ್ಧಿಯಿಂ ಅರ್ಥಪುಷ್ಟಿಯಿಂದಲೂ ರಮಣೀಯವಾಗಿ ಮಹಾರಾಜನಂ ಭಜಿಸುವುದಕ್ಕೆ ಯೋಗ್ಯವಾಗಿಯೂ ಇರುವ ಸ್ತೋತ್ರಪ್ರಕಾರವಂ ನೀನು ನನಗೆ ತಿಳುಹಿಸುವನಾಗು.'' ಎಂಬ ನಟವಚನವಂ ಕೇಳಿ, ಸೂತ್ರಧಾರನಿಂತೆಂದನು. '' ಎಲೈ ನಾನಾವೇಷಭಾಷಾದಿಗಳಿಂ ಬಹುಮುಖವಾಗಿ ವಾದಂಗೈವ ನಮಗೆ ಎಂತು ಅಪವಾದವಿಲ್ಲದೆ ಪೋಗುವುದು ? ಯಾವ ರೀತಿ ಸ್ತ್ರೀಯರಲ್ಲಿ ಕೆಲಬರು ಪರಿಶುದ್ಧವಾಗಿ ಇದ್ದರೂ ಜನರು ಅವರ ವಿಷಯವಾಗಿ ಲೋಕದಲ್ಲಿ ಸ್ತ್ರೀಯರೆಂಬ ಅರ್ಥವನ್ನೇ ಮುಂದಕ್ಕೆ ತಂದು ಅವರ ಪತಿವ್ರತಾಧರ್ಮವಂ ಮುಂದಕ್ಕೆ ತಾರದೆ ಅಪವಾದವಂ ಕಲ್ಪಿಸಿ ದುರ್ಜನರಾಗುವರೊ, ಅದೇ ರೀತಿ ನಮ್ಮ ವಾಕ್ಕುಗಳು ಪರಿಶುದ್ಧಗಳಾಗಿ ಇದ್ದರೂ ಆ ಶಬ್ದಾರ್ಥಶುದ್ಧಿಯಂ ಶ್ಲಾಘಿಸುವರಾಗದೆ ನಮ್ಮ ನಟವಿಟಗಾಯಕತ್ವವನ್ನೇ ಮುಂದಕ್ಕೆ ತಂದು ಅಪವಾದವಂ ಕಲ್ಪಿಸಿ ದುರ್ಜನರಾಗುವರೇ ಹೊಱತು ಮತ್ತೊಂದಿಲ್ಲ '' ಎಂಬ ಸೂತ್ರಧಾರನ ವಚನವಂ ಕೇಳಿ ನಟನಿಂತೆಂದನು. '' ಎಲೈ ಸೂತ್ರಧಾರನೇ, ಇಂಥ ವಿಷಯದಲ್ಲಿ ಜನರು ಅತಿದುಷ್ಟರೆಂದು ಪೇಳತಕ್ಕುದು. ಅದೆಂತೆಂದರೆ :-ಜನಕರಾಯನ ಪುತ್ರಿಯಾದ ಸೀತಾದೇವಿಯ ವಿಷಯದಲ್ಲೂ ಸಹ

ಲಂಕಾಪುರದಲ್ಲಿ ಸಮಸ್ತ ದೇವತೆಗಳೂ ಸರ್ವಜನರೂ ಸಹ ನೋಡುತ್ತಿರಲು ಪ್ರತ್ಯಕ್ಷವಾಗಿ ಬಂದು ಅಗ್ನಿಯು ಶ್ರೀರಾಮಸ್ವಾಮಿಯಂ ಕುಱಿತು–ಎಲೈ ಸ್ವಾಮಿಯೆ, ಈ ಸೀತಾದೇವಿಯು ಮನೋವಾಕ್ಕಾಯಕರ್ಮಗಳಿಂದಲೂ ಪರಿಶುದ್ಧಳಾದವಳು. ಆದಕಾರಣ ಲಕ್ಷ್ಮೀ ಸ್ವರೂಪಳಾದ ಈ ಸೀತೆಯಂ ಪರಿಗ್ರಹಿಸುವನಾಗೆಂದು ಪೇಳಿದನೆಂಬ ಅರ್ಥದಲ್ಲಿ ನಿಶ್ಚಯವಿಲ್ಲದೆ ರಾವಣಗೃಹದಲ್ಲಿ ಪರಾಧೀನಳಾಗಿ ಸೀತೆಯು ಬಹುಕಾಲ ವಾಸಂಗೈದಳೆಂಬ ಅರ್ಥವನ್ನೇ ಮುಂದಕ್ಕೆ ಮುಂದಕ್ಕೆ ತಂದು ಅಪವಾದವಂ ಕಲ್ಪಿಸುತಲಿದ್ದಾರೆ. ಆದುದಱಿಂದ ಲೋಕದಲ್ಲಿ ಜನರು ಅತಿದುರ್ಜನರೇ ಸರಿ ಎಂದು ನಿಶ್ಚೈಸಿಸತಕ್ಕುದು " ಎಂಬ ನಟನ ವಾಕ್ಯವಂ ಕೇಳಿ ಸೂತ್ರಧಾರನಿಂತೆಂದನು. " ಎಲೈ, ಜನವಾರ್ತೆಯು ಒಂದು ವೇಳೆ ಮಹಾರಾಜನಾದ ಶ್ರೀರಾಮಸ್ವಾಮಿಗೆ ಶ್ರುತವಾದಲ್ಲಿ ಅತಿಪ್ರಮಾದ ಉಂಟಾಗುವುದು. ಆದರೂ ಸರ್ವಪ್ರಕಾರಗಳಿಂ ಋಷಿಗಳು ಶ್ರೇಯಸ್ಸನ್ನುಂಟುಮಾಡುತ್ತಾರೆ " ಎಂದು ಹೇಳಿ, ತಿರಿಗಿದವನಾಗಿ, ಈಗ ಮಹಾರಾಜನು ಎಲ್ಲಿರುವನೆನ್ನುತ ಆಕಾಶದಲ್ಲಿ ಶ್ರವಣಂಗೈದು, " ಜನರು ಹೀಗೆನ್ನುತ್ತಾರೆ ; ಅದೇನೆಂದರೆ–ಮಗಧ ದೇಶಾಧಿಪತಿಯಾದ ಜನಕರಾಯನು ಸ್ನೇಹಾನುಬಂಧದಿಂ ಸೀತಾಸಮೇತನಾದ ಶ್ರೀರಾಮಸ್ವಾಮಿಯ ಪಟ್ಟಾಭಿಷೇಕಮಹೋತ್ಸವವಂ ನಡೆಯಿಸಿ ಸಂತೋಷಪಡಲೋಸುಗ ಅಯೋಧ್ಯೆಗೆ ಬಂದು ಇಲ್ಲಿ ನಿತ್ಯೋತ್ಸವಗಳಿಂ ಬಹುದಿನಗಳಂ ಕಳೆದು ಪುನಃ ಮಿಥಿಲಾಪುರವಂ ಕುಱಿತು ತೆರಳಿಪೋದನಾದುದಱಿಂದ ವ್ಯಸನಯುಕ್ತಳಾಗಿರುವ ಸೀತಾದೇವಿಯಂ ಸಮಾಧಾನವಂ ಪಡಿಸಲೋಸುಗ ಸಿಂಹಾಸನದಿಂ ಎದ್ದವನಾಗಿ ಶ್ರೀರಾಮಸ್ವಾಮಿಯು ಅಂತಃಪುರವಂ ಪ್ರವೇಶಂಗೈಯುತ್ತಾನೆಂದು ಜನರು ಪೇಳುತ್ತಾರೆ."

ಎಂಬದಾಗಿ ಪೇಳುತ ಸೂತ್ರದಾರನು ಈ ರೀತಿ ತಾನು ಅಭಿನಯಂಗೈಸುವ ನಾಟಕಕಥೆಯ ಪೂರ್ವೋತ್ತರಸಂದರ್ಭಗಳಂ, ಪ್ರಕೃತದಲ್ಲಿ ಕಥಾನಾಯಕನಾದ ಶ್ರೀರಾಮನು ರಂಗಸ್ಥಾನವಂ ಪ್ರವೇಶಿಸುವ ಸಂಗತಿಯಂ ಸಹ ನಟನೊಡಗೂಡಿ ಪ್ರಶ್ನೋತ್ತರವಚನಗಳಂ ಪೇಳುವುದಱಿಂ ಪ್ರಸ್ತಾವಂಗೈದು, ರಂಗಸ್ಥಾನದಲ್ಲಿ ಪರಿವಾರಸಹಿತನಾಗಿ ಸಭಾಸ್ಥಾನಕ್ಕೆ ಅಭಿಮುಖನಾಗಿ ನಿಂತು ನಾಟಕಾಭಿನಯವಂ ಮಾಡಿಸುವುದಱಲ್ಲಿ ಉದ್ಯುಕ್ತನಾಗುತ್ತಿರಲು–

ಆ ಬಳಿಕ ಅಂತಃಪುರದಲ್ಲಿ ನವರತ್ನಮಯವಾದ ಮಂಚದಲ್ಲಿ ಶ್ರೀರಾಮಸ್ವಾಮಿಯು ಕುಳಿತಿರುವನಾಗಿ ಅದೇ ರೀತಿ ಸೀತಾದೇವಿಯು ಕೂಡ ಇವರಿರ್ವರು ರಂಗಸ್ಥಲವಂ ಪ್ರವೇಶಂಗೈವರಾಗಲು ;

ಆಗ ತಂದೆಯಾದ ಜನಕರಾಯನು ಸ್ವಾಮಿಯಿಂ ಬಹುಮಾನಿತನಾಗಿ ಅಯೋಧ್ಯಾಪಟ್ಟಣದಿಂ ಸ್ವದೇಶವಂ ಕುಱಿತು ತೆರಳಿಪೋದನೆಂದು ವ್ಯಸನಯುಕ್ತಳಾಗಿ ಇರುವ ಸೀತೆಯಂ ಶ್ರೀರಾಮನು ಸಮಾಧಾನಪಡಿಸುವ ಕ್ರಮವೆಂತೆನೆ :–" ಎಲೌ ಪ್ರಿಯಳೆ, ಚಿತ್ತವಂ ಸಂತೈಸು ಸಂತೈಸು. ಆ ಗುರುಜನರಾದವರು ನಮ್ಮಂ ಬಿಟ್ಟು ಪೋಗಲು ಸಮರ್ಥರಾಗುವರೆ ? ಸಮರ್ಥರಲ್ಲ. ಮತ್ತೇನೆಂದರೆ, ಶ್ರುತ್ಯುಕ್ತಗಳಾದ ಕರ್ಮಾನುಷ್ಠಾನಂಗಳು ನಿತ್ಯಗಳಾದುದಱಿಂದ ಆಹಿತಾಗ್ನಿಗಳಾದ ಪುರುಷರ ಸ್ವತಂತ್ರತ್ವವಂ ಪರಿಹರಿಸುವುವು.

ಅಂಥ ನಿತ್ಯಕರ್ಮಂಗಳಂ ತ್ಯಜಿಸುವರಾದಲ್ಲಿ ಪ್ರತ್ಯವಾಯಂಗಳು ಸಂಭವಿಸುವುವಾದಕಾರಣ ಶ್ರದ್ಧಾವಂತರಾಗಿರುವ ಪುರುಷರಿಗೆ ಗೃಹಸ್ಥಾಶ್ರಮವು ಮಹಾಕಷ್ಟವಲ್ಲವೆ. ನಿಮ್ಮ ತಂದೆಯಾದ ಜನಕರಾಯನು ಸ್ವಕರ್ಮಾನುಷ್ಠಾನಗಳಿಂ ಪರವಶನಾದುದಱಿಂದ ಸ್ವತಂತ್ರನಲ್ಲದೆ ಪ್ರೇಮಪಾತ್ರರಾದ ನಮ್ಮಂ ಬಿಟ್ಟು ಮಿಥಿಲಾಪುರವಂ ಕುಱಿತು ಪೋದನೇ ಹೊಱತು ಮತ್ತೊಂದಿಲ್ಲವಾದುದಱಿಂ ನೀನು ವಿಶೇಷವಾಗಿ ವ್ಯಸನಪಡಬೇಡ.'' ಎಂದು ಶ್ರೀರಾಮನು ಪೇಳಲು, ಸೀತೆಯು ಇಂತೆಂದಳು :–'' ಎಲೈ, ಪ್ರಾಣಕಾಂತನಾದ ಸ್ವಾಮಿಯು ನಿರೂಪಿಸಿದ ಅರ್ಥವಂ ನಾನು ತಿಳಿಯುವೆನು. ಮತ್ತೇನೆಂದರೆ, ಪೂಜ್ಯರಾಗಿ ಪ್ರಿಯಬಂಧುಗಳಾಗಿಯೂ ಇರುವ ಇಂಥ ಜನಗಳ ವಿಯೋಗಂಗಳು ಬಹುಪ್ರಕಾರಗಳಿಂ ಸಂತಾಪಪಡಿಸುವುವಾದ ಕಾರಣ ನಾನು ವ್ಯಸನಪಡುವೆನು.'' ಎನಲು ; ಅದಂ ಕೇಳಿ ಶ್ರೀರಾಮನಿಂತೆಂದನು :–'' ಎಲೌ ಪ್ರಿಯಳೆ, ಇಂಥ ಇಷ್ಟಬಂಧುಗಳಂ ಬಿಟ್ಟಿರುವುದು ಸಹಿಸಲು ಶಕ್ಯವಲ್ಲ. ಯುಕ್ತವೇ ಸರಿ. ಲೋಕದಲ್ಲಿ ಈ ಸಂಸಾರಧರ್ಮಗಳು ಹೃದಯಮರ್ಮಸ್ಥಾನಂಗಳಂ ಭೇದಿಸುವುವಲ್ಲವೆ. ಅದುಕಾರಣ ಜ್ಞಾನಿಗಳು ಸಂಸಾರದಲ್ಲಿ ನಾನಾ ಕ್ಲೇಶಂಗಳನ್ನನುಭವಿಸಿ ಸುಖಲೇಶವನ್ನಾದರೂ ಕಾಣದೆ ಇನ್ನು ಸಂಸಾರ ಸಾಕೆಂದು ಬೇಸಱಿಕೆಯಿಂ ವ್ಯಾಕುಲಚಿತ್ತರಾಗಿ ಸಮಸ್ತಕಾಮಂಗಳಂ ತ್ಯಾಗಂಗೈದು ಅರಣ್ಯದಲ್ಲಿ ವಾಸಂಗೈಯುತ ವಿಶ್ರಾಂತಿಸುಖವನ್ನನುಭವಿಸುತ್ತಲಿದ್ದಾರೆ '' ಎಂದು ಸ್ವಾಮಿಯು ಸೀತೆಯಂ ಸಮಾಧಾನಪಡಿಸುತ್ತಲಿರಲು ;

ಅಷ್ಟಱೊಳಗೆ ಅಂತಃಪುರದಲ್ಲಿ ಸಂಚಾರಯೋಗ್ಯನಾದ ವೃದ್ಧನಾದ ದ್ವಾರಪಾಲಕನು ಪ್ರವೇಶಂಗೈದು ಕೈಮುಗಿದು, '' ಸರ್ವೋತ್ಕೃಷ್ಟನಾಗಿರಲಿ ರಾಮಭದ್ರನು !'' ಎಂಬ ಅರ್ಧವಚನದಲ್ಲೇ ಭಯಯುಕ್ತನಾಗಿ, ಪುನಃ '' ಎಲೈ ಮಹಾರಾಜನೇ '' ಎಂದು ಪೇಳಿದವನಾಗಲು; ಆಗ ಶ್ರೀರಾಮನು ನಗುತ್ತಲಿಂತೆಂದನು:–'' ಎಲೈ ದ್ವಾರಪಾಲಕನೇ, ಬಹುಕಾಲದಿಂ ಮಹಾರಾಜನಾದ ನಮ್ಮ ತಂದೆಗೆ ಪರಿಜನವಾಗಿ ವೃದ್ಧನಾಗಿಯೂ ಇರುವ ನೀನು ನನ್ನಂ ಕುಱಿತು ರಾಮಭದ್ರ ಎಂದು ಕರೆವುದೇ ಉಪಚಾರವಾಗಿ ತೋಱುತ್ತಲಿದೆಯಾದುದಱಿಂದ ಇದುವರೆಗೂ ನಿನಗೆ ಹೇಗೆ ಅಭ್ಯಾಸವೊ ಹಾಗೆ ಎನ್ನಂ ಕರೆಯುವನಾಗು '' ಎಂದು ಸ್ವಾಮಿಯು ಪೇಳಲು ; ಆ ದ್ವಾರಪಾಲಕನು ಕೈಮುಗಿದು, '' ಋಷ್ಯಶೃಂಗಾಶ್ರಮದಿಂದ ಅಷ್ಟಾವಕ್ರನೆಂಬ ಮಹಾಮುನಿಯು ಬಂದು ದ್ವಾರದಲ್ಲಿ ನಿಂತಿಹನು '' ಎಂದು ವಿಜ್ಞಾಪಿಸಿದನು. ಅದಂ ಕೇಳಿ ಸೀತಾದೇವಿಯು, ಪೂರ್ಣಗರ್ಭಿಣಿಯಾಗಿರುವ ತನ್ನಲ್ಲಿ ಪರಮವಾತ್ಸಲ್ಯದಿಂ ಅತ್ತೆಯರಾದ ಕೌಸಲ್ಯಾದೇವಿ ಮೊದಲಾದ ದೇವಿಯರು ತನ್ನಂ ಕುಱಿತು ಈ ಋಷಿಮುಖಾಂತರದಿಂ ಏನು ವೃತ್ತಾಂತವಂ ಪೇಳಿ ಕಳುಹಿಸಿದ್ದಾರೆಯೋ, ಎಂಬ ಕುತೂಹಲದಿಂದ–'' ಏನುಕಾರಣ ಈ ಋಷಿಯು ಒಳಗೆ ಬರುವುದಕ್ಕೆ ವಿಳಂಬ ''ವೆನಲು ; ರಾಮಸ್ವಾಮಿಯು ಸೀತಾದೇವಿಯ ಕುತೂಹಲವಂ ನೋಡಿ ಅಷ್ಟಾವಕ್ರಮುನಿಯಂ ಅತಿಶೀಘ್ರದಿಂ ಪ್ರವೇಶಂಗೈಸುವನಾಗೆಂದು ದ್ವಾರಪಾಲಕನಿಗೆ ಆಜ್ಞಾಪಿಸಲು ; ಆ ದ್ವಾರಪಾಲಕನು–'' ಹಾಗೆ ಆಗಲಿ '' ಎಂದು ಹೊರಟು ಹೋದನು.

ಆಗ ಅಷ್ಟಾವಕ್ರಮುನಿಯು ಅಲ್ಲಿಗೆ ಪ್ರವೇಶಂಗೈದು, "ನಿಮಗೆ ಶುಭವಾಗಲಿ!" ಎಂದು ದಂಪತಿಗಳಿಗೆ ಆಶೀರ್ವಾದವಂ ಮಾಡಲು ; ಶ್ರೀರಾಮನು, "ಎಲೈ ಪೂಜ್ಯನಾದ ಮುನಿಯೇ, ನಾನು ನಿನಗೆ ವಂದಿಸುವೆನು. ಈ ಪೀಠದಲ್ಲಿ ಕುಳಿತಿರುವನಾಗು." ಎನಲು; ಅದೇರೀತಿ ಸೀತೆಯು—ನಿನಗೆ ನಮಸ್ಕಾರವು ಎಂದು ಮುನಿಗೆ ನಮಿಸಿ, "ಅಳಿಯನಾದ ಋಷ್ಯಶೃಂಗಮುನಿಯೊಡಗೂಡಿರುವ ನಮ್ಮ ಗುರುಜನರಿಗೆ ಕುಶಲವೇ ಏನು?" ಎಂದು ಪ್ರಶ್ನೆ ಮಾಡಲು ; ಆಗ ಸ್ವಾಮಿಯು ಆ ಮುನಿಯಂ ಕುಱಿತು—"ನಮ್ಮ ಭಾವಾಜಿಯಾಗಿ ಪೂಜ್ಯನಾಗಿಯೂ ಇರುವ ಋಷ್ಯಶೃಂಗಮುನಿಯು ನಿರ್ವಿಘ್ನವಾಗಿ ಮಹಾಯಜ್ಞದಲ್ಲಿ ಸೋಮಪಾನವಂ ಮಾಡಿದನೆ ಏನು? ನಮ್ಮ ಅಕ್ಕಯ್ಯನವರಾದ ಶಾಂತಾದೇವಿಯು ಸಹ ಪತಿಯೊಡಗೂಡಿ ವಿಘ್ನವಿಲ್ಲದೆ ಸೋಮಪಾನವಂ ಗೈದಳೇ ಏನು?" ಎಂದು ಪ್ರಶ್ನೆ ಮಾಡಲಾಗಿ ; ಪುನಃ ಸೀತೆಯು—"ಇಲ್ಲಿರುವ ನಮ್ಮಂ ಆ ಗುರುಜನರು ಸ್ಮರಿಸುವರೊ ಏನು? ಎನಲಾಗಿ ; ಅಷ್ಟಾವಕ್ರಮುನಿಯು ಪೀಠದಲ್ಲಿ ಕುಳಿತವನಾಗಿ, ಸೀತೆಯಂ ಕುಱಿತು—"ಎಲೌ ಭಾಗ್ಯವತಿಯೇ, ನಿಮ್ಮ ಗುರುಜನರೆಲ್ಲರು ಕ್ಷೇಮಯುಕ್ತರಾಗಿ ಸರ್ವಕಾಲದಲ್ಲೂ ನಿಮ್ಮನ್ನೇ ಸ್ಮರಿಸುತ್ತಲಿದ್ದಾರೆ. ಎಲೌ ಮಹಾರಾಜಪತ್ನಿಯೇ, ನಿಮ್ಮ ಕುಲಗುರುವಾದ ಪೂಜ್ಯನಾದ ವಸಿಷ್ಠಮಹಾಮುನಿಯು ನಿನ್ನಂ ಕುಱಿತು ನಿರೂಪಿಸಿದನದೇನೆಂದರೆ :—ಎಲೌ ಪುತ್ರಿಯೇ, ಸಕಲಪ್ರಾಣಿಗಳಿಗೆ ಆಧಾರಳಾಗಿ ಪೂಜ್ಯಳಾಗಿಯೂ ಇರುವ ಭೂಮಿದೇವಿಯು ನಿನ್ನಂ ಪೆತ್ತಳು. ನಿನ್ನ ತಂದೆಯಾದ ಜನಕರಾಯನಾದರೋ ಜ್ಞಾನಿಗಳಲ್ಲಿ ಸಾಕ್ಷಾತ್ ಬ್ರಹ್ಮನಿಗೆ ಸಮಾನನಾಗಿಹನು. ಮತ್ತು ಯಾವ ಮಹಾರಾಜವಂಶಕ್ಕೆ ಸೂರ್ಯನು ಮೂಲಪುರುಷನಾದುದಱಿಂದ ಗುರುವಾಗಿಹನೊ, ಪುರೋಹಿತನಾಗಿರುವುದಱಿಂದ ನಾನು ಗುರುವಾಗಿರುವೆನೊ, ಅಂಥ ರಘುವಂಶಸ್ಥರಾದ ಅರಸುಗಳಿಗೆ ನೀನು ಸೊಸೆಯಾಗಿರುವೆಯಾದಕಾರಣ ಲೋಕದಲ್ಲಿ ನಿನ್ನಂ ಪೋಲುವ ಭಾಗ್ಯವತಿಯಿಲ್ಲವಾದುದಱಿಂದ ನಿನ್ನ ವಿಷಯವಾಗಿ ನಾವು ಆಶೀರ್ವಾದಮಾಡತಕ್ಕುದು ಮತ್ತೊಂದು ಏನು ಇದೆ? ಸುಖದಿಂ ನೀನು ಮಹಾವೀರರಾದ ಪುತ್ರರಂ ಪಡೆವಳಾಗು! ಎಂದು ವಸಿಷ್ಠರು ನಿನ್ನಂ ಕುಱಿತು ಪೇಳಿದರು" ಎಂದು ಸೀತೆಯಂ ಕುಱಿತು ಅಷ್ಟಾವಕ್ರಮುನಿಯು ಪೇಳಲು ; ಶ್ರೀರಾಮಸ್ವಾಮಿಯು ಸೀತೆಯಂ ಕುಱಿತು—"ಎಲೌ ಪ್ರಿಯಳೇ, ನಾವು ವಸಿಷ್ಠರಿಂ ಅನುಗ್ರಹಿಸಲ್ಪಟ್ಟವರಾದೆವು. ಅದು ಹೇಗೆಂದರೆ :—ಲೋಕದಲ್ಲಿ ಸಾಧಾರಣವಾಗಿರುವ ಪುರುಷರ ವಾಕ್ಕುಗಳು ಅರ್ಥಗಳಂ ಅನುಸರಿಸಿಕೊಂಡು ಮುಖದಿಂ ಹೊಱಡುವುವು. ಪೂರ್ವಿಕರಾದ ಮಹರ್ಷಿಗಳ ವಾಕ್ಕುಗಳನ್ನಾದರೋ ಅರ್ಥಗಳು ತಾವೇ ಅನುಸರಿಸಿಕೊಂಡು ಪ್ರಾಪ್ತಳಾಗುವುವು. ಆದಕಾರಣ ಮಹರ್ಷಿಗಳಾದ ವಸಿಷ್ಠರ ವಾಕ್ಯಬಲದಿಂ ನೀನು ಮಹಾವೀರರಾದ ಪುತ್ರರಂ ಪಡೆವುದಱಲ್ಲಿ ಸಂದೇಹವಿಲ್ಲ" ಎಂದು ಶ್ರೀ ರಾಮನು ಪೇಳಲು. ಪುನಃ ಅಷ್ಟಾವಕ್ರಮುನಿಯು ಇಂತೆಂದನು. "ಎಲೈ ಸ್ವಾಮಿಯೇ, ನಿಮ್ಮ ಗುರುಪತ್ನಿಯಾದ ಪೂಜ್ಯಳಾದ ಅರುಂಧತೀದೇವಿಯು ಮಹಾಮಾತೃಶ್ರೀಗಳಾದ ಕೌಸಲ್ಯಾದೇವಿ ಮೊದಲಾದ ಮಹಾರಾಜಪತ್ನಿಯರು ನಿಮ್ಮ ಅಕ್ಕಯ್ಯನವರಾದ ಶಾಂತಾದೇವಿಯು ಸಹ ನಿನ್ನಂ ಕುಱಿತು ಬಾರಿಬ್ಬಾರಿಗೂ ಈ ಅರ್ಥವನ್ನಾಜ್ಞಾಪಿಸಿದರು. ಅದೇನೆಂದರೆ : ನಮಗೆ ವಾತ್ಸಲ್ಯಪಾತ್ರಳಾದ ಸೀತಾದೇವಿಯು ಪೂರ್ಣಗರ್ಭಿಣಿಯಾಗಿ

ರುವಳಾದಕಾರಣ ಒಂದು ವೇಳೆ ಮನೋರಥಂಗಳನ್ನೇನಾದರೂ ಬಯಸಿದವಳಾದರೆ ಆ ಕ್ಷಣದಲ್ಲೇ ಆ ಸೀತಾಮನೋರಥವಂ ಪೂರ್ತಿಗೈವನಾಗು '' ಎಂದು ಆಜ್ಞಾಪಿಸಿದರೆಂದು ಮುನಿಯು ಪೇಳಲು ; ಅದಂ ಕೇಳಿ, '' ಹಾಗೆ ಆಗಲಿ. ಈ ಪ್ರಿಯಳು ಯಾವುದನ್ನಪೇಕ್ಷಿಸುವಳೋ ಅದನ್ನಾಕ್ಷಣವೇ ಭೋಗಿಸುವಂತೆ ಮಾಡುವೆನು '' ಎಂದು ಶ್ರೀರಾಮನು ಪೇಳಿದನು. ಪುನಃ ಅಷ್ಟಾವಕ್ರಮುನಿಯು ಸೀತಾದೇವಿಯಂ ಕುಱಿತು ಇಂತೆಂದನು. '' ಎಲೌ ಪುಣ್ಯವತಿಯೇ, ನಿನಗೆ ಅತ್ತಿಗೆಯಾದ ಶಾಂತಾದೇವಿಗೆ ಪತಿಯಾದ ಋಷ್ಯಶೃಂಗ ಮುನಿಯು ನಿನ್ನಂ ಕುಱಿತು ಆಜ್ಞಾಪಿಸಿದನದೇನೆಂದರೆ :—ಎಲೌ ಮಗಳೆ, ನೀನು ಪೂರ್ಣ ಗರ್ಭಿಣಿಯಾಗಿರುವೆಯಾದುದಱಿಂದ ನಮ್ಮ ಯಜ್ಞಾರ್ಥವಾಗಿ ಇಲ್ಲಿಗೆ ನಾವು ನಿನ್ನಂ ಕರೆದುಕೊಂಡು ಬರಲಿಲ್ಲ. ಮತ್ತು ನಿನಗೆ ಬೇಸಱಿಕೆ ಇಲ್ಲದಂತೆ ಚಿತ್ತವಂ ಸಮಾಧಾನಪಡಿಸಲೋಸುಗ ಚಿರಂಜೀವಿಯಾದ ಶ್ರೀರಾಮನನ್ನು ಕೂಡ ಅಲ್ಲಿಯೇ ಇರುವಂತೆ ಆಜ್ಞಾಪಿಸಿದೆವು. ಆದುದಱಿಂದ ಮಹಾವೀರರಾದ ಪುತ್ರರಂ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಲಾಲಿಸುವಳಾಗಿ ಆಯುಷ್ಮಂತಳಾಗಿಯೂ ಇರುವ ನಿನ್ನಂ ನಾವು ನೋಡುತ್ತೇವೆಂದು ನಿನ್ನಂ ಕುಱಿತು ಋಷ್ಯಶೃಂಗಮುನಿಯು ಆಜ್ಞಾಪಿಸಿದನು.'' ಎಂದು ಅಷ್ಟಾವಕ್ರಮುನಿಯು ಪೇಳಲು ; ಅದಂ ಕೇಳಿ ಶ್ರೀರಾಮನು ಕುತೂಹಲದಿಂ ಮುಗುಳುನಗೆಯಿಂದಲೂ ಯುಕ್ತನಾಗಿ '' ಹಾಗೆ ಆಗಲಿ '' ಎಂದು ಋಷ್ಯಶೃಂಗಮುನಿಯ ಆಶೀರ್ವಾದವಂ ಪರಿಗ್ರಹಿಸಿ, '' ಪೂಜ್ಯರಾದ ವಸಿಷ್ಠರು ನನ್ನಂ ಕುಱಿತು ಬುದ್ಧಿವಚನವಂ ಸ್ವಲ್ಪವಾದರೂ ಆಜ್ಞಾಪಿಸಿದವರಾಗಲಿಲ್ಲವೆ ? '' ಎಂದು ಕೇಳಲು ; ಅಷ್ಟಾವಕ್ರಮುನಿಯು ಇಂತೆಂದನು. '' ಎಲೈ ಸ್ವಾಮಿಯೇ, ನಿನ್ನಂ ಕುಱಿತು ವಸಿಷ್ಠಮುನಿಯ ಆಜ್ಞಾವಚನವಂ ಕೇಳುವನಾಗು. ಅದೇನೆಂದರೆ—ಎಲೈ ರಾಮನೆ, ನಾವು ಅಳಿಯನಾದ ಋಷ್ಯಶೃಂಗಮುನಿಯ ಯಜ್ಞವು ಪೂರ್ತಿಯಾಗುವ ಪರ್ಯಂತವು ಇಲ್ಲೇ ವಾಸಂಗೈಯುವರಾಗಿ ಇದ್ದೇವೆ. ನೀನು ಬಾಲಕನೇ ಹೊಱತು ಪ್ರಬುದ್ಧನಲ್ಲ. ಇದಲ್ಲದೆ ರಾಜ್ಯಾಧಿಪತ್ಯವು ನೂತನವಾಗಿದೆ. ಆದರೂ ಇಕ್ಷ್ವಾಕುಮಹಾರಾಯನ ವಂಶದಲ್ಲಿ ಜನಿಸಿರುವ ನಿನಗೆ ಕೀರ್ತಿಯೇ ಧನವಾಗುವುದೇ ಹೊಱತು ಸುವರ್ಣರತ್ನಾದಿಗಳು ಧನವಲ್ಲವಾದಕಾರಣ ನೀನು ಸಮಸ್ತರಾದ ಪ್ರಜೆಗಳ ಮನೋರಂಜನವಂ ಮಾಡುವುದಱಲ್ಲಿಯೇ ಉದ್ಯುಕ್ತನಾಗಿ ಇರು '' ಎಂಬದಾಗಿ ವಸಿಷ್ಠರು ಆಜ್ಞಾಪಿಸಿದರು '' ಎಂದು ಮುನಿ ಪೇಳಲು ; ಅದಂ ಕೇಳಿ ಶ್ರೀರಾಮನಿಂತೆಂದನು :—'' ಪೂಜ್ಯರಾದ ವಸಿಷ್ಠರು ಯಾವ ರೀತಿ ಆಜ್ಞಾಪಿಸುವರೊ ಅದೇ ರೀತಿ ನಾನು ಅರ್ಥಲೋಭವಿಲ್ಲದವನಾಗಿ ಸಮಸ್ತ ಪ್ರಜೆಗಳ ಮನೋರಂಜನವಂ ಮಾಡುವುದಱಲ್ಲೇ ಉದ್ಯುಕ್ತನಾಗಿರುವೆನು. ಮತ್ತು ಈ ಜನರ ಮನಸ್ಸಂತೋಷಾರ್ಥವಾಗಿ ಇಷ್ಟಬಂಧುಗಳಲ್ಲಿ ಸ್ನೇಹವಂ, ಭೂತಗಳಲ್ಲಿ ದಯೆಯಂ, ನನ್ನ ವಿಷಯದಲ್ಲಿ ಸೌಖ್ಯವಂ, ಕೊನೆಗೆ ಪರಮಪ್ರೇಮವಿಷಯಳಾದ ಸೀತೆಯನ್ನಾದರೂ ನಾನು ತ್ಯಾಗಂಗೈವನೇ ಹೊಱತು ಈ ವಿಷಯವಾಗಿ ಪುನಃ ವ್ಯಸನಪಡುವನಲ್ಲ '' ಎಂಬ ಶ್ರೀರಾಮವಚನವಂ ಕೇಳಿ ಸೀತಾದೇವಿಯು ಇಂತೆಂದಳು .—'' ಎಲೈ ಸ್ವಾಮಿಯೇ, ಈ ರೀತಿ ನೀನು ಸಮಸ್ತ ಜನಮನೋರಂಜನವಂ ಮಾಡುವುದಱಲ್ಲಿ ಉದ್ಯುಕ್ತನಾಗಿರುವುದಱಿಂದಲೇ ರಘುವಂಶಸ್ಥರಾದ ರಾಜ

ಶ್ರೇಷ್ಠರ ಪ್ರಜಾಪಾಲನಭಾರವಂ ಸಹಿಸುವನಾಗುತ್ತೀಯೆ.'' ಎಂದು ನುಡಿಯಲು; ಶ್ರೀರಾಮನು ಸೀತಾಸಮೇತನಾಗಿ ಅಳಿಯನ ಯಜ್ಞಾರ್ಥವಾಗಿ ಪೋಗಿರುವ ಗುರು ಜನರ ಕ್ಷೇಮವೃತ್ತಾಂತವಂ ಅವರಿಂದ ಆಜ್ಞಾಪಿಸಲ್ಪಟ್ಟ ಬುದ್ಧಿವಚನಗಳಂ ಸಹ ಕೇಳಿದ ವನಾಗಿ ದೂರದೇಶದಿಂ ಬಂದಿರುವ ಅಷ್ಟಾವಕ್ರಮುನಿಯು ವಿಶ್ರಮಿಸುವುದಕ್ಕೋಸ್ಕರ ಪರಿಜನವಂ ಆಜ್ಞಾಪಿಸಿದವನಾದನು. ಆಗಲೇ ಮುನಿಯು ಪೀಠದಿಂ ಎದ್ದವನಾಗಿ ತಿರಿಗಿಕೊಂಡು, '' ಎಲೈ, ಚಿರಂಜೀವಿಯಾದ ಲಕ್ಷ್ಮಣನು ಬಂದನು.'' ಎಂದು ಪೇಳಿ ಅಲ್ಲಿಂದ ವಿಶ್ರಮಿಸುವುದಕ್ಕೋಸ್ಕರವಾಗಿ ಹೊಱಟು ಹೋದವನಾಗಲು ;

ಆಗ ಲಕ್ಷ್ಮಣಸ್ವಾಮಿಯು ಅಲ್ಲಿಗೆ ಪ್ರವೇಶಂಗೈದು, '' ಪೂಜ್ಯನಾದ ಸ್ವಾಮಿಯು ಸರ್ವೋತ್ಕೃಷ್ಟನಾಗಿರಲಿ! '' ಎಂದು ಅಣ್ಣನಿಗೆ ವಂದಿಸಿದವನಾಗಿ ಇಂತೆಂದನು. '' ಎಲೈ ಸ್ವಾಮಿಯೇ, ನಮ್ಮ ಅಜ್ಞಾನುಸಾರವಾಗಿ ಈ ಅಂತಃಪುರದ ಬೀದಿಯಲ್ಲಿ ಪೂಜ್ಯನಾದ ನಿನ್ನ ಚರಿತ್ರೆಯಂ ಈ ಚಿತ್ರಪಠದಲ್ಲಿ ರಮಣೀಯವಾಗಿ ಬರೆದು ಇದ್ದಾನೆಯಾದುದಱಿಂದ ಅದಂ ಸ್ವಾಮಿಯು ನೋಡಬೇಕು '' ಎಂದು ಲಕ್ಷ್ಮಣನು ವಿಜ್ಞಾಪನಂಗೈಯಲು; ಅದಂ ಕೇಳಿ ಶ್ರೀರಾಮನು ಸಂತೋಷದಿಂ, '' ಎಲೈ ಲಕ್ಷ್ಮಣನೆ, ಇಷ್ಟಜನರಂ ಬಿಟ್ಟಿರುವುದಱಿಂ ವ್ಯಸನಪಡುತಲಿರುವ ಈ ಸೀತೆಯಂ ಸಮಾಧಾನಪಡಿಸುವ ಕ್ರಮವನ್ನು ಚೆನ್ನಾಗಿ ತಿಳಿಯುವನಾಗುತ್ತೀಯೆ. ಆ ಚಿತ್ರವು ಎಷ್ಟು ಪರ್ಯಂತ ಬರೆದು ಇದೆ ? '' ಎನಲು ; ಲಕ್ಷ್ಮಣಸ್ವಾಮಿಯು–'' ಪೂಜ್ಯಳಾದ ಸೀತೆಗೆ ಅಗ್ನಿಶುದ್ಧಿಯಾಗುವ ಪರಿಯಂತವು ಬರೆದು ಇದೆ.'' ಎನಲು ; ಅದಂ ಕೇಳಿ, ಶ್ರೀರಾಮನು–'' ದೋಷವಿಲ್ಲ ದೋಷವಿಲ್ಲ '' ವೆನುತ, ಸೀತೆಯಂ ಸಮಾಧಾನವಚನಗಳಿಂ ಸಂತೈಸುವನಾಗಿ ಇಂತೆಂದನು :–'' ಯಜ್ಞಭೂಮಿಯಲ್ಲಿ ಜನಿಸಿದವಳಾದಕಾರಣ ಆಜನ್ಮಪರಿಶುದ್ಧಳಾಗಿ ಇರುವ ಈ ಸೀತೆಗೆ ಪರಿಶುದ್ಧಗಳಾದ ಇತರ ವಸ್ತುಗಳಿಂ ಶುದ್ಧಿಯೇನುಂಟಾಗುವುದು ? ಲೋಕದಲ್ಲಿ ಮಹಾತೀರ್ಥಜಲವು ಅಗ್ನಿಯು ಸಹ ಮತ್ತೊಂದಱಿಂದ ಶುದ್ಧಿಯನ್ನೈದುವುದಕ್ಕೆ ಯೋಗ್ಯಗಳಲ್ಲವಲ್ಲ. ಎಲೌ ಜನಕರಾಯನ ಯಜ್ಞಭೂಮಿಯಲ್ಲಿ ಜನಿಸಿರುವ ಪ್ರಿಯಳೇ, ಪ್ರಸನ್ನಳಾಗು ಪ್ರಸನ್ನಳಾಗು. ನಿನಗೆ ಈ ನಮಸ್ಕಾರವು ಯಾವಜ್ಜೀವವು ಆಗಲಿ. ಲೋಕದಲ್ಲಿ ಸತ್ಕುಲಸ್ಥರಾದ ಜನರು ವ್ಯಸನಪಡುವ ಇಷ್ಟಜನವನ್ನು ಪ್ರಿಯವಚನಗಳಿಂ ಸಂತೋಷಪಡಿಸುವವರಾಗಬೇಕು. ಹೀಗೆ ಇರುವಲ್ಲಿ ನಿನ್ನ ವಿಷಯವಾಗಿ ಆಗ್ನಿಶುದ್ಧಿಯೆಂದು ನಾವು ಪೇಳಿದ ಈ ಅಶುಭವಚನವು ನಿನಗೆ ಯೋಗ್ಯವಲ್ಲ. ಅದು ಹೇಗೆಂದರೆ–ಪರಿಮಳಯುಕ್ತವಾದ ಪುಷ್ಪಕ್ಕೆ ಶಿರಸ್ಸಿನಲ್ಲಿ ಧರಿಸುವುದೆ ಉಚಿತವಾಗುವುದೇ ಹೊಱತು ಕೆಳಗೆ ಬಿಸುಟು ಪಾದಗಳಿಂ ಮರ್ದಿಸುವುದು ಉಚಿತವಾಗಲಾಱದಲ್ಲ '' ಎಂಬದಾಗಿ ಕಾಂತನು ತನ್ನಂ ಸಂತೈಸುವನಾಗಲು ; ಅದಂ ಕೇಳಿ ಸೀತೆಯು–'' ಎಲೈ ಪ್ರಿಯನೆ, ಅದು ಹಾಗಿರಲಿ. ನಿನ್ನ ಚರಿತ್ರವಂ ನೋಡೋಣ '' ಎಂದೆನಲು ;

ಶ್ರೀರಾಮನು ರತ್ನಮಯವಾದ ಮಂಚದಿಂದೆದ್ದು ತಿರಿಗಿದವನಾಗಲು ; ಲಕ್ಷ್ಮಣನು ಕೈಮುಗಿದು, '' ಇದೆ ಚಿತ್ರ '' ವೆಂದು ತೋಱಿಸಿದನು. ಸೀತೆಯು ಆ ಚಿತ್ರವಂ ಚೆನ್ನಾಗಿ ನೋಡಿ–''ಎಲೈ ಲಕ್ಷ್ಮಣನೇ, ಈ ಚಿತ್ರದ ಉಪರಿಪ್ರದೇಶದಲ್ಲಿ ಬರೆದಿರುವರಿವರು

ಯಾರು? ಎಡೆಬಿಡದಂತೆ ನಿಂತವರಾಗಿ ಸ್ವಾಮಿಯಂ ಸ್ತೋತ್ರಂಗೈಯುತ್ತಲಿದ್ದಾರೆ.'' ಎಂದೆನಲು ; ಲಕ್ಷ್ಮಣನು– ''ಎಲೌ ತಾಯೇ, ಇವರು ಪರಮರಹಸ್ಯಯುಕ್ತರಾಗಿ ಇರುವ ಜೃಂಭಕಾಸ್ತ್ರದೇವತೆಗಳು. ಈ ಅಸ್ತ್ರಗಳ ಉಪದೇಶಕ್ರಮವು ಎಂತು ಎಂದರೆ–ಆದಿಯಲ್ಲಿ ಪೂಜ್ಯನಾದ ಭೃಶಾಶ್ವನೆಂಬ ಮಹಾಮುನಿಯು ತಪೋಲಬ್ಧಗಳಾದ ಈ ಜೃಂಭಕಾಸ್ತ್ರಂಗಳಂ ವಿಶ್ವಾಮಿತ್ರನೆಂಬ ಮಹಾಮುನಿಗೆ ಉಪದೇಶವಂ ಮಾಡಿದನು. ಆ ವಿಶ್ವಾಮಿತ್ರಮುನಿಯು ತಾಟಕಾಸಂಹಾರವಾದಲ್ಲಿ ನಮ್ಮಣ್ಣನಾದ ಸ್ವಾಮಿಗೆ ಆ ದಿವ್ಯಾಸ್ತ್ರಗಳನ್ನನುಗ್ರಹವಂ ಮಾಡಿದನು'' ಎಂದು ಬಿನ್ನವಿಸಲು ; ಶ್ರೀರಾಮನು–'' ಎಲೌ ಪ್ರಿಯಳೇ, ಈ ಜೃಂಭಕಾಸ್ತ್ರದೇವತೆಗಳಿಗೆ ವಂದಿಸುವಳಾಗು. ಈ ಅಸ್ತ್ರಗಳ ಮಹಿಮೆ ಏನು ಎಂದರೆ:–ಪೂರ್ವಿಕರಾದ ಬ್ರಹ್ಮಾದಿಮುನಿಗಳು ಪರಮೇಶ್ವರನ ಪ್ರೀತ್ಯರ್ಥವಾಗಿ ಅತಿನಿಯಮಂಗಳಿಂ ಅನೇಕ ಸಹಸ್ರ ವರ್ಷಂಗಳು ತಪಸ್ಸಂಗೈದು ಆ ಬಳಿಕ ತಪೋರೂಪಂಗಳಾದ ತಮ್ಮ ತೇಜಸ್ಸುಗಳೇ ಈ ರೂಪದಿಂದಿರುವುವೋ ಎಂಬಂತೆ ಅತಿಪ್ರಕಾಶಮಾನಗಳಾಗಿರುವ ಈ ಜೃಂಭಕಾಸ್ತ್ರಂಗಳಂ ಸಾಕ್ಷಾತ್ಕರಿಸಿದವರಾದರು. ಅದುಕಾರಣ ಈ ದಿವ್ಯಾಸ್ತ್ರಂಗಳಿಗೆ ವಂದಿಸು'' ಎನಲು ; ಸೀತೆಯು ಆ ಪತಿವಚನವಂ ಕೇಳಿ ಪರಮಭಕ್ತಿಯಿಂ ಅಸ್ತ್ರದೇವತೆಗಳಿಗೆ ನಮಿಸಲು ; ಆಗ ಶ್ರೀರಾಮನು–'' ಎಲೌ ಪ್ರಿಯಳೇ, ಈ ದಿವ್ಯಾಸ್ತ್ರಂಗಳು ಸರ್ವಪ್ರಕಾರದಿಂದಲು ನಿನ್ನ ಗರ್ಭದಲ್ಲಿರುವ ಪುತ್ರರಂ ಭಜಿಸುವುವು'' ಎಂದು ಪೇಳಲು ; ಸೀತೆಯು– ಇದೇ ಪರಮೋಪದೇಶವು ಎಂದು ತಿಳಿದು, ''ನಾನು ಅನುಗ್ರಹಪಾತ್ರಳಾದೆನು'' ಎಂದಳು.

ಲಕ್ಷ್ಮಣನು–'' ಎಲೌ ಪೂಜ್ಯಳೇ, ಇದು ಮಿಥಿಳಾಪುರದಲ್ಲಿ ನಡೆದ ವೃತ್ತಾಂತವು'' ಎಂದು ಚಿತ್ರವಂ ತೋಱಿಸಲು ; ಸೀತಾದೇವಿಯು ಅದಂ ನೋಡಿ ಆಶ್ಚರ್ಯಪಟ್ಟು–'' ಎಲೆ ಲಕ್ಷ್ಮಣನೇ, ವಿಕಾಸಯುಕ್ತವಾದ ಕನ್ನೈದಿಲೆಯಂತೆ ನಿರ್ಮಲವಾಗಿ ಶ್ಯಾಮಲವರ್ಣವಾಗಿ ಮೆಱೆಯುತ, ನುಣುಪಾಗಿ ಪುಷ್ಟಯುಕ್ತವಾಗಿಯೂ ಇರುವ ದೇಹದ ಸೌಭಾಗ್ಯದಿಂ ಆಶ್ಚರ್ಯಯುಕ್ತರಾಗಿ ಚಲಿಸದೆ ಇರುವ ಕಣ್ಣಾಲೆಗಳುಳ್ಳವರಾಗಿಯೂ ಪುರಜನರಿಂ ನೋಡಲ್ಪಡುತ್ತಲಿರುವ ರಮಣೀಯವಾದ ಸೌಂದರ್ಯಸಂಪತ್ತುಳ್ಳವನಾಗಿ, ಲೀಲಾಮಾತ್ರದಿಂ ಮುಱಿಯಲ್ಪಟ್ಟ ಪರಮೇಶ್ವರನ ಧನುಸ್ಸುಳ್ಳವನಾಗಿ, ಕಾಕಪಕ್ಷಗಳಿಂ ಅಲಂಕೃತನಾಗಿಯೂ ಇರುವ ಪ್ರಾಣಕಾಂತನಾದ ಸ್ವಾಮಿಯು ಇಲ್ಲಿ ಬರೆಯಲ್ಪಟ್ಟಿದ್ದಾನೆ'' ಎಂದು ನೋಡಲು ; ಲಕ್ಷ್ಮಣನು–'' ಎಲೌ ತಾಯೇ, ಇಲ್ಲಿ ನೋಡು ಇಲ್ಲಿ ನೋಡು. ಈ ಸಭಾಸ್ಥಾನದಲ್ಲಿ ನಿಮ್ಮ ತಂದೆಯಾದ ಈ ಜನಕರಾಯನು ಗೌತಮಮುನಿಗೆ ಪುತ್ರನಾದ ಕುಲಪುರೋಹಿತನಾದ ಶತಾನಂದನು ಸಹ ಸಂಬಂಧಿಗಳಾದ ವಸಿಷ್ಠಾದಿಗಳಂ ಪೂಜಿಸುತ್ತಾನೆ.'' ಎಂದು ಪೇಳಲು ; ಶ್ರೀರಾಮನು ನೋಡಿ–'' ಇದು ಬಹು ಚೆನ್ನಾಯಿತು ! ಜನಕವಂಶಸ್ಥರಾದ ಅರಸುಗಳಿಗೂ ರಘುಗಳಿಗೂ ಸಂಘಟಿಸಿದ ಸಂಬಂಧವು ಯಾರಿಗೆ ಇಷ್ಟವಿಲ್ಲ ? ಅದು ಹೇಗೆಂದರೆ–ಉಭಯಕುಲಬಂಧುತ್ವದಲ್ಲೂ ಗುರುವಾದ ವಿಶ್ವಾಮಿತ್ರಮುನಿಯು ಅಧ್ಯಕ್ಷನಾದುದಱಿಂ ಕೊಡುವನು ಪ್ರತಿಗ್ರಹಿಸುವನು ಸಹ ತಾನೇ ಆಗಿರುವನಾದ ಕಾರಣ ಈ ಉಭಯಸಂಬಂಧವು ಸರ್ವಜನರಿಗೂ ಇಷ್ಟವಾದುದು'' ಎಂದು ಪೇಳಲು ; ಸೀತೆಯು, ಚಿತ್ರವಂ ನೋಡಿ–'' ಎಲೆ ಕಾಂತನೆ, ಆಗ ಗೋದಾನ

ವೆಂಬ ಶುಭಕರ್ಮವಂ ಮಾಡಿ ವಿವಾಹದೀಕ್ಷಿತರಾಗಿಯೂ ಇರುವ ಸಹೋದರರಾದ ನೀವು ನಾಲ್ವರಲ್ಲವೆ ಇಲ್ಲಿ ಶೋಭಿಸುವುದು " ಎಂದು ಆಶ್ಚರ್ಯಪಡುತ, " ಎಲೈ ಸ್ವಾಮಿಯೇ, ಈ ಚಿತ್ರವಂ ನೋಡುವುದಱಿಂ ಈಗ ನಾನು ಆ ಕಲ್ಯಾಣಮಂಟಪದಲ್ಲೇ ಅದೇ ಸಮಯದಲ್ಲಿ ಇರುವೆನೋ ಏನೊ ಎಂಬದಾಗಿ ತಿಳಿಯುತ್ತೇನೆ." ಎಂಬದಾಗಿ ಪೇಳಲು ; ಶ್ರೀರಾಮನು ಅದಂ ಕೇಳಿ–" ಎಲೌ ಪ್ರಿಯಳೇ, ನನಗೂ ಹಾಗೆ ತೋಱುತ್ತಲಿದೆ. ಅದು ಹೇಗೆಂದರೆ–ಯಾವ ಕಲ್ಯಾಣೋತ್ಸವಸಮಯದಲ್ಲಿ ಕಂಕಣದಿಂ ಶೋಭಿಸುವ ಈ ನಿನ್ನ ಹಸ್ತವು ದಾನೋದಕವನ್ನೆಱೆಯಲೋಸುಗ ಪೂರ್ವದಲ್ಲಿ ಪುರೋಹಿತನಾದ ಶತಾನಂದಮುನಿಯಿಂ ನನ್ನ ಹಸ್ತದಲ್ಲಿ ಸಮರ್ಪಿಸಲ್ಪಟ್ಟುದಾದಮಾತ್ರದಿಂದಲೇ ಆಕಾರವಂ ಪಡೆದಿರುವ ಕಲ್ಯಾಣೋತ್ಸವದಂತೆ ನನ್ನಂ ಅತ್ಯಂತವಾಗಿ ಸಂತೋಷಪಡಿಸಿತೊ, ಅಂಥ ಕಲ್ಯಾಣಸಮಯವೇ ಈಗಲೂ ಇರುವಂತೆ ನನಗೆ ತೋಱುತಲಿದೆ " ಎಂದು ಪೇಳಲಾಗಿ; ಲಕ್ಷ್ಮಣಸ್ವಾಮಿಯು–"ಆ ಚಿತ್ರದಲ್ಲಿ ಬರೆದಿರುವ ವಿವಾಹಮಂಟಪದಲ್ಲಿ ಇವಳೇ ಪೂಜ್ಯಳಾದ ನೀನು ; ಇವಳೇ ಪೂಜ್ಯಳಾದ ಮಾಂಡವೀದೇವಿಯು ; ಇವಳೇ ಕನ್ನೆಯಾದ ಶ್ರುತಕೀರ್ತಿಯು." ಎಂದು ಸೀತೆಗೆ ಚಿತ್ರವಂ ತೋಱಿಸಿದವನಾಗಲು ; ಸೀತೆಯು ಅಲ್ಲಿ ಬರೆದಿರುವ ಊರ್ಮಿಳಾದೇವಿಯಂ ನೋಡಿ, "ಈ ಮತ್ತೊಬ್ಬಳು ಯಾರು ? " ಎಂದು ಕೇಳಲು ; ಲಕ್ಷ್ಮಣಸ್ವಾಮಿಯು ನಗುತ, ತನ್ನ ಮನಸ್ಸಿನಲ್ಲಿ–ಸೀತೆಯು ಊರ್ಮಿಳೆಯಂ ಕೇಳುತ್ತಾಳೆ, ಇಲ್ಲಿಂದ ಮುಂದಕ್ಕೆ ಕರಕೊಂಡುಹೋಗೋಣವೆಂದು ಮುಂದೆ ತೋಱಿಸಿ, ಪ್ರಕಟವಾಗಿ–" ಎಲೌ ಪೂಜ್ಯಳೆ, ಇದಂತಿರಲಿ. ಮುಂದೆ ನೋಡತಕ್ಕುದು ಬಹಳವಿದೆ " ಎಂದು ಮತ್ತೊಂದು ಕಡೆಯಲ್ಲಿ ಚಿತ್ರವಂ ತೋಱಿಸಿದವನಾಗಲು ; ಸೀತೆಯು ನಗುತ ಪ್ರೇಮದಿಂದಲೂ ಬಹುಮಾನದಿಂದಲೂ ಮೈದುನನಂ ನೋಡಿ, " ಎಲೈ ಪೂಜ್ಯರಿಗೆ ಪುತ್ರನಾದ ಲಕ್ಷ್ಮಣನೇ, ನೀನು ಈ ವಿನಯಾತಿಶಯದಿಂ ಶೋಭಿಸುವೆ." ಎಂದು ಪೇಳಲು; ಲಕ್ಷ್ಮಣನು–"ಎಲೌ ಪೂಜ್ಯಳೆ, ವಿವಾಹವಾದ ಬಳಿಕ ನಾವೆಲ್ಲರೂ ಅಲ್ಲಿಂದ ಅಯೋಧ್ಯಾಪಟ್ಟಣಕ್ಕೆ ಬಂದ ರೀತಿಯಂ ಇಲ್ಲಿ ನೋಡು " ಎನಲು ; ಶ್ರೀರಾಮನು ಆ ರೀತಿಯಂ ನೋಡಿ ಕಣ್ಣೀರುಬಿಡುತ, " ಅಕಟಕಟ ! ನಾನು ಆ ಸೌಖ್ಯವಂ ಸ್ಮರಿಸುವೆನು, ಸ್ಮರಿಸುವೆನು. ಅದೇನೆಂದರೆ :–ನಮ್ಮ ತಂದೆಯಾದ ದಶರಥಮಹಾರಾಯನು ರಾಜ್ಯಭಾರವಂ ವಹಿಸುತ ಆಯುಷ್ಮಂತನಾಗಿರೋಣ, ನಾವು ನೂತನವಾಗಿ ವಿವಾಹವಂ ಮಾಡಿಕೊಂಡು ಪತ್ನಿಯರೊಡನೆ ಸುಖವನ್ನನುಭವಿಸುತಲಿರೋಣ, ಮತ್ತು ನಮ್ಮ ದೇಹಪೋಷಣೆಯ ವಿಷಯವಾಗಿ ಚಿಂತೆಯಂ ಮಹಾಮಾತ್ಯಶ್ರೀಯವರುಗಳು ವಹಿಸಿ ಇರೋಣ–ಈರೀತಿ ಬಹುಪ್ರಕಾರಗಳಿಂ ಸುಖಪಡುತ್ತಲಿರುವ ನಮ್ಮ ಆ ದಿವಸಗಳು ಕಳೆದು ಹೋದುವಲ್ಲ! " ಎನುತ, ಚಿತ್ರವಂ ನೋಡಿ–"ಎಲೈ, ಆಕಾಲದಲ್ಲಿರುವ ಸೀತೆಯು ಇವಳೇ ಅಲ್ಲವೆ ? ಆಗ ಬಾಲಕಳಾದುದಱಿಂದ ದಂತಗಳು ಅಲ್ಲಲ್ಲಿ ಬಿದ್ದಿರುವುವಾದಕಾರಣ ವಿರಳಂಗಳಾಗಿ, ಸಮೀಪದಲ್ಲಿ ಹುಟ್ಟುತ್ತಲಿರುವ ಮೊಳಕೆಗಳುಳ್ಳಂಥವಾಗಿ ಪುಷ್ಪಗಳಂತೆ ಬೆಳಗುವ ದಂತಗಳಿಂ ರಮಣೀಯವಾದ ನೋಟವುಳ್ಳ ಮುಖವಂ ಧರಿಸುವಳಾಗಿ ಸೀತೆಯು ಅತಿಮನೋಹರಂಗಳಾಗಿ ಬೆಳುದಿಂಗಳಂತೆ ನೇತ್ರಾನಂದಕರಂಗಳಾಗಿ ಸ್ವಭಾವದಿಂದಲೇ ವಿಲಾಸಯುಕ್ತಂಗಳಾಗಿ ಆಭರಣಂಗಳು ಇಲ್ಲದಿದ್ದರೂ ಸ್ವತಃ ಬೆಳಗುತಲಿರುವ ತನ್ನ

ಅಂಗಗಳಿಂ ನನ್ನ ಅಂಗಗಳಿಗೆ ಆಲಿಂಗನವಂ ಮಾಡಲೋಸುಗ ಕುತೂಹಲವನುಂಟುಮಾಡಿದಳು" ಎಂದು ಪೂರ್ವ ಸುಖವಂ ಸ್ಮರಿಸುವನಾಗಲು ;

ಆಗ ಲಕ್ಷ್ಮಣನು ಅಲ್ಲಿಂದ ಮುಂದಕ್ಕೆ ಹಜ್ಜೆಯನ್ನಿಟ್ಟು "ಇವಳೇ ಮಂಥರೆ" ಎಂದು ಚಿತ್ರವಂ ತೋಱುಸಲು ; ಶ್ರೀರಾಮನು ತ್ವರೆಯೊಡಗೂಡಿ ಆ ಪ್ರದೇಶವಂ ಬಿಟ್ಟು ಮತ್ತೊಂದು ಕಡೆಯಲ್ಲಿ ಚಿತ್ರವಂ ತೋಱುಸುವವನಾಗಿ, ಸೀತೆಯಂ ಕುಱುತು–" ಎಲೌ ವಿದೇಹರಾಜಪುತ್ರಿಯಾದ ಪ್ರಿಯಳೇ, ಪೂರ್ವದಲ್ಲಿ ಶೃಂಗಿಬೇರಪುರದ ಸಮೀಪದಲ್ಲಿ ಯಾವ ವೃಕ್ಷಮೂಲಪ್ರದೇಶದಲ್ಲಿ ಕಿರಾತದೇಶಾಧಿಪತಿಯಾದ ಮಿತ್ರನಾದ ಗುಹನೊಡನೆ ನಮಗೆ ಸಂಗತಿ ಉಂಟಾಯಿತೊ, ಆ ಇಂಗುದಿಯೆಂಬ ವೃಕ್ಷವೇ ಇದು" ಎಂದು ತೋಱುಸಲು ; ಲಕ್ಷ್ಮಣಸ್ವಾಮಿಯು ನಕ್ಕವನಾಗಿ, ಮನಸ್ಸಿನಲ್ಲಿ–ಎಲೈ ನಮ್ಮಣ್ಣನಾದ ಸ್ವಾಮಿಯು ಚಿತ್ರದಲ್ಲಿ ಕೈಕಯಾದೇವಿಯ ವೃತ್ತಾಂತವಂ ಅನರ್ಥಕರವೆಂದು ಮಱೆಮಾಡಿದನು ಎಂದು ಭಾವಿಸಿದವನಾಗಲು ; ಸೀತೆಯು–" ಎಲೈ ಸ್ವಾಮಿಯೆ, ಈ ವೃಕ್ಷಮೂಲದಲ್ಲಿ ನೀವು ಜಟೆಗಳಂ ಧರಿಸಿದ ವೃತ್ತಾಂತವು ಇದಲ್ಲವೆ" ಎನಲು ; ಅದಂ ಕೇಳಿ ಲಕ್ಷ್ಮಣನು–" ಎಲೌ ತಾಯೇ ಕೇಳು. ಪೂರ್ವದಲ್ಲಿ ವೃದ್ಧರಾಗಿ ಇಕ್ಷ್ವಾಕುವಂಶಸ್ಥರಾಗಿಯೂ ಇರುವ ಅರಸುಗಳು ಬಹುಕಾಲ ರಾಜ್ಯವನ್ನಾಳಿ ಆ ಬಳಿಕ ಆ ರಾಜ್ಯಲಕ್ಷ್ಮಿಯಂ ಪುತ್ರಾಧೀನವಂ ಮಾಡಿ ಅನಂತರದಲ್ಲಿ ಪುಣ್ಯಕರವಾದ ಯಾವ ವನವಾಸವ್ರತವಂ ಧರಿಸಿದರೊ ಆ ವನವಾಸವ್ರತವಂ ನಮ್ಮಣ್ಣನಾದ ಸ್ವಾಮಿಯು ಬಾಲ್ಯದಲ್ಲೇ ಧರಿಸಿದನು" ಎಂದು ಪೇಳಿದನು.

ಸೀತೆಯು ಮುಂದಣ ಚಿತ್ರವಂ ನೋಡಿ–" ಇವಳು ನಿರ್ಮಲವಾದ ಪುಣ್ಯಕರವಾದ ಜಲವುಳ್ಳ ಪೂಜ್ಯಳಾದ ಭಾಗೀರಥಿಯಲ್ಲವೆ ?" ಎನಲು ; ಶ್ರೀರಾಮನು–" ಎಲೌ ರಘುಕುಲದೇವತೆಯಾದ ಗಂಗಾದೇವಿಯೇ, ನಿನಗೆ ನಮಸ್ಕರಿಸುವೆನು. ಎಲೌ ಪೂಜ್ಯಳೇ, ಪೂರ್ವದಲ್ಲಿ ನಮ್ಮ ವಂಶಸ್ಥನಾದ ಸಗರಚಕ್ರವರ್ತಿಯು ಅಶ್ವಮೇಧವೆಂಬ ಮಹಾಕ್ರತುವಿಗೋಸುಗ ಸಂಕಲ್ಪಿಸಿ ದೇಶಸಂಚಾರಾರ್ಥವಾಗಿ ಅಶ್ವವಂ ಬಿಡಲು ಆಗ ದೇವೇಂದ್ರನು ಮಾಯೆಯಿಂದ ರಾಕ್ಷಸರೂಪವಂ ಧರಿಸಿ ಯಜ್ಞಾರ್ಥವಾದ ಆ ಅಶ್ವವನ್ನಪಹರಿಸಿ ಪಾತಾಳಲೋಕದಲ್ಲಿ ತಪೋನಿಷ್ಠನಾಗಿ ಸಮಾಧಿಯಲ್ಲಿರುವ ಸಾಕ್ಷಾನ್ನಾರಾಯಣಾವತಾರವಾದ ಕಪಿಲಮಹಾಮುನಿಯ ಹಿಂಭಾಗದಲ್ಲಿ ಆ ಅಶ್ವವಂ ಬಿಟ್ಟು ತಾನು ಅಂತರ್ಧಾನವನ್ನೆಯ್ದಿದವನಾಗಲು, ಆಗ ಸಗರಚಕ್ರವರ್ತಿಯು ಅಶ್ವವಂ ಹುಡುಕುವುದಕ್ಕೋಸುಗ ಸುಮತಿಯೆಂಬ ಪತ್ನಿಯಲ್ಲಿ ಜನಿಸಿರುವ ಅಱುವತ್ತುಸಾಸಿರ ಮಂದಿ ಪುತ್ರರನ್ನಾಜ್ಞಾಪಿಸಿದನು. ಆ ಮಹಾವೀರರು ತಂದೆಯಿಂದ ಆಜ್ಞಾಪಿಸಲ್ಪಟ್ಟವರಾಗಿ ಸಮಸ್ತ ಭೂಮಂಡಲವಂ ಹುಡುಕಿದವರಾದರೂ ಆ ಅಶ್ವವಂ ಕಾಣವೆ ಭೂಮಿಯಂ ಭೇದಿಸುವವರಾಗಿ ಪಾತಾಳದಲ್ಲಿ ಆ ಕಪಿಲಮುನಿಯ ಹಿಂಬಾಗದಲ್ಲಿ ಆ ಅಶ್ವವಂ ಕಂಡು, ಈ ಮುನಿಯೇ ನಮ್ಮ ಅಶ್ವವನ್ನಪಹರಿಸಿದವನೆಂದು ಗರ್ಜಿಸುತ, ಆಯುಧಪಾಣಿಗಳಾಗಿ ಆ ಮುನಿಯ ಸಮೀಪವನ್ನೆಯ್ದಿ, ಆ ಕಪಿಲಮಹಾಮುನಿಯ ತೇಜಸ್ಸಿನಿಂದ ರೋಷದಿಂದ ದಹಿಸಲ್ಪಟ್ಟವರಾದಕಾರಣ ಸದ್ಗತಿಯಂ ಕಾಣದೆ ಅನೇಕ ಸಹಸ್ರ ಸಂವತ್ಸರಂಗಳು ಭಸ್ಮರೂಪದಿಂದಿರುವರಾಗಲು, ಆ ಬಳಿಕ ಸಗರ ಚಕ್ರವರ್ತಿಗೆ ಮಱುಮಗನಾದ

ಭಗೀರಥಮಹಾರಾಯನು ಆ ಸಗರಪುತ್ರರಿಗೆ ಸದ್ಗತಿಯಂ ಕಲ್ಪಿಸುವವನಾಗಿ ಕಾಯಕ್ಲೇಶವನ್ನೆಣಿಸದೆ ಬಹುಕಾಲ ಮಹಾತಪಸ್ಸುಗಳಂ ಮಾಡಿ ಈಶ್ವರಪ್ರಸಾದದಿಂ ನಿನ್ನಂ ಭೂಮಿಗೆ ತಂದು ಇಲ್ಲಿಂದ ಪಾತಾಳಲೋಕವನ್ನೈದಿಸಿ ನಿನ್ನ ಪಾವನಗಳಾದ ಜಲಗಳಿಂದ ನಮ್ಮ ತಂದೆಗೆ ಪ್ರಪಿತಾಮಹರಾದ ಆ ಸಗರಪುತ್ರರಂ ಪರಿಶುದ್ಧರಂಗೈದು ಉದ್ಧಾರವಂ ಮಾಡಿದನು. ಆದಕಾರಣ ನಮ್ಮ ಕುಲದೇವತೆಯಾಗಿ ತಾಯಾಗಿಯೂ ಇರುವ ಗಂಗಾದೇವಿಯೇ, ಅಂಥ ಲೋಕಪಾವನೆಯಾದ ನಿನಗೆ ಸೊಸೆಯಾದ ಈ ಸೀತೆಯ ವಿಷಯದಲ್ಲಿ ಅರುಂಧತೀದೇವಿಯಂತೆ ಕ್ಷೇಮವಂ ಚಿಂತಿಸುವಳಾಗು.'' ಎಂದು ಸ್ವಾಮಿಯು ಗಂಗೆಯಂ ಪ್ರಾರ್ಥಿಸಲು;

ಲಕ್ಷ್ಮಣನು–'' ಎಲೌ ತಾಯೇ, ಚಿತ್ರಕೂಟವೆಂಬ ಪರ್ವತಕ್ಕೆ ಪೋಗುವ ಮಾರ್ಗದಲ್ಲಿ ಯಮುನಾತೀರದಲ್ಲಿ ಮಾರ್ಗಸೂಚನಾರ್ಥವಾಗಿ ಭರದ್ವಾಜಮುನಿಯಿಂ ತಿಳಿಯಿಸಲ್ಪಟ್ಟ ಶ್ಯಾಮವೆಂಬ ವಟವೃಕ್ಷವೇ ಇದು'' ಎಂದು ಸೀತೆಗೆ ಚಿತ್ರವಂ ತೋಱಿಸಿದನು. ಶ್ರೀರಾಮನು ಆಗ ಇಚ್ಛಾಪೂರ್ವಕವಾಗಿ ಆವೃಕ್ಷವಂ ನೋಡುತ್ತಲಿರಲು; ಸೀತಾದೇವಿಯು ಸ್ವಾಮಿಯಂ ಕುಱಿತು ರಹಸ್ಯವಾಗಿ–'' ಎಲೈ ಪ್ರಾಣಕಾಂತನೇ, ಶ್ಯಾಮವೆಂಬ ಆ ವಟವೃಕ್ಷದ ಮೂಲಪ್ರದೇಶವಂ ಸ್ಮರಿಸುವಿಯೊ ಏನು?'' ಎಂದು ಕೇಳಲು; ಶ್ರೀರಾಮನು ರಹಸ್ಯವಾಗಿ–'' ಎಲೌ ಪ್ರಿಯಳೇ, ಯಾವ ವೃಕ್ಷದ ಮೂಲಪ್ರದೇಶದಲ್ಲಿ ಲಕ್ಷ್ಮಣನಿಂ ಪತ್ರಗಳಿಂದ ರಚಿತವಾದ ಹಾಸಿಗೆಯಲ್ಲಿ ನನ್ನಂ ಆಲಿಂಗನವಂ ಮಾಡಲೋಸುಗ ಲಜ್ಜೆಯಿಂ ಪರಾಙ್ಮುಖಳಾದರೂ ಪ್ರೇಮಾತಿಶಯದಿಂ ಅನುಕೂಲಳಾಗಿ ಮೋಹಯುಕ್ತಳಾಗಿ ದೃಢಾಲಿಂಗನಂಗಳಿಂದಲೇ ಕಲ್ಪಿತವಾದ ಅಂಗಸಂಮರ್ದನವುಳ್ಳವಳಾಗಿ ಬಲಿದ ತಾವರೆದಂಟಿನಂತೆಯು ಅತಿಕೋಮಲಂಗಳಾಗಿಯೂ ಇರುವ ನಿನ್ನ ಅಂಗಗಳಂ ನನ್ನ ವಕ್ಷಸ್ಸಿನಲ್ಲಿ ಸಮರ್ಪಿಸಿಕೊಂಡು ಅತ್ಯಂತ ಮಾರ್ಗಶ್ರಮದಿಂ ನೀನು ನಿದ್ರೆಗೈದವಳಾದೆಯೊ, ಅಂಥ ಆ ಪ್ರದೇಶವಂ ನಾನು ಎಂತು ಮಱೆತೇನು?'' ಎಂದು ಪೇಳಲು;

ಲಕ್ಷ್ಮಣಸ್ವಾಮಿಯು–'' ಎಲೌ ಪೂಜ್ಯಳೇ, ಇದು ವಿಂಧ್ಯಾರಣ್ಯದ ಮುಂಭಾಗದಲ್ಲಿ ನಮಗೂ ವಿರಾಧನೆಂಬ ರಾಕ್ಷಸನಿಗೂ ಸಂವಾದಮಾದ ವೃತ್ತಾಂತವು'' ಎಂದು ಚಿತ್ರವಂ ತೋಱಿಸಲು; ಅದಂ ನೋಡಿ, ಸೀತೆಯು ಭಯದಿಂ–'' ಇದಂತಿರಲಿ. ಪ್ರಿಯನಾದ ಸ್ವಾಮಿಯು ತಾಳಪತ್ರಂಗಳಿಂ ಕಲ್ಪಿತವಾದ ಛತ್ರವಂ ತನ್ನ ಹಸ್ತದಿಂ ಪಿಡಿದು ನನಗೆ ಅತಿಭಯಂಕರವಾದ ದಂಡಕಾರಣ್ಯದಲ್ಲಿ ಮಾರ್ಗಸ್ಥನಾಗಿ ಸಂಚರಿಸಿದ ಕ್ರಮವಂ ನೋಡುವೆನು'' ಎನಲು; ಶ್ರೀರಾಮನು ಸೀತೆಯಂ ಕುಱಿತು, '' ಎಲೌ ಪ್ರಿಯಳೇ, ಯಾವ ತಪೋವನಗಳಲ್ಲಿ ಜಿತೇಂದ್ರಿಯರಾಗಿ ಗೃಹಸ್ಥಾಶ್ರಮದಲ್ಲಿ ಇರುವ ಮಹರ್ಷಿಗಳು ಅತಿಥಿಗಳಾಗಿ ಬಂದ ಮುನಿಗಳಂ ಸತ್ಕರಿಸುವುದಱಲ್ಲಿ ವಿಶೇಷದಿಂ ಆಸಕ್ತರಾದಕಾರಣ ಅರಣ್ಯದಲ್ಲಿ ಕೃಷಿಯಿಲ್ಲದೆ ಬೆಳೆಯುವ ನೀವಾರಂಗಳೆಂಬ ಧಾನ್ಯವಂ ತಂದು ಅದಂ ಪಾಕಂಗೈಯುವರಾಗಿ ಗೃಹಂಗಳಲ್ಲಿ ವಾಸವಂ ಮಾಡುವರೊ, ಗಿರಿನದೀತೀರಗಳಲ್ಲಿ ವಾನಪ್ರಸ್ಥರಾಗಿರುವ ಋಷಿಗಳಿಂ ಆಶ್ರೈಸಲ್ಪಟ್ಟ ವೃಕ್ಷಗಳುಳ್ಳ ಆ ತಪೋವನಂಗಳು ಇವಲ್ಲವೇ, ನೋಡು'' ಎಂದು ತೋಱಿಸಲು;

ಲಕ್ಷ್ಮಣನು ಚಿತ್ರವಂ ತೋಱುಸುತಲೇ—" ಪೂಜ್ಯಳೇ, ನಿಬಿಡಂಗಳಾಗಿರುವ ವೃಕ್ಷಗಳ ಸಮೂಹಂಗಳಿಂ ಎಡೆವಿಡದೆ ಮೆಱೆಯುತ ಕಪ್ಪಾಗಿರುವ ಮಹಾರಣ್ಯದಿಂ ವ್ಯಾಪ್ತವಾಗಿ, ಗೋದಾವರೀನದಿಯ ಘೋಷದಿಂ ಪ್ರತಿಧ್ವನಿಯಂ ಮಾಡುತಲಿರುವ ಗುಹೆಗಳುಳ್ಳುದಾಗಿ, ಸರ್ವಕಾಲದಲ್ಲೂ ಸ್ರವಿಸುತಲಿರುವ, ಮೇಘಂಗಳು ಹಬ್ಬಿಕೊಂಡಿರುವುದಱಿಂ ಅತಿ ನೀಲವರ್ಣವಾಗಿಯೂ, ಜನಸ್ಥಾನವೆಂಬ ದಂಡಕಾರಣ್ಯಭಾಗದ ಮಧ್ಯದಲ್ಲಿರುವ ಪ್ರಸ್ರವಣವೆಂಬ ಪರ್ವತವು ಇದೇ " ಎಂದು ತೋಱುಸಿದನು.

ಅದಂ ನೋಡಿ ಶ್ರೀರಾಮನು ಸೀತೆಯಂ ಕುಱಿತು ರಹಸ್ಯವಾಗಿ—" ಎಲೌ ಕಾಂತೆಯೇ, ಆ ಪ್ರಸ್ರವಣಪರ್ವತದಲ್ಲಿ ಲಕ್ಷ್ಮಣನು ಮಾಡುವ ಸೇವೆಯಿಂ ಸುಖವಾಗಿರುವ ನಮ್ಮ ಆ ದಿವಸಂಗಳಂ ಸ್ಮರಿಸುವೆಯೊ ಏನು? ಮತ್ತು ಅಲ್ಲಿ ಮಾಧುರೀಯುಕಯುಕ್ತವಾದ ಜಲವುಳ್ಳ ಗೋದಾವರಿಯಂ ಸ್ಮರಿಸುವೆಯೊ? ಇನ್ನು ಆ ಗೋದಾವರೀ ತೀರದಲ್ಲಿ ನಾವು ಪರಸ್ಪರವಾಗಿ ಪ್ರೇಮಾತಿಶಯದಿಂ ವಿಹರಿಸುವರಾಗಿ ಇದ್ದ ವೃತ್ತಾಂತಗಳನ್ನಾದರೂ ಸ್ಮರಿಸುವೆಯೊ ಏನು? ಎಲೌ ಪ್ರಿಯಳೆ, ಮತ್ತು ಆ ಪ್ರದೇಶದಲ್ಲಿ ನಾವು ವಾಸಂಗೈಯುವಾಗ ರಾತ್ರಿಯಲ್ಲಿ ಪತ್ರಗಳಿಂ ತೃಣಗಳಿಂದಲೂ ರಚಿತವಾದ ಹಾಸಿಕೆಯಲ್ಲಿ ಪವಡಿಸಿಕೊಂಡು ಮೋಹಾವೇಶದಿಂ ಪರಸ್ಪರವಾಗಿ ಕಪೋಲಂಗಳಂ ಕೂಡಿಸಿ ಕ್ರಮವಿಲ್ಲದಂತೆ ಮೆಲ್ಲಮೆಲ್ಲನೆ ಏನೇನೋ ರಹಸ್ಯವಚನಂಗಳಂ ನುಡಿಯುವವರಾಗಿ ದೃಢವಾದ ಆಲಿಂಗನದಲ್ಲಿ ಪರಸ್ಪರ ಉದ್ಯುಕ್ತಗಳಾದ ಒಂದೊಂದು ಭುಜಗಳುಳ್ಳವರಾಗಿಯೂ ಇರುವ ಆ ನಮಗೆ ಕಳೆದು ಪೋಗಿರುವ ಯಾಮಂಗಳಂ ತಿಳಿಯದೆ ಆ ರಾತ್ರಿ ಮಾತ್ರವೇ ಮುಗಿಯಿತೆ ಹೊಱತು ಆ ಉತ್ಸಾಹವು ಆ ರಹಸ್ಯಸಲ್ಲಾಪವು ಸಹ ಮುಗಿಯಲಿಲ್ಲ " ಎಂದು ಪೇಳಲು ;

ಲಕ್ಷ್ಮಣನು—" ಎಲೌ ತಾಯೆ, ಇದು ಪಂಚವಟಿಯೆಂಬ ಕ್ಷೇತ್ರದಲ್ಲಿ ಸ್ವಾಮಿಯೊಡನೆ ಶೂರ್ಪನಖಿಯು ಸಂವಾದಂಗೈದ ವೃತ್ತಾಂತವು " ಎಂದು ತೋಱುಸಲು ; ಸೀತೆಯು ಅದಂ ನೋಡಿ—" ಹಾ! ಪ್ರಾಣಕಾಂತನೇ, ನಿನ್ನ ದರ್ಶನವು ಇಷ್ಟು ಪರ್ಯಂತವೇ ಸರಿ " ಎಂದು ತತ್ತಱಿಸಲು ; ಶ್ರೀರಾಮನು—" ಎಲೌ, ವಿರಹದಿಂ ಭಯಗ್ರಸ್ಥಳಾದ ಪ್ರಿಯಳೇ, ಇದು ಚಿತ್ರವು ; ಯಥಾರ್ಥವಲ್ಲ. ಭಯಪಡಬೇಡ " ಎನಲು ; ಅದಂ ಕೇಳಿ ಸೀತೆಯು—" ಎಲೈ ಸ್ವಾಮಿಯೇ, ಲೋಕದಲ್ಲಿ ದುರ್ಜನರು ಯಾವ ತೆಱದಿಂದಲಾದರೂ ಪ್ರಾಣಿಗಳಿಗೆ ದುಃಖವನ್ನುಂಟುಮಾಡುವರಾದಕಾರಣ ಈ ಚಿತ್ರದಲ್ಲಿ ಈ ಶೂರ್ಪನಖಿಯಂ ಕಂಡು ನಾನು ಭಯಪಟ್ಟವಳಾದೆನು " ಎಂದಳು.

ಶ್ರೀರಾಮನು—" ಆಗ ಜನಸ್ಥಾನದಲ್ಲಿ ನಡೆದ ಆ ವೃತ್ತಾಂತವು ಈಗಲೂ ನಡೆಯುವಂತೆ ತೋಱುತಲಿದೆ, ಕಟಕಟಾ! " ಎನಲು ; ಲಕ್ಷ್ಮಣಸ್ವಾಮಿಯು ಚಿತ್ರವಂ ತೋಱುಸುತ ಸೀತೆಯಂ ಕುಱಿತು—" ಎಲೌ ಪೂಜ್ಯಳೇ, ಕೇಳು. ಮಹಾ ಪಾಪಿಗಳಾದ ಈ ರಾಕ್ಷಸರು ಸುವರ್ಣ ಮೃಗವೆಂಬ ಕಪಟವ್ಯಾಪಾರದಿಂ ನಮಗೆ ಆ ರೀತಿ ಸಂತಾಪವಂ ಕಲ್ಪಿಸಿದರು. ಅದೆಂತೆನೆ :—ಇಂಥ ಸಂತಾಪಕಾರಿಗಳಾದ ರಾಕ್ಷಸರೊಡನೆ ಸಹಿತವಾಗಿ ಅವರಿಂದುಂಟಾದ ಸಂತಾಪವು ನಿಶ್ಶೇಷವಾಗಿ ಪರಾಕ್ರಮದಿಂ ಪರಿಹರಿಸಲ್ಪಟ್ಟವಾದರೂ,

ಯಾವ ರೀತಿ ಸ್ಮೃತಿಮಾತ್ರದಿಂದಲೇ ನಮ್ಮಂ ವ್ಯಥೆಪಡಿಸುವುದೊ ಆ ರೀತಿ ಈ ದುಷ್ಟರು ದ್ರೋಹವಂ ಮಾಡಿದರು. ಆಗ ನಿನ್ನಿಂದ ರಹಿತವಾದ ಆ ಜನಸ್ಥಾನದಲ್ಲಿ ನಮ್ಮ ಅಣ್ಣನಾದ ಸ್ವಾಮಿಯು ಬಹಿರಿಂದ್ರಿಯವ್ಯಾಪಾರವಿಲ್ಲದೆ ಏಕಾಗ್ರಚಿತ್ತನಾಗಿ ವಿರಹತಾಪವನ್ನನುಭವಿಸಿದ ವ್ಯಾಪಾರಂಗಳಿಂ ಅತಿಕಠಿನವಾದ ಪಾಷಾಣವೂ ಕೂಡ ದುಃಖಿಸುವುದು; ಮಹಾಕಠಿನವಾದ ವಜ್ರಮಣಿಯ ಹೃದಯವೂ ಕೂಡ ಸೀಳುವುದು'' ಎಂಬ ಲಕ್ಷ್ಮಣವಚನವಂ ಕೇಳಿ ಸೀತಾದೇವಿಯು ನೇತ್ರಗಳಲ್ಲಿ ಜಲವನ್ನಿಟ್ಟು,'' ಸೂರ್ಯವಂಶಕ್ಕೆ ಆನಂದಕರನಾದ ಸ್ವಾಮಿಯು ನನ್ನ ನಿಮಿತ್ತವಾಗಿ ಈ ರೀತಿ ಸಂತಾಪಯುಕ್ತನಾದನಲ್ಲ, ಕಟಕಟಾ!'' ಎನಲು; ಲಕ್ಷ್ಮಣನು ಸ್ವಾಮಿಯಂ ಭಾವಿಸಿ ನೋಡಿ, '' ಎಲೈ ಪೂಜ್ಯನೇ, ಇದೇನು! ಈ ಕಣ್ಣೀರು ಭಿನ್ನವಾದ ಮುಕ್ತಾಹಾರದಂತೆ ನೇತ್ರಗಳಿಂ ಧಾರಾರೂಪದಿಂ ಸ್ರವಿಸುತ ಜರ್ಜರಿತಗಳಾದ ಬಿಂದುಗಳುಳ್ಳದಾಗಿ ಭೂಮಿಯಲ್ಲಿ ಬಿದ್ದು ಹೊರಳುತಲಿದೆ. ಮತ್ತು ಬಹು ಕಾಲದಿಂ ಹೃದಯದಲ್ಲಿ ಪರಿಪೂರ್ಣವಾಗಿರುವ ದುಃಖದ ವೇಗಾತಿಶಯವು ಪ್ರಯತ್ನದಿಂದ ತಡೆಯಲ್ಪಟ್ಟುದಾದರೂ ಅಧರೋಷ್ಠವು ನಾಸಾಪುಟಂಗಳು ಸಹ ಕಂಪಿಸುವುದಱಿಂದ ಅನ್ಯಜನರು ಊಹಿಸುವುದಕ್ಕೆ ಯೋಗ್ಯವಾಗಿ ಇದೆ'' ಎಂಬ ಲಕ್ಷ್ಮಣನ ವಾಕ್ಯವಂ ಕೇಳಿ ಶ್ರೀರಾಮನು–'' ಎಲೈ ಲಕ್ಷ್ಮಣನೇ, ಪೂರ್ವದಲ್ಲಿ ಪ್ರಿಯಳಾದ ಸೀತೆಯ ವಿರಹದಿಂ ಪುಟ್ಟಿದ ದುಃಖವೆಂಬ ಅಗ್ನಿಯು ಅತಿದುಸ್ಸಹವಾಗಿದ್ದರೂ ಅಂಥ ದುಃಖಕ್ಕೆ ಕಾರಣಭೂತನಾದ ರಾವಣನಿಗೆ ಪ್ರತಿಕ್ರಿಯೆಯಂ ಮಾಡಲಿಚ್ಛೆಯಿಂದ ನಾನು ಆ ದುಃಖವಂ ಸಹಿಸಿದೆನು. ಈಗ ಆ ದುಃಖಾಗ್ನಿಯು ಮನಸ್ಸಿನಲ್ಲಿ ಪ್ರಬಲವಾಗಿ ಹೃದಯದ ಮರ್ಮಸ್ಥಾನಗಳಲ್ಲಿ ಪುಟ್ಟಿದ ವ್ರಣದಂತೆ ದುಸ್ಸಹವಾದ ವೇದನೆಯನುಂಟುಮಾಡುತಲಿದೆ'' ಎಂದು ದುಃಖಿಸುತ ಪೇಳಿದವನಾಗಲು; ಆಗ ಸೀತೆಯು, ಆರೀತಿ ಪ್ರಿಯನು ದುಃಖಿಸುವುದಕ್ಕೆ ತಾನೇ ಮೂಲವಾದೆನೆಂದು ತನ್ನಂ ನಿಂದಿಸುತ್ತ, '' ಎಲೈ ಲಕ್ಷ್ಮಣನೇ, ಈಗ ನಾನೂಕೂಡ ಅತಿವೃದ್ಧಿಯನೈದಿರುವ ಈ ಮನೋವ್ಯಾಕುಲತ್ವದಿಂ ಪತಿವಿರಹವನ್ನನುಭವಿಸುತ್ತಲಿರುವಳಂತೆ ಮನಸ್ಸಿನಲ್ಲಿ ಭಾವಿಸುತ್ತೇನೆ'' ಎಂದು ವ್ಯಸನಪಟ್ಟಳು.

ಅದಂ ನೋಡಿ ಲಕ್ಷ್ಮಣನು ತನ್ನ ಮನಸ್ಸಿನಲ್ಲಿ ಈ ಜನಸ್ಥಾನವೃತ್ತಾಂತವು ಇವರಿಬ್ಬರಿಗೂ ಅತಿ ದುಃಖಕರವಾದ ಕಾರಣ, ಇದಂತಿರಲಿ, ಮುಂದಕ್ಕೆ ಕರೆದುಕೊಂಡು ಹೋಗೋಣವೆಂದು ಚಿಂತಿಸಿ, ಚಿತ್ರವಂ ನೋಡಿ, ಪ್ರಕಟವಾಗಿ–'' ಎಲೌ ಪೂಜ್ಯಳೇ, ಅಲ್ಲಿಂದ ಇತ್ತಲು ಈಮನ್ವಂತರದಲ್ಲಿ ಪೂರ್ವಿಕನಾಗಿ ಗೃಧ್ರಾಧಿಪತಿಯಾಗಿ ಪೂಜ್ಯನಾಗಿ ತಂದೆಯಾಗಿಯೂ ಇರುವ ಜಟಾಯುವಿನ ಚರಿತೆಯು ಅವನ ಪರಾಕ್ರಮವು ಸಹ ಬರೆದು ಇದೆ, ಇದಂ ನೋಡು'' ಎಂದು ಚಿತ್ರವಂ ತೋಱಿಸಲು; ಸೀತೆಯು ಚಿತ್ರದಲ್ಲಿ ಜಟಾಯುವಂ ನೋಡಿ,'' ಎಲೈ ತಂದೆಯಾದ ಜಟಾಯುವೇ, ನನ್ನ ನಿಮಿತ್ತವಾಗಿ ನೀನು ಪ್ರಾಣಗಳಲ್ಲೂ ದೃಷ್ಟಿಯನ್ನಿಡದೆ ಪುತ್ರವಾತ್ಸಲ್ಯವಂ ನಿರ್ವಹಿಸಿದವನಾದೆಯಲ್ಲಾ!'' ಎಂದು ಪೇಳಲು; ಶ್ರೀರಾಮನು ನೋಡಿ, '' ಎಲೈ ತಂದೆಯೇ, ಕಶ್ಯಪಮುನಿಪುತ್ರನೇ, ಎಲೈ ಪಕ್ಷಿರಾಜನಾದ ಜಟಾಯುವೇ, ಲೋಕದಲ್ಲಿ ಮಹಾತ್ಮನಾಗಿ ಪೂಜ್ಯನಾಗಿ ಸಾಧುವಾಗಿಯೂ ಇರುವ ನಿನ್ನಂಥ ಬಂಧುವು ಪುನಃ ಎಲ್ಲಿ ಹುಟ್ಟುವನು? ಎಲ್ಲೂ ಇಲ್ಲ'' ಎನಲು;

ಲಕ್ಷ್ಮಣಸ್ವಾಮಿಯು ಚಿತ್ರವಂ ತೋಱಿಸುತ–" ಎಲೌ ತಾಯೇ, ಇದು ಜನಸ್ಥಾನಕ್ಕೆ ಪಶ್ಚಿಮವಾಗಿ ದನುಜಕಬಂಧನಿಂದ ವಾಸಂಗೈಯಲ್ಪಟ್ಟ ಕ್ರೌಂಚಾರಣ್ಯವೆಂಬ ದಂಡಕಾರಣ್ಯದ ಪ್ರದೇಶವು. ಇದಱ ಸಮೀಪದಲ್ಲೇ ಇರುವ ಇದೇ ಮತಂಗಾಶ್ರಮವು-ಇವಳೇ ತಪಸ್ಸಿದ್ಧಿಯಂ ಪಡೆದಿರುವ ಶ್ರಮಣಿಯೆಂಬ ಶಬರಿಯು. ಇದೇ ಆ ಪಂಪಾಸರಸ್ಸು, ನೋಡು" ಎಂದು ಚಿತ್ರವಂ ತೋಱಿಸಿದನು. ಸೀತೆಯು ಆ ಪಂಪಾಸರೋವರವಂ ನೋಡಿ–" ಎಲೈ ಲಕ್ಷ್ಮಣನೇ, ಈ ಪ್ರದೇಶದಲ್ಲಿ ಪ್ರಿಯನಾದ ಸ್ವಾಮಿಯು ರಾವಣನ ವಿಷಯದಲ್ಲಿ ಕೋಪಯುಕ್ತನಾಗಿ ನನ್ನ ವಿರಹದಿಂ ದೀನನಾಗಿಯೂ ತಡೆಯಿಲ್ಲದೆ ಕಂಠಧ್ವನಿಯಂ ಬಿಟ್ಟು ದುಃಖಿಸಿದವನಾದನಲ್ಲವೆ ?" ಎಂದು ಪೇಳಲು ; ಶ್ರೀರಾಮನು ಸೀತೆಯಂ ಕುಱಿತು–" ಎಲೌ ಸೀತಾದೇವಿಯೇ, ಈ ಪಂಪಾಸರಸ್ಸು ಬಹು ರಮಣೀಯವಾದುದು. ಮಹತ್ತಾದ ಈ ಸರಸ್ಸಿನಲ್ಲಿ ಮದಯುಕ್ತಗಳಾಗಿರುವ ಹಂಸಪಕ್ಷಿಗಳು ಪಕ್ಷಂಗಳಂ ಕೊಡಹುವುದಱಿಂದ ಚಲಿಸುತ್ತಲಿರುವ ಮಹತ್ತುಗಳಾದ ನಾಳಂಗಳುಳ್ಳ ಕಮಲಂಗಳಿಂ ಕನ್ನೈದಿಲೆಗಳಿಂದಲೂ ಶೋಭಿಸುವ ಈ ಸರಸ್ಸಿನ ಮಧ್ಯಪ್ರದೇಶಂಗಳಂ, ನಾನು ನೇತ್ರಗಳಲ್ಲಿ ತುಂಬಿರುವ ಬಾಷ್ಪಜಲವು ಕೆಳಕ್ಕೆ ಬಿದ್ದು ಪುನಃ ತುಂಬುವಷ್ಟಱೊಳಗೆ, ಚೆನ್ನಾಗಿ ನೋಡಿದೆನು" ಎಂದು ಪೇಳಿದುದನ್ನು ಕೇಳಿ, ಲಕ್ಷ್ಮಣನು–" ಇವನೇ ಪೂಜ್ಯನಾದ ಹನುಮಂತನು" ಎಂದು ಚಿತ್ರವಂ ತೋಱಿಸಲು ; ಸೀತೆಯು ನೋಡಿ, "ಈತನೇ ದುಷ್ಟರಾದ ರಾಕ್ಷಸರ ಬಾಧೆಯಿಂ ಬಹುಕಾಲ ದುಃಖಸಾಗರದಲ್ಲಿ ಮುಳುಗಿರುವ ಸಮಸ್ತ ಪ್ರಾಣಿಗಳಂ ಪುನಃ ಉದ್ಧಾರವಂ ಮಾಡಿ ಮಹತ್ತಾದ ಉಪಕಾರವಂ ಮಾಡಿದನಾದಕಾರಣ ಮಹಾನುಭಾವನಾದ ಆಂಜನೇಯನು" ಎಂದು ನೋಡಲು ; ಶ್ರೀರಾಮನು–" ಎಲೌ ಸೀತೆಯೇ, ಯಾವನ ಪರಾಕ್ರಮದಿಂ ನಾವು ಕೃತಾರ್ಥರಾದೆವೊ, ಸಮಸ್ತ ಲೋಕಗಳು ಸಹ ಕೃತಾರ್ಥಗಳಾದುವೊ ಮಹಾಬಲವಂತನಾದ ಆ ಹನುಮಂತನೇ ಈತನು ; ಬಹು ಚೆನ್ನಾಯಿತು !" ಎಂದು ನೋಡಿದನು.

ಸೀತೆಯು ಚಿತ್ರವಂ ನೋಡುತ–" ಎಲೈ ಲಕ್ಷ್ಮಣನೇ, ಪುಷ್ಪಯುಕ್ತಗಳಾದ ಕದಂಬವೃಕ್ಷಗಳಲ್ಲಿ ನರ್ತನವಂ ಮಾಡುತಲಿರುವ ನವಿಲುಗಳುಳ್ಳ ಈ ಪರ್ವತದ ನಾಮಧೇಯವೇನು ? ಈ ಪರ್ವತದಲ್ಲಿ ಕಟಾಕ್ಷವೀಕ್ಷಣ ಮೊದಲಾದ ಶರೀರವ್ಯಾಪಾರಂಗಳು ಅತಿರಮಣೀಯಗಳಾಗಿ ಇರ್ಶೋಣದಱಿಂದ ಮಾತ್ರವೆ ಅವಶಿಷ್ಟವಾಗಿ ಮಲಿನವಾಗಿಯೂ ಇರುವ ಕಾಂತಿಯುಳ್ಳವನಾಗಿ ಮೂರ್ಛೆಯನ್ನೈದುತಲಿರುವನಾದುದಱಿಂ ದುಃಖಿಸುವ ನಿನ್ನಿಂದ ಅವಲಂಬಿಸಲ್ಪಟ್ಟವನಾಗಿಯೂ ಪ್ರಿಯನಾದ ಸ್ವಾಮಿಯು ಈ ವೃಕ್ಷಮೂಲದಲ್ಲಿ ಬರೆಯಲ್ಪಟ್ಟು ಇದ್ದಾನೆ" ಎಂದು ಪೇಳಲು ; ಲಕ್ಷ್ಮಣನು–" ಎಲೌ ಪೂಜ್ಯಳೇ, ಕಕುಭಗಳೆಂಬ ವೃಕ್ಷವಿಶೇಷಂಗಳ ಪುಷ್ಪಂಗಳಿಂ ಮರಿಯಳಯುಕ್ತಗಳಾಗಿರುವ ಈ ಪರ್ವತವು ಮಾಲ್ಯವಂತವೆಂದು ಪ್ರಸಿದ್ಧವಾಗಿಹುದು. ಈ ಪವರ್ತದಲ್ಲಿ ನೀಲವರ್ಣವಾಗಿ ಮೆಱೆಯುತಲಿರುವ ನೂತನವಾದ ಮೇಘವು ಶಿಖರವನ್ನಾಶ್ರೈಸುತಲಿದೆ, ನೋಡು. ಈ ಪರ್ವತದಲ್ಲಿ ಪೂಜ್ಯನಾದ ಅಣ್ಣನು—"ಎಂದು ಲಕ್ಷ್ಮಣನು ಸ್ವಾಮಿಯಿಂ ಅನುಭವಿಸಲ್ಪಟ್ಟ ವಿರಹವೇದನಾತಿಶಯವಂ ಸೀತೆಗೆ ತಿಳಿಸೋಣವೆಂದು ಪ್ರಾರಂಭಿಸುವಷ್ಟಱೊ

ಳಗೆ ಅದಂ ಸಹಿಸಲಾಱದೆ ಶ್ರೀರಾಮನು—"ಎಲೈ ಲಕ್ಷ್ಮಣನೇ, ನಿಲ್ಲಿಸು, ನಿಲ್ಲಿಸು. ಅಲ್ಲಿಂದ ಮುಂದಣ ವೃತ್ತಾಂತವಂ ನೀನು ಪೇಳುವುದಂ ನಾನು ಸಹಿಸುವುದಕ್ಕೆ ಸಮರ್ಥನಲ್ಲ. ಪುನಃ ನನಗೆ ಆ ಸೀತಾವಿರಹವು ತಿರಿಗಿ ಬಂದಂತೆ ತೋಱುತ್ತಲಿದೆ" ಎಂದು ಪೇಳಲು; ಲಕ್ಷ್ಮಣನು—"ಎಲೈ ಸ್ವಾಮಿಯೆ, ಈ ಚಿತ್ರದಲ್ಲಿ ಇಲ್ಲಿಂ ಮುಂದೆ ಪೂಜ್ಯನಾದ ಸ್ವಾಮಿಯು ಪೂಜ್ಯರಾದ ಸುಗ್ರೀವ ಮೊದಲಾದ ವಾನರಾಧಿಪತಿಗಳು ರಾಕ್ಷಸರು ಸಹ ಈ ಮೂವರುಗಳ ಎಣಿಸಲಶಕ್ಯಗಳಾಗಿ, ಸರ್ವೋತ್ಕೃಷ್ಟಂಗಳಾಗಿ, ಮುಂದೆ ಮುಂದೆ ಅತಿಶಯವಾಗಿ ಇರುವುದಾದಕಾರಣ ಆಶ್ಚರ್ಯಕರಗಳಾಗಿ ಇರುವ ಪರಾಕ್ರಮ ವ್ಯಾಪಾರಂಗಳು ಲಿಖಿತಗಳಾಗಿ ಇವೆ. ಪೂಜ್ಯಳಾದ ಈ ದೇವಿಯು ನಿಂತುಕೊಂಡು ಬಹುಕಾಲ ಚಿತ್ರವಂ ನೋಡಿದುದಱಿಂದ ಬಳಲಿದವಳಾದುದಱಿಂ ವಿಶ್ರಮಿಸುವಳಾಗಲಿ ಎಂದು ಬಿನ್ನವಿಸುವೆನು" ಎನಲು; ಆಗ ಸೀತೆಯು—"ಎಲೈ ಪ್ರಿಯನೇ, ಚಿತ್ರದರ್ಶನದಿಂ ನನಗೆ ಒಂದು ಮನೋರಥವು ಜನಿಸುತ್ತಲಿದೆ" ಎಂದಳು. ಅದಂ ಕೇಳಿ ಸ್ವಾಮಿಯು—"ಎಲೌ ಪ್ರಿಯಳೆ, ನಿನ್ನ ಮನೋರಥವಂ ನನಗೆ ತಿಳಿಯಿಸಬಾರದೆ?" ಎನಲು; ಆಗ ಸೀತೆಯು—"ಎಲೈ ಪ್ರಿಯನೇ, ಪುನಃ ನಾನು ನಿರ್ಮಲಗಳಾಗಿ ನಿಬಿಡಂಗಳಾಗಿಯೂ ಇರುವ ವನಪಙ್ತಿಗಳಲ್ಲಿ ವಿಹರಿಸುವಳಾಗಬೇಕು. ಮತ್ತು ಸ್ನಾನಮಾತ್ರದಿಂದಲೇ ಜನವಂ ಪರಿಶುದ್ಧರನ್ನಾಗಿ ತೇಜೋವಂತರನ್ನಾಗಿ ಸಂತಾಪರಹಿತರನ್ನಾಗಿಯೂ ಮಾಡುವ ಪೂಜ್ಯಳಾದ ಗಂಗೆಯಲ್ಲಿ ಪ್ರವೇಶಿಸಿ ಸ್ನಾನವಂ ಮಾಡಬೇಕು." ಎಂದು ತನ್ನ ಮನೋರಥವಂ ಬಿನ್ನವಿಸಿದಳು.

ಅದಂ ಕೇಳಿ ಶ್ರೀರಾಮನು ಲಕ್ಷ್ಮಣನಂ ಕುಱಿತು—"ಎಲೈ ಸೌಮ್ಯನೇ, ಈಗ ತಾನೇ ಈ ಸೀತೆಯು ಬಯಸಿದ ಮನೋರಥವಂ ನೀನು ಶೀಘ್ರದಿಂ ಪೂರಿಸುವನಾಗೆಂದು ನಮ್ಮ ಗುರುಜನರು ಅಷ್ಟಾವಕ್ರಮುನಿಯ ಮುಖಾಂತರದಿಂದ ನನ್ನಂ ಕುಱಿತು ಆಜ್ಞಾಪಿಸಿದರಾದಕಾರಣ ಪೂರ್ಣಗರ್ಭಿಣಿಯಾದ ಈ ಪ್ರಿಯಳು ಕುಳಿತು ಸುಖದಿಂ ಪೋಗುವುದಕ್ಕೋಸುಗ ಜಾಱದಂತೆ ಮುಗ್ಗುರಿಸದಂತೆಯೂ ಇರುವ ಯೋಗ್ಯವಾದ ರಥವಂ ನೀನು ತರಿಸುವನಾಗು" ಎಂದು ನಿರೂಪಿಸಲು; ಆಗ ಸೀತಾದೇವಿಯು ಸ್ವಾಮಿಯಂ ಕುಱಿತು—"ಎಲೈ ಕಾಂತನೇ, ನೀವು ನನ್ನೊಡನೆ ಬರುವವರಾಗಬೇಕೆಂದು ಬಿನ್ನವಿಸಲು; ಶ್ರೀರಾಮನು—"ಎಲೌ ಕಠಿನಚಿತ್ತಳೇ, ನೀವು ಸಂಗಡಲೇ ಬರಬೇಕೆಂಬ ಅರ್ಥವು ಕೂಡ ನನಗೆ ತಿಳಿಸತಕ್ಕುದೆ ಏನು? ನಾವೇ ಸ್ವತಃ ಬರುತ್ತೇವೆ" ಎಂದು ಪೇಳಿದನು. ಅದಂ ಕೇಳಿ ಸೀತೆಯು—"ನೀವು ಸಂಗಡ ಬರುವುದಱಿಂದ ನನಗೆ ಸಂತೋಷವಲ್ಲವೆ, ಸಂತೋಷವಲ್ಲವೆ!" ಎಂದಳು.

ಆಬಳಿಕ ಲಕ್ಷ್ಮಣನು ಸ್ವಾಮಿಯು ಆಜ್ಞಾಪಿಸಿದ ಪ್ರಕಾರವಾಗಿ ರಥವಂ ತರಿಸುವನಾಗುತ್ತೇನೆ ಎಂದು ಪೇಳಿ ಶ್ರೀರಾಮನ ಸನ್ನಿಧಿಯಿಂದ ತೆರಳಿಪೋದನು.

ಅನಂತರದಲ್ಲಿ ಸ್ವಾಮಿಯು ಸೀತೆಯಂ ಕುಱಿತು—"ಎಲೌ ಪ್ರಿಯಳೇ, ನೀನು ಚಿತ್ರದರ್ಶನದಿಂ ಬಹು ಬಳಲಿದೆಯಾದ ಕಾರಣ ಈ ಗವಾಕ್ಷಿಯ ಗೂಡಿನ ಸಮೀಪದಲ್ಲಿರುವ ಜಗಲಿಯಲ್ಲಿ ಒಂದು ಮುಹೂರ್ತ ನಿದ್ರೆಗೈಯುವಳಾಗು" ಎನಲು; ಸೀತೆಯು—

"ಎಲೈ ಪ್ರಿಯನೆ, ಹಾಗೆ ಆಗಲಿ. ನಾನು ಅತಿಶ್ರಮದಿಂ ಪುಟ್ಟಿದ ನಿದ್ರೆಯಿಂ ಪರವಶಳಾಗಿ ಮುಂದಕ್ಕೆ ಅಡಿಯನ್ನಿಡಲಾಱೆನಲ್ಲವೇ!" ಎಂದಳು. ಶ್ರೀರಾಮನು—"ಎಲೌ ಪ್ರಿಯಳೇ, ನೀನು ನಿದ್ರಾಪರವಶಳಾದೆಯಾದಕಾರಣ ಈ ಹಾಸಿಗೆಗೆ ಹೋಗುವ ಪರಿಯಂತವು ದೃಢವಾಗಿ ನನ್ನನ್ನವಲಂಬಿಸುವಳಾಗಬಾರದೆ? ಎಲೌ ಕಾಂತೆಯೇ, ಚಿತ್ರದಲ್ಲಿ ರಾಕ್ಷಸರಂ ಕಂಡು ಅವರ ವೃತ್ತಾಂತವಂ ಕೇಳಿದುದಱಿಂ ಭಯವೂ, ಇದುವರೆಗೂ ನಿಂತುಕೊಂಡು ನೋಡಿದುದಱಿಂ ಶ್ರಮವೂ ಸಹ ಈ ಉಭಯದಿಂ ಪುಟ್ಟಿದ ಸ್ವೇದಜಲಬಿಂದುಗಳೊಡನೆ ಶೋಭಿಸುವುದಾದಕಾರಣ, ಚಂದ್ರಕಿರಣಸಂಪರ್ಕದಿಂ ಬಿಂದುಗಳಂ ಬಿಡುತಲಿರುವ ಚಂದ್ರಕಾಂತಮಣಿಮಯವಾದ ಹಾರದ ವಿಲಾಸವನಂಗೀಕರಿಸುತ್ತಲಿರುವ ನಿನ್ನ ಭುಜವಂ ನನ್ನ ಕಂಠದಲ್ಲಿ ಇರಿಸಿ, ಈ ಚಿತ್ರದರ್ಶನದಿಂ ಪೂರ್ವವಾದ ವಿರಹಸಂತಾಪವು ಸ್ಮರಣೆಗೆ ಬಂದುದಱಿಂ ಪರಿತಪ್ತನಾದ ನನ್ನಂ ಬದುಕಿಸುವಂತೆ ಮಾಡುವಳಾಗು" ಎಂದು ಪೇಳಿ, ಅದೇ ರೀತಿ ಸೀತೆಯಿಂದ ಅಂಥ ಭುಜವಂ ತನ್ನ ಕಂಠದಲ್ಲಿ ಮಡಗಿಸುತ, ಆನಂದಯುಕ್ತನಾಗಿ ಸೀತೆಯಂ ಕುಱಿತು—"ಎಲೌ ಕಾಂತೆಯೇ, ಇದೇನೋ ನಾನಱಿಯೆ. ನಿನ್ನ ಅಂಗಸ್ಪರ್ಶವುಂಟಾಗಲು ಒಂದಾನೊಂದು ವಿಕಾರವು ಚಕ್ಷುರಾದೀಂದ್ರಿಯಸಮೂಹವ್ಯಾಪಾರಂಗಳಂ ತಡೆಯುತಲಿರುವುದಾಗಿ ಚೈತನ್ಯವಂ ಭ್ರಮಿಸುವಂತೆ ಮಾಡುತ್ತಲಿದೆ, ಮತ್ತು ನಿಶ್ಶೇಷವಾಗಿ ಅದಂ ಅಪಹರಿಸುತಲೂ ಇದೆ. ಇದು ಏನು? ಸುಖಾತಿಶಯವೆಂದೂ ದುಃಖವಿಶೇಷವೆನುತಲಾದರೂ ಮಹಾಮೋಹವೆನುತಲಾದರೂ ನಿದ್ರೆಯೆನುತಲಾದರೂ ವಿಷವ್ಯಾಪ್ತಿಯೆನುತಲಾದರೂ ಏನೋ ಮದವಿಶೇಷವೆನುತಲಾದರೂ ಸರ್ವಪ್ರಯತ್ನದಿಂದಲೂ ನಿಶ್ಚಯಿಸಲು ಶಕ್ಯವಲ್ಲವು" ಎಂಬ ಪ್ರಿಯನ ವಚನವಂ ಕೇಳಿ ಸೀತೆಯು—"ಎಲೈ ಸ್ವಾಮಿ, ಆ ರೀತಿ ನನ್ನಲ್ಲಿ ನಿಮಗೆ ಅನುಗ್ರಹವು ಸ್ಥಿರವಾಗಿ ಇದೆಯಾದಕಾರಣ ಈ ರೀತಿ ನಿಮಗೆ ಮೋಹಾವೇಶವುಂಟಾಗುವುದಱಲ್ಲಿ ಆಶ್ಚರ್ಯವೇನು ಇದೆ?" ಎನಲು; ಶ್ರೀರಾಮನು ಆ ಮಧುರವಚನವಂ ಕೇಳಿ, "ಎಲೌ ಪ್ರಿಯಳೇ, ಕಮಲಲೋಚನೆಯಾದ ನಿನ್ನ ಈ ರಸಭರಿತಗಳಾದ ವಚನಂಗಳು ವ್ಯಸನಂಗಳಿಂ ಬಾಡಿರುವ ಜೀವವೆಂಬ ಪುಷ್ಪಕ್ಕೆ ಪುನಃ ವಿಕಾಸಕರಂಗಳಾಗಿ ಅಮೃತದಂತೆ ಪರಮತೃಪ್ತಿಕರಂಗಳಾಗಿ ಸಕಲೇಂದ್ರಿಯಂಗಳಿಗೂ ಮೋಹಕರಂಗಳಾಗಿ ಕರ್ಣಾಮೃತಂಗಳಾಗಿ ಮನೋರೋಗಂಗಳಂ ಪರಿಹರಿಸುವುದಱಲ್ಲಿ ಸಿದ್ಧರಸಾಯನಂಗಳಾಗಿಯೂ ಇವೆ" ಎಂದು ಸೀತಾವಚನವಂ ಬಣ್ಣಿಸಿದನು. ಅದಂ ಕೇಳಿ ಸೀತೆಯು—"ಎಲೈ ಪ್ರಿಯಭಾಷಿಯಾದ ಪ್ರಾಣಕಾಂತನೇ, ಚಿತ್ತಯಿಸು, ಮಲಗೋಣ" ಎನಲು; ಶ್ರೀರಾಮನು—"ಎಲೌ ಪ್ರಿಯಳೇ, ಈ ಅರ್ಥವು ನನಗೆ ತಿಳಿಸತಕ್ಕುದೇನು? ಎಲೌ ಕಾಂತೆಯೇ, ವಿವಾಹ ಸಮಯದಿಂ ಮೊದಲುಗೊಂಡು ಸಕಲಸಂಪತ್ತುಗಳಿಂ ಪರಿಪೂರ್ಣವಾದ ಅರಮನೆಯಲ್ಲಾದರೂ ವನದಲ್ಲಾದರೂ ಬಾಲ್ಯದಲ್ಲಾದರೂ ಅನಂತರ ಯೌವನದಲ್ಲಾದರೂ ಅನ್ಯಳಾದ ಒಬ್ಬ ಸ್ತ್ರೀಯಿಂದಲು ನಿದ್ರೆಗೆ ಅನುಕೂಲವಾಗಿ ಪಡೆಯಲಶಕ್ಯವಾಗಿ ಇರುವ ಈ ರಾಮನ ಭುಜವು ನಿದ್ರೆಗೆ ಅನುಕೂಲವಾಗುವಂತೆ ನಿನಗೆ ತಲೆಗಡಿಯಾಗಲಿ!" ಎಂದು ಭುಜವಂ ನೀಡಲು; ಸೀತೆಯು ನಿದ್ರೆಯಂ ನಟಿಸುತ, "ಎಲೈ ಪ್ರಿಯನೇ, ಹಾ! ಬಿಡುಬಿಡು" ಎಂದು

ನಿದ್ರೆಗೈಯುತ್ತಿರಲು ; ಶ್ರೀರಾಮನು ನೋಡಿ, ಪ್ರಿಯಭಾಷಿಣಿಯಾದ ಸೀತೆಯು ನನ್ನ ವಕ್ಷಸ್ಸ್ಥಲವನ್ನವಲಂಬಿಸಿಕೊಂಡು ನಿದ್ರೆಯನ್ನೈದಿದಳು, ಎನುತ, ಭಾವಿಸಿ ನೋಡಿ, ಸ್ನೇಹದೊಡಗೂಡಿ ತನ್ನಲ್ಲಿ ತಾನೇ ಇಂತೆಂದನು :—ಈ ಸೀತೆಯು ಗುಣವತಿಯಾದುದಱಿಂ ಗೃಹದಲ್ಲಿ ಲಕ್ಷ್ಮಿಯಾಗಿ, ರೂಪವತಿಯಾದುದಱಿಂ ನೇತ್ರಗಳಿಗೆ ಅಮೃತಾಂಜನವಾಗಿಯೂ ಇಹಳು. ಈ ಪ್ರಿಯಳ ಅಂಗಸ್ಪರ್ಶವು ಸಂತಾಪಹರವಾದುದಱಿಂ ನನ್ನ ಶರೀರದಲ್ಲಿ ತುಂಬಿದ ಚಂದನದ್ರವವಾಗಿ ಇದೆ. ಮತ್ತು ಈ ಕಾಂತೆಯ ಭುಜವು ಶೀತಳವಾಗಿ ನುಣುಪಾಗಿಯೂ ಇರುವುದಱಿಂ ನನ್ನ ಕಂಠದಲ್ಲಿ ಮುಕ್ತಾಹಾರವಾಗಿರುವುದು. ಈ ಸೀತೆಯ ವಿಷಯದಲ್ಲಿ ಯಾವುದು ನನಗೆ ಅತಿಪ್ರಿಯಕರವಾದುದಲ್ಲ ? ಸಕಲವೂ ಇಷ್ಟವಾದುದೇ ಸರಿ. ಮತ್ತೇನೆಂದರೆ, ಈ ಸೀತೆಯ ವಿರಹಮಾತ್ರವು ಸಹಿಸಲು ಶಕ್ಯವಲ್ಲ, ಎಂದು ಸ್ವಾಮಿಯು ಪೇಳುತ ಸೀತಾಸಮೇತನಾಗಿ ಪವಡಿಸುತಿರಲು ;

ಅಷ್ಟಱೊಳಗೆ ದ್ವಾರಪಾಲಕಳಾದ ಸ್ತ್ರೀಯು ಸ್ವಾಮಿಯ ಸನ್ನಿಧಿಗೆ ಪ್ರವೇಶಂಗೈದು ಕೈಮುಗಿದು—“ ಎಲೈ ಸ್ವಾಮಿಯೇ, ಬಂದನು ಬಂದನು ಎಂದು ಬಿನ್ನವಿಸಲು ; ಶ್ರೀರಾಮನು—“ ಬಂದಬಂದನೆಂದು ಪೇಳಿದವನು ಯಾವನು ? ” ಎನಲು ; ಆಗ ದ್ವಾರಪಾಲಕಳು ಕೈಮುಗಿದು—“ ಎಲೈ ಸ್ವಾಮಿಯೇ, ತಮ್ಮ ಸನ್ನಿಧಿಯಲ್ಲಿ ಸೇವಕನಾಗಿರುವ ದುರ್ಮುಖನು ದ್ವಾರದಲ್ಲಿ ಬಂದು ಇದ್ದಾನೆ ” ಎಂದು ಬಿನ್ನವಿಸಲು ; ಶ್ರೀರಾಮನು ತನ್ನ ಮನಸ್ಸಿನಲ್ಲಿ—ಅಂತಃಪುರಸಂಚಾರಿಯಾದ ಈ ದುರ್ಮುಖನಂ ನಾನು ಪುರಸ್ಥರಾದ ಜನರಲ್ಲಿ ದೇಶದಲ್ಲಿರುವ ಜನರಲ್ಲಿಯೂ ನಮ್ಮ ವಿಷಯವಾಗಿ ನಡೆಯುವ ಗುಣದೋಷಪ್ರಸ್ತಾಪವಂ ತಿಳಿಯುವುದಕ್ಕೋಸುಗ ಗೂಢಚಾರನನ್ನಾಗಿ ಕಳುಹಿಸಿ ಇದ್ದೆನು. ಇವನು ಏನು ವೃತ್ತಾಂತವಂ ತಿಳಿದುಕೊಂಡು ಬಂದಿಹನೊ ಎಂದು ಚಿಂತಿಸಿ, ಪ್ರಕಟವಾಗಿ—“ ಎಲೌ. ದ್ವಾರಪಾಲಕಳೆ, ಅವನಂ ಇಲ್ಲಿಗೆ ಪ್ರವೇಶಂಗೈಸು ” ಎಂದು ಆಜ್ಞಾಪಿಸಲು ; ಅದಂ ಕೇಳಿ ದ್ವಾರಪಾಲಕಳು—ಹಾಗೆ ಆಗಲಿ ಎಂದು ಕೈಮುಗಿದು ತೆರಳಿದಳು.

ಆ ಬಳಿಕ ಆ ದುರ್ಮುಖನು ಅಂತಃಪುರದಲ್ಲಿ ಪ್ರವೇಶಂಗೈದು, ತನ್ನ ಮನಸ್ಸಿನಲ್ಲಿ—ಕಟಕಟ ! ಈಗ ನಾನು ಎಂತು ಸೀತಾದೇವಿಯಂ ಕುಱಿತು ಚಿಂತಿಸಲಶಕ್ಯವಾದ ಇಂಥ ಜನಾಪವಾದವನ್ನು ಸ್ವಾಮಿಗೆ ಹೇಳ್ವೇನು ? ಅಥವಾ ನಾನು ಈ ರೀತಿ ಚಿಂತಿಸಿ ಫಲವೇನು ? ಭಾಗ್ಯಹೀನನಾದ ನನಗೆ ಆ ಕ್ಷಣವೇ ತಿಳಿದ ವೃತ್ತಾಂತವಂ ಬಿನ್ನವಿಸುವಂತೆ ಸ್ವಾಮಿಯ ಆಜ್ಞೆ ಉಂಟಾಗಿದೆಯಲ್ಲವೆ ? ಎಂದು ಚಿಂತಿಸುತ್ತಿರಲು ;

ಅಷ್ಟಱೊಳಗೆ ಸೀತೆಯು ನಿದ್ರಾಮಧ್ಯದಲ್ಲಿ “ ಎಲೈ : ಚಂದ್ರನಂತೆ ನೇತ್ರಾನಂದಕರನಾದ ಪ್ರಿಯನೇ, ಎಲ್ಲಿ ಇರುವೆ ? ” ಎಂದು ಕಳವಳಿಸುವವಳಾಗಲು ; ಅದಂ ಕೇಳಿ ಶ್ರೀರಾಮನು—“ ಚಿತ್ರದರ್ಶನದಿಂ ಪುಟ್ಟಿದ ಅದೇ ವಿರಹಭಾವನೆಯು ಮನಸ್ಸಂ ವ್ಯಾಕುಲವನ್ನಾಗಿ ಮಾಡುವುದಾದಕಾರಣ ಸೀತೆಗೆ ಕಳವಳಿಕೆಯನ್ನುಂಟುಮಾಡುತ್ತಲಿದೆ ” ಎಂದು ಪೇಳುತ, ಸೀತೆಯ ಅಂಗವಂ ಸ್ಪರ್ಶಿಸುತ್ತ ಇಂತೆಂದನು :—“ ಯಾವ ಅನುಕೂಲದಾಂಪತ್ಯವು ಯಾವ ಸುಮಾನುಷವೆಂಬ ಪ್ರೌಢಾವಸ್ಥೆಯು ಸಹ ನಾನಾಪ್ರಕಾರಂಗಳಾದ ಅವಸ್ಥೆಗಳಲ್ಲಿ ಸಂಭವಿಸುವ ಸುಖದುಃಖಗಳಲ್ಲಿ ಸಹ ಪರಸ್ಪರ ಅಭೇದಭಾವನೆಯನ್ನು ಅನುಭ

ವಿಸಿಕೊಂಡಿರುವುದೊ, ಮತ್ತು ಯಾವ ಅನುಕೂಲದಾಂಪತ್ಯದಲ್ಲಿ ಯಾವ ಪ್ರೌಢಾವಸ್ಥೆಯಲ್ಲಿಯೂ ಪ್ರೌಢರಾದ ಆ ದಂಪತಿಗಳಂತೆ ಅವರ ಮನಸ್ಸುಗಳು ಒಂದಾಗಿ ವ್ಯಸನಗಳಂ ಬಿಟ್ಟು ವಿಶ್ರಾಂತಿಸುಖವನ್ನೈದುವುದೊ, ಇನ್ನು ಯಾವ ಅನುಕೂಲದಾಂಪತ್ಯದಲ್ಲಿ ಪ್ರೌಢಾವಸ್ಥೆಯಲ್ಲಿಯೂ ವೃದ್ಧತ್ವವು ಪ್ರಾಪ್ತವಾದರೂ ಅದಱಿಂದ ಪರಸ್ಪರ ಪ್ರೇಮಾತಿಶಯವು ತಗ್ಗದೆ ಸ್ಥಿರವಾಗಿರುವುದೊ ಮತ್ತು ಯಾವ ಅನುಕೂಲದಾಂಪತ್ಯವು ಯೌವನಬಲದಿಂ ಲಜ್ಜೆಯೆಂಬ ತೆರೆಯು ಅಪಹರಿಸಲ್ಪಡುವುದಾದಕಾರಣ ಸ್ನೇಹಸಾಗರದಲ್ಲಿ ಮಗ್ನವಾಗಿಹುದೊ, ಅಂಥ ಅನುಕೂಲದಾಂಪತ್ಯಕ್ಕೂ ಆ ಪ್ರೌಢಾವಸ್ಥೆಗೂ ಸಹ ಕ್ಷೇಮವುಂಟಾಗಲಿ! ಲೋಕದಲ್ಲಿ ಜನರು ಬಹು ಪ್ರಯತ್ನದಿಂದಲು ಅನುಕೂಲದಾಂಪತ್ಯವಂ ಆ ಪ್ರೌಢಾವಸ್ಥೆಯಂ ಪ್ರಾರ್ಥಿಸುವರಲ್ಲವೇ!'' ಎಂಬದಾಗಿ ಸ್ವಾಮಿಯು ಕ್ಷೇಮವಂ ಚಿಂತಿಸುತ್ತಲಿರಲು.

ಅಷ್ಟಱೊಳಗೆ ಆ ದುರ್ಮುಖನೆಂಬ ಭೃತ್ಯನು ಸ್ವಾಮಿಯ ಸಮೀಪವನ್ನೈದಿ ಕೈಮುಗಿದು, "ಭೂಪತಿಯು ಸರ್ವೋತ್ಕೃಷ್ಟನಾಗಿರಲಿ!'' ಎಂದು ಪೇಳಲು; ಶ್ರೀರಾಮನು–"ಎಲೈ ದುರ್ಮುಖನೇ ರಾಷ್ಟ್ರದಲ್ಲಿ ನೀನು ತಿಳಿದುಬಂದ ವೃತ್ತಾಂತವಂ ಪೇಳು'' ಎನಲು; ದುರ್ಮುಖನು–"ಎಲೈ ರಾಜಶ್ರೇಷ್ಠನೇ, ಪುರದಲ್ಲಿ ದೇಶದಲ್ಲಿ ಸಹ ಇರುವ ಜನರು ಶ್ರೀರಾಮನು ರಾಜ್ಯಾಧಿಪತಿಯಾದುದಱಿಂದ ನಾವು ಆತನ ಗುಣಾತಿಶಯಗಳಿಂ ಮಹಾರಾಜನಾದ ದಶರಥನಂ ಮಱೆತೆವು ಎಂದು ಸ್ವಾಮಿಯಂ ಹೊಗಳುತಿದ್ದಾರೆ'' ಎಂದು ಬಿನ್ನವಿಸಲು; ಅದಂ ಕೇಳಿ ಸ್ವಾಮಿಯು–"ಈ ಗುಣಶ್ಲಾಘನವಂತಿರಲಿ. ದೋಷಾಂಶವೇನಾದರೂ ಇದ್ದರೆ ಅದಂ ನನಗೆ ತಿಳುಹುವನಾಗು. ಅದಕ್ಕೆ ಪರಿಹಾರೋಪಾಯವಂ ಮಾಡೋಣ'' ಎಂದು ನಿರೂಪಿಸಲು; ದುರ್ಮುಖನು ಕಣ್ಣೀರಂ ಬಿಡುತ, ಭಯದಿಂ,–ಸ್ವಾಮಿಯು ಕೇಳಬೇಕೆಂದು ಕಿವಿಯಲ್ಲಿ ಹೀಗೆಂದು ಬಿನ್ನವಿಸಲು; ಅದಂ ಕೇಳಿ ಸ್ವಾಮಿಯು–"ಕಟಕಟಾ! ಈ ವಚನವೆಂಬ ವಜ್ರಾಯುಧವು ಅತಿತೀಕ್ಷ್ಣವಾದ ವೇಗವುಳ್ಳುದು'' ಎಂದು ಪೇಳುತ, ಮೂರ್ಛೆಯನ್ನೈದಲು; ದುರ್ಮುಖನು ಶ್ರೀರಾಮನಂ ಕುಱಿತು–"ಸ್ವಾಮಿಯು ಚಿತ್ತಸಮಾಧಾನವಂ ಮಾಡಬೇಕು ಮಾಡಬೇಕು,'' ಎಂದು ಬಿನ್ನವಿಸಿದನು. ಶ್ರೀರಾಮನು ವ್ಯಸನಯುಕ್ತನಾಗಿಯೇ ಚಿತ್ತವಂ ಸಮಾಧಾನವಂಗೈದು, "ಕಟಕಟ! ಈ ಲೋಕವ್ಯಾಪಾರವು ಬಹು ದುಷ್ಟವಾದುದು. ಅದೇನೆಂದರೆ: ಪೂರ್ವದಲ್ಲಿ ಬಹುಕಾಲ ರಾವಣಗೃಹದಲ್ಲಿ ವಾಸವುಂಟಾದುದಱಿಂ ಸೀತೆಗೆ ಬಂದ ಯಾವ ದೂಷಣವು ಅಗ್ನಿಪ್ರವೇಶ ಮೊದಲಾದ ಅತ್ಯಾಶ್ಚರ್ಯಕರಗಳಾದ ಉಪಾಯಂಗಳಿಂ ಪರಿಹರಿಸಲ್ಪಟ್ಟಿತೊ ಆ ಪರಗೃಹವಾಸದೂಷಣೆಯು ಈಗ ದೈವವು ಪ್ರತಿಕೂಲವಾದುದಱಿಂ ಹುಚ್ಚುನಾಯಿ ಕಚ್ಚೋಣದಱಿಂ ಜನಿಸುವ ವಿಷದಂತೆ ತಿರಿಗಿಯೂ ಸರ್ವತ್ರ ವ್ಯಾಪಿಸಿದಂತಾಯಿತು! ಭಾಗ್ಯಹೀನನಾದ ನಾನು ಆ ಲೋಕಾಪವಾದಪರಿಹಾರನಿಮಿತ್ತವಾಗಿ ಏನು ಮಾಡೇನು!'' ಎಂದು ಚಿಂತಿಸಿ, ಶೋಕದೊಡಗೂಡಿ, "ಈ ಜನಾಪವಾದಪರಿಹಾರಕ್ಕೆ ಸೀತಾಪರಿತ್ಯಾಗವೇ ಉಪಾಯವೆ ಹೊಱತು ಮತ್ತೊಂದು ಉಪಾಯವಿಲ್ಲ. ಸ್ವಭಾವದಿಂ ಪರಿಶುದ್ಧಳಾದ ಸೀತೆಯಂ ತ್ಯಜಿಸುವುದು ಹೇಗೆ?

ಎಂದರೆ–ಲೋಕದಲ್ಲಿ ಯಾವ ಕಾರ್ಯದಿಂದಲಾದರೂ ಸರ್ವಜನರಂ ಸಂತೋಷಪಡಿಸು ವುದು ಸತ್ಪುರುಷರಿಗೆ ವ್ರತವಾಗಿರುವುದು. ಆದುದಱಿಂದಲೇ ನಮ್ಮ ತಂದೆಯಾದ ದಶರ ಥರಾಯನು ಲೋಕಾಪವಾದಪರಿಹಾರಾರ್ಥವಾಗಿ ಅತ್ಯಂತ ಪ್ರೀತಿಪಾತ್ರನಾದ ನನ್ನಂ ಇಷ್ಟಂಗಳಾದ ಪ್ರಾಣಂಗಳಂ ಸಹ ತ್ಯಾಗಂಗೈದು ಸರ್ವಜನಸಂತೋಷವಂ ಮಾಡೋ ಣವೆಂಬ ಆ ವ್ರತವಂ ಪೂರ್ತಿಮಾಡಿದನು. ಮತ್ತು ಈಗತಾನೇ ನಮ್ಮ ಗುರುವಾದ ವಸಿಷ್ಠರು ಅಷ್ಟಾವಕ್ರಮುನಿಯ ಮುಖಾಂತರದಿಂ ನನ್ನಂ ಕುಱಿತು ಸರ್ವಪ್ರಕಾರದಿಂ ದಲೂ ಪ್ರಜಾರಂಜನವಂ ಮಾಡುವುದಱಲ್ಲಿ ಉದ್ಯುಕ್ತನಾಗಿ ಇರು ಎಂದು ಆಜ್ಞಾಪಿಸಿ ಇದ್ದಾರೆ. ಮತ್ತು ಸೂರ್ಯವಂಶೋತ್ಪನ್ನರಾಗಿ ಲೋಕಶ್ರೇಷ್ಠರಾಗಿಯೂ ಇರುವ ಭೂಪ ತಿಗಳು ಆಶ್ಚರ್ಯಕರವಾದ ತಮ್ಮ ಸಚ್ಚರಿತ್ರೆಯಂ ಯಾವ ಕುಲದಲ್ಲಿ ಪ್ರಖ್ಯಾತಿಯನ್ನೈದಿಸಿ ದರೋ ಅಂಥ ಈ ನಮ್ಮ ಕುಲದಲ್ಲಿ ಈಗ ನನ್ನ ಸಂಬಂಧದಿಂ ಅಪಕೀರ್ತಿಯು ಸಂಭವಿಸು ವುದಾದರೆ, ಕಟಕಟ! ಲೋಕದಲ್ಲಿ ನಾನು ಪುಣ್ಯಹೀನನಾಗಿ ಜನರ ನಿಂದೆಗೆ ಪಾತ್ರನಾ ಗುವೆನು. ಹಾ ಪಟ್ಟಾಭಿಷಕ್ತಳೇ! ಹಾ ಯಜ್ಞಭೂಮಿಯಲ್ಲಿ ಜನಿಸಿದವಳೇ! ಹಾ ಸ್ವಜನ್ಮ ದಿಂದ ಅನುಗ್ರಹಿಸಿ ಪರಿಶುದ್ಧಳಾಗಿ ಮಾಡಲ್ಪಟ್ಟ ಭೂಮಿಯುಳ್ಳವಳೇ! ಹಾ ರಾಜರ್ಷಿ ಯಾದ ಜನಕರಾಯನಿಗೆ ಪುತ್ರಿಯಾದವಳೇ! ಅಗ್ನಿಯಿಂ ವಸಿಷ್ಠಮಹಾಮುನಿಯಿಂ ಅರುಂಧತೀದೇವಿಯಿಂದಲೂ ಮಹಾಪರಿಶುದ್ಧಳೆಂದು ಶ್ಲಾಘಿಸಲ್ಪಟ್ಟವಳೇ! ಹಾ ಸದಾ ಚಾರಸಂಪನ್ನಳೇ! ಹಾ ರಾಮಮಯವಾದ ಜೀವವುಳ್ಳವಳೇ! ಹಾ ಮಹತ್ತರವಾದ ಅರ ಣ್ಯದಲ್ಲಿ ಪ್ರಿಯಳಾಗಿ ಸುಖಿಯಾಗಿಯೂ ಇದ್ದವಳೇ! ಹಾ ತಂದೆಯಾದ ದಶರಥರಾಯ ನಿಗೆ ಇಷ್ಟವಾದವಳೇ! ಹಾ ಮಿತಭಾಷಿಣಿಯಾದವಳೇ! ಎಲೌ ಸೀತೆಯೇ! ಈರೀತಿ ಆಜನ್ಮಪರಿಶುದ್ಧತ್ವ ಮೊದಲಾದ ಅನೇಕ ಸದ್ಗುಣಗಳಿಂ ಪೂರ್ಣಳಾಗಿರುವ ಇಂಥ ನಿನಗೂ ಕೂಡ ಹೇಗೆ ಇಂಥ ಜನಾಪವಾದಮೂಲಕವಾದ ದುರ್ದಶೆಯು ಪ್ರಾಪ್ತವಾ ಯಿತು! ಎಲೌ ಪ್ರಿಯಳೇ! ಮತ್ತು ಈ ಲೋಕಂಗಳು ಮಹಾಪತಿವ್ರತೆಯಾದ ನಿನ್ನಿಂದ ಸುಕೃತಶಾಲಿಗಳಾಗಿವೆ; ಜನರ ವಚನಂಗಳಾದರೋ ನಿನ್ನ ವಿಷಯದಲ್ಲಿ ಪಾಪ ಯುಕ್ತಂಗಳಾಗಿವೆ- ಮತ್ತು ಸಮಸ್ತ ಲೋಕಂಗಳು ನಿನ್ನಿಂದ ನಾಥಯುಕ್ತಗಳಾ ಗಿವೆ; ನೀನಾದರೋ ಅನಾಥಳಾಗಿ ಕಷ್ಟಪಡುವಳಾಗುತ್ತೀಯೆ!'' ಎಂಬದಾಗಿ ಶ್ರೀರಾಮನು ಸೀತಾನಿಮಿತ್ತನಾಗಿ ಸಂತಾಪಪಟ್ಟು ಸಮೀಪದಲ್ಲಿ ನಿಂತಿರುವ ಆ ದುರ್ಮು ಖನಂ ಕುಱಿತು–'' ಎಲೈ ದುರ್ಮುಖನೇ, ನೀನು ಲಕ್ಷ್ಮಣನಿಗೆ ರಹಸ್ಯವಾಗಿ ಈ ಅರ್ಥವಂ ತಿಳುಹಿಸುವನಾಗು. ಅದೇನೆಂದರೆ: ನೂತನವಾಗಿ ರಾಜತ್ವವಂ ಪಡೆದಿರುವ ರಾಮನು ನಿನಗೆ ಆಜ್ಞಾಪಿಸುತ್ತಾನೆ'' ಎನುತ ಅವನ ಕಿವಿಯಲ್ಲಿ ಹೀಗೆಂದು ಆ ರಹಸ್ಯವಂ ತಿಳಿಸಿ ದನು. ಅದಂ ಕೇಳಿ ದುರ್ಮುಖನು ಕೈಮುಗಿದು–'' ಎಲೈ ಸ್ವಾಮಿಯೇ, ಅಗ್ನಿಮುಖದಿಂ ಪರಿಶುದ್ಧಳಾಗಿ ಮತ್ತು ಗರ್ಭದಲ್ಲಿ ಪರಿಶುದ್ಧರಾದ ರಘುಕುಲೋದ್ಧಾರಕರಾದ ಪುತ್ರರಂ ಧರಿಸುತ್ತಲಿರುವ ಇಂಥ ಸೀತಾದೇವಿಯಿಂ ಈಗ ದುರ್ಜನರ ವಚನದಿಂ ಹೇಗೆ ತ್ಯಾಗಂ ಗೈಯಬೇಕೆಂದು ಸ್ವಾಮಿಯಿಂ ನಿಶ್ಚೈಸಲ್ಪಟ್ಟಿತು?'' ಎನಲು; ಅದಂ ಕೇಳಿ ಶ್ರೀರಾ ಮನು–ದೋಷವಿಲ್ಲ ದೋಷವಿಲ್ಲವೆನುತ, '' ಎಲೈ ದುರ್ಮುಖನೇ, ನೀನು ಪುರದಲ್ಲಿರುವ

ಜನರ್ಗಂ ರಾಷ್ಟ್ರದಲ್ಲಿರುವ ಜನರುಂ ಸಹ ಹೇಗೆ ದುರ್ಜನರೆಂದು ಹೇಳುತ್ತೀಯೆ ? ನಮ್ಮ ಇಕ್ಷ್ವಾಕುವಂಶವು ಸಮಸ್ತ ಪ್ರಜೆಗಳಿಗೂ ಅತ್ಯಂತ ಇಷ್ಟವಾದುದೇ ಸರಿ. ಆದರೂ ಈಗ ದೈವಸಂಕಲ್ಪದಿಂ ಅಪವಾದಕ್ಕೆ ಒಂದು ಮೂಲ ಹುಟ್ಟಿತು. ಸೀತೆಗೆ ಪರಗೃಹವಾಸ ಮೂಲಕವಾದ ಆ ಅಪವಾದವಂ ಪರಿಹರಿಸಲೋಸುಗ ಅಗ್ನಿಶುದ್ಧಿಯಾಗುವ ಕಾಲದಲ್ಲಿ ಸಾಕ್ಷಾತ್ತಾಗಿ ಅಗ್ನಿಯೇ ಬಂದು ಸಕಲ ದೇವತೆಗಳೊಡಗೂಡಿ—ಎಲೈ ರಾಮನೇ, ಈ ಸೀತೆಯು ಕರಣತ್ರಯದಿಂ ಪರಿಶುದ್ಧಳಾದವಳೆಂದು ಪೇಳಿದನೆಂಬ ಯಾವ ಆಶ್ಚರ್ಯವಾದ ವ್ಯಾಪಾರವುಂಟು ಆ ವ್ಯಾಪಾರವಂ ಎಲ್ಲೋ ದ್ವೀಪಾಂತದಲ್ಲಿ ನಡೆದುದಱಿಂದ ಯಾರೂ ಯಥಾರ್ಥವೆಂದು ತಿಳಿಯುವುದಿಲ್ಲವಾದಕಾರಣ ನೀನು ಹೋಗಿ ನಾನು ಹೇಳಿದ ರಹಸ್ಯವಂ ಲಕ್ಷ್ಮಣನಿಗೆ ತಿಳುಹಿಸುವನಾಗು, ಪೋಗು '' ಎಂದು ಪೇಳಿದನು.

ಆ ಬಳಿಕ ಆ ದುರ್ಮುಖನು—'' ಎಲೌ ಜನಕರಾಯನ ಪುತ್ರಿಯಾದ ಸೀತಾದೇವಿಯೇ ! ಕಟಕಟಾ ! '' ಎನುತ ತೆರಳಿಪೋದನು.

ಆಗ ಶ್ರೀರಾಮನು ಈ ರೀತಿ ರಹಸ್ಯವಾಗಿ ಸೀತಾಪರಿತ್ಯಾಗವಂ ನಿಶ್ಚೈಸಿದುದಱಿಂ, ಹಾ ಕಷ್ಟವೆಂದು ಸಂತಾಪಪಡುತ,—'' ನಾನು ಅತಿ ಘೋರವ್ಯಾಪಾರವಂ ಮಾಡುವೆನಾದುದಱಿಂ ಘಾತುಕನಾಗುತ್ತೇನೆ. ಅದೆಂತೆನೆ : ಬಾಲ್ಯಪ್ರಭೃತಿಯಾಗಿ ಪ್ರಿಯವಚನಗಳಿಂ ಪೋಷಿಸಲ್ಪಟ್ಟವಳಾಗಿ ವಿಶ್ವಾಸಾತಿಶಯದಿಂ ನನ್ನನ್ನೇ ಆಶ್ರಯಿಸಿಕೊಂಡಿರುವ ಈ ಪ್ರಿಯಳಂ ಕಟುಕನು ತನ್ನ ಗೃಹದಲ್ಲಿ ಪೋಷಣದಿಂ ಬೆಳೆದಿರುವ ಪಕ್ಷಿಯಂ ಮೃತ್ಯುವಿಗೆ ಸಮರ್ಪಿಸುವಂತೆ ನಾನು ಕಪಟವ್ಯಾಪಾರದಿಂ ಮೃತ್ಯುವಿಗೆ ಒಪ್ಪಿಸುತ್ತೇನಲ್ಲಾ ! ಅದುಕಾರಣ ಪಾತಕಿಯಾದ ನಾನು ಅಸ್ಪೃಶ್ಯನಾದುದಱಿಂ ಆಜನ್ಮಪರಿಶುದ್ಧಳಾದ ಸೀತೆಯಂ ಸ್ಪೃಶಿಸುವನಾಗಿ ಏಕೆ ದೋಷಯುಕ್ತಳನ್ನಾಗಿ ಮಾಡಲಿ ! '' ಎಂದು ಚಿಂತಿಸಿ, ಶ್ರೀರಾಮನು ತನ್ನ ಭುಜದಲ್ಲಿ ಶಿರಸ್ಸನ್ನರ್ಪಿಸಿಕೊಂಡು ನಿದ್ರೆಗೈಯುವ ಸೀತಾದೇವಿಯ ಶಿರಸ್ಸಂ ತನ್ನ ಇಚ್ಛೆಯಿಂ ಮೇಲಕ್ಕೆ ಎತ್ತಿ ತನ್ನ ಭುಜವಂ ಹಿಂದಕ್ಕೆ ಸೆಳೆಯುತ್ತ ಸೀತೆಯಂ ಕುಱಿತು—ಎಲೌ ಮೂಢಳಾದ ಸೀತೆಯೇ, ಲೋಕದಲ್ಲಿ ಆಜನ್ಮಪರಿಶುದ್ಧಳಾಗಿ ಲಜ್ಜಾಯುಕ್ತಳಾಗಿ ಸತ್ಕರ್ಮಾನುಷ್ಠಾನಂಗಳಿಗೆ ಅನುಕೂಲಳಾಗಿ ವೀರರಾದ ಪುತ್ರರಂ ಪಡೆಯುವಳಾಗಿ ಪ್ರಿಯವಚನಗಳಂ ನುಡಿಯುವ ಇಂಥ ಸ್ತ್ರೀಯಂ ಯಾವನಾದರೂ ಪೂರ್ವದಲ್ಲಿ ತಾನು ದೋಷವಂ ನೋಡದೆ ತ್ಯಾಗಂಗೈಯಲಿಲ್ಲ. ಈಗ ನಾನು ಅಂಥ ನಿನ್ನಂ ದೋಷವನ್ನೋಡದೆ ತ್ಯಾಗಂಗೈದು ಅಕ್ಷಯವಾದ ನರಕಕ್ಕೆ ಯೋಗ್ಯನಾಗುವನು. ಅದುಕಾರಣ ಶ್ರೀಚಂದನವೃಕ್ಷವು ಎಂಬ ಭ್ರಾಂತಿಯಿಂ ಪರಿಣಾಮಕಾಲದಲ್ಲಿ ಸಹಿಸಲಶಕ್ಯವಾದ ವೃಕ್ಷವನ್ನಾಶ್ರೈಸಿದವಳಾದೆ ! '' ಎಂದು ಮೇಲಕ್ಕೆ ಎದ್ದವನಾಗಿ, '' ಕಟಕಟಾ ! ಈಗ ಪ್ರಪಂಚವು ವ್ಯತ್ಯಸ್ತವಾಯಿತು ! ಈಗ ರಾಮನು ಇದುವರೆಗೂ ಜೀವಿಸಿದುದಕ್ಕೆ ಫಲವುಂಟಾಯಿತು ! ಮತ್ತು ಈಗ ಜಗತ್ತೆಲ್ಲವೂ ಜೀರ್ಣಾರಣ್ಯವಾಯಿತು ! ಸಂಸಾರವೆಂಬುದು ನಿಸ್ಸಾರವಾದುದು : ನನಗೆ ಲೋಕದಲ್ಲಿ ರಕ್ಷಕನಾದವನು ಇಲ್ಲ ! ಏನು ಮಾಡಲಿ ! ಮುಂದೆ ನನಗೆ ಗತಿಯೇನು ! ಅಥವಾ ಈ ರೀತಿ ನಾನು ಏತಕ್ಕೆ ಚಿಂತಿಸಲಿ ? ಜಗತ್ತಿನಲ್ಲಿ ದುಃಖವನ್ನನುಭವಿಸುವುದಕ್ಕೋಸ್ಕರವೇ ಬ್ರಹ್ಮದೇವರು

ರಾಮನಲ್ಲಿ ಜೀವವನ್ನಿಟ್ಟು ಇದ್ದಾನೆ! ಈ ರೀತಿ ಮಹಾದುಃಖವನ್ನನುಭವಿಸುತ, –ಈ ಜೀವವು ಏತಕ್ಕೆ ಇರಬೇಕು? ಎಂದರೆ, ಮರ್ಮಗಳಂ ಭೇದಿಸುವ ಈ ಪ್ರಾಣಂಗಳು ಹೃದಯವೆಂಬ ಗೃಹದಲ್ಲಿ ಜೀವವಂ ಮಾಡಿಕೊಂಡು ತಾವು ವಜ್ರಮಯಂಗಳಾದ ಕೀಲುಗಳಂತೆ ಆಚರಿಸುತ ಆ ಹೃದಯದಿಂ ಜೀವವಂ ಹೊಱಡಲೀಸವಲ್ಲ. ಹಾ ತಾಯಾದ ಅರುಂಧತಿಯೇ! ಹಾ ಪೂಜ್ಯರಾದ ವಸಿಷ್ಠವಿಶ್ವಾಮಿತ್ರರೇ! ಹಾ ಪೂಜ್ಯನಾದ ಅಗ್ನಿಯೇ! ಹಾ ಭೂಮಿದೇವಿಯೇ! ಹಾ ಪೂಜ್ಯನಾದ ಜನಕರಾಯನೇ! ಹಾ ತಾಯಿಗಳಿರಾ! ಹಾ ಪ್ರಿಯಮಿತ್ರನಾದ ಮಹಾರಾಜನಾದ ಸುಗ್ರಿವನೇ! ಹಾ ಇಷ್ಟನಾದ ಹನುಮಂತನೇ! ಹಾ ಮಹತ್ತಾದ ಉಪಕಾರವಂ ಮಾಡಿರುವ ಲಂಕಾಧಿಪತಿಯಾದ ವಿಭೀಷಣನೇ! ಹಾ ಸೀತೆಗೆ ಪ್ರಿಯಸಖಿಯಾದ ತ್ರಿಜಟೆಯೇ! ಭಾಗ್ಯಹೀನನಾದ ರಾಮನು ನಿಮ್ಮಯೆಲ್ಲರಿಗೂ ಪರಮಸಮ್ಮತಳಾಗಿರುವ ಇಂಥ ಪೂರ್ಣಗರ್ಭಿಣಿಯಾದ ಸೀತೆಯಂ ತ್ಯಜಿಸುವನಾದ ಕಾರಣ ಪರಮಪೂಜ್ಯರಾದ ನಿಮ್ಮೆಲ್ಲರಂ ವಂಚಿಸಿದೆನು; ಅವಮಾನವಂ ಸಹ ಮಾಡಿದೆನು. ಅಥವಾ ಅರುಂಧತಿ ಮೊದಲಾಗಿರುವ ಆ ಪೂಜ್ಯರ ನಾಮಧೇಯಂಗಳಂ ಗ್ರಹಿಸುವುದಕ್ಕೆ ಈಗ ನಾನಾರು? ಕೃತಘ್ನನಾಗಿ ದುರಾತ್ಮನಾಗಿಯೂ ಇರುವ ಈ ನಾನು ಈಗ ಮಹಾತ್ಮರಾದ ಅವರ ನಾಮಗಳಂ ಗ್ರಹಿಸುವೆನಾದರೆ, ಪರಿಶುದ್ಧರಾದ ಅವರೂ ಕೂಡ ಪಾಪಯುಕ್ತರಾಗುವರು ಎಂದು ತಿಳಿಯುತ್ತೇನೆ. ಅದು ಹೇಗೆಂದರೆ: ನಂಬಿಕೆಯಿಂ ನನ್ನ ವಕ್ಷಸ್ಸನ್ನವಲಂಬಿಸಿಕೊಂಡು ನಿದ್ರೆಗೈಯುವಳಾಗಿ ಗೃಹಲಕ್ಷ್ಮಿಯಾಗಿ ಪರಿತಾಪದಿಂ ಚಲಿಸುತಲಿರುವ ಪರಿಪಕ್ವವಾದ ಗರ್ಭದಿಂ ಪೂರ್ಣಳಾಗಿಯೂ ಇರುವ ಇಂಥ ಪ್ರಿಯಳಾದ ಪತ್ನಿಯಂ ಕಠಿನಚಿತ್ತನಾಗಿ ಅರಣ್ಯದಲ್ಲಿ ಮಾಂಸವಂ ಭಕ್ಷಿಸುವ ವ್ಯಾಘ್ರ ಮೊದಲಾದ ದುಷ್ಟಪ್ರಾಣಿಗಳಿಗೆ ಬಲಿಯನ್ನಾಗಿ ಕೊಡುವೆನಾದಕಾರಣ ನಾನು ಕೃತಘ್ನನಾಗಿಯೂ, ದುರಾತ್ಮನಾಗಿಯೂ ಇರುವೆನಲ್ಲವೆ!'' ಎಂದು ಪೇಳುತ, ಶ್ರೀರಾಮನು ಸೀತೆಯ ಚರಣಂಗಳಂ ಶಿರಸ್ಸಿನಲ್ಲಿ ಇರಿಸಿಕೊಂಡು–''ಎಲೌ ಪ್ರಿಯಳೇ, ಇನ್ನುಮೇಲೆ ರಾಮನ ಶಿರಸ್ಸಿಗೆ ನಿನ್ನ ಪಾದಕಮಲಸ್ಪರ್ಶವಿಲ್ಲ. ಇದೇ ಕೊನೆ'' ಎಂದು ರೋದನಂಗೈಯುತ್ತಿರಲು;

ಅಷ್ಟಱೊಳಗೆ ವೇಷಧಾರಿಗಳಾದ ಗಾಯಕರಿಗೆ ಸ್ಥಾನವಾಗಿರುವ ನೇಪಥ್ಯವೆನಿಸಿಕೊಂಬುವ ತೆರೆಯೊಳಗಣ ಪ್ರದೇಶದಲ್ಲಿ, 'ಬ್ರಾಹ್ಮಣರಿಗೆ ಯೋಗ್ಯವಾದ ಉಪಶಾಂತಿಯು ಅವುದೋ ಆ ಶಾಂತಿಯು ನಿನ್ನ ರಾಜ್ಯದಲ್ಲಿ ಇಲ್ಲ' ವೆಂಬುದಾಗಿ ಒಂದು ಜನಘೋಷವುಂಟಾಯಿತು.

ಅದಂ ಕೇಳಿ ಶ್ರೀರಾಮನು, ''ಇದೇನೊ ತಿಳಿಯುವವರಾಗಿ'' ಎಂದು ದ್ವಾರಪಾಲಕರಂ ಕುಱಿತು ಆಜ್ಞಾಪಿಸಿದನು. ಆ ಬಳಿಕ ಪುನಃ ನೇಪಥ್ಯದಲ್ಲಿ–''ಎಲೈ ಮಹಾರಾಜನೇ, ಅತಿ ತೀಕ್ಷ್ಣವಾದ ತಪಸ್ಸಂಗೈಯುವರಾಗಿಯು ಯಮುನಾನದೀತೀರದಲ್ಲಿ ವಾಸವಂ ಮಾಡುತ್ತಲಿರುವ ಋಷಿಗಳ ಸಮೂಹವು ಲವಣಾಸುರನಿಂದ ಭಯಪಡಿಸಲ್ಪಟ್ಟುದಾಗಿ ನಿನ್ನಂ ಶರಣವನ್ನಾಗಿ ಹೊಂದಲೋಸುಗ ಬಂದು ಇದೆ'' ಎಂಬ ವಚನವಂ ಕೇಳಿ, ಶ್ರೀರಾಮನು–''ಇದೇನೈ! ಈಗಲೂ ಋಷಿಗಳಿಗೆ ರಾಕ್ಷಸರಿಂ ಭಯವುಂಟೆ?''

ಎಂದು ಚಿಂತಿಸಿ, "ಆಗಲಿ! ಋಷಿಗಳ ಕ್ಷೇಮಕ್ಕೋಸ್ಕರ ದುರಾತ್ಮನಾಗಿ ಮಧುರಾಪುರ ವಾಸಿಯಾಗಿ ಕುಂಭೀನಸಿಯೆಂಬ ರಾಕ್ಷಸಿಗೆ ಪುತ್ರನಾಗಿಯೂ ಇರುವ ಲವಣಾಸುರನ ಸಂಹಾರವಂ ಮಾಡಲೋಸುಗ ತಮ್ಮನಾದ ಶತ್ರುಘ್ನನಂ ಕಳುಹಿಸುತ್ತೇನೆ" ಎಂದು ಸ್ವಲ್ಪ ಮುಂದಕ್ಕೆ ಅಡಿಯಿಟ್ಟವನಾಗಿ, ಪುನಃ ಹಿಂದಕ್ಕೆ ತಿರಿಗಿ, ಸೀತೆಯಂ ನೋಡಿ– "ಹಾ ಪ್ರಿಯಳೇ! ನೀನು ಇಂಥ ಪೂರ್ಣಗರ್ಭಿಣಿಯಾಗಿ ಎಂತು ಅರಣ್ಯಕ್ಕೆ ಪೋಗುತ್ತೀಯೆ? ಎಲೌ ಪೂಜ್ಯಳಾದ ಭೂದೇವಿಯೇ, ದೋಷರಹಿತಳಾದುದಱಿಂ ಶ್ಲಾಘಿಸಲು ಯೋಗ್ಯಳಾಗಿರುವ ಜನಕರಾಯನಿಗೆ ಪುತ್ರಿಯಾದ ಈ ಸೀತೆಯಂ ಸರ್ವಪ್ರಯತ್ನದಿಂದಲೂ ಕಾಯುವವಳಾಗು. ಎಲೌ ಪುಣ್ಯಾತ್ಮಳಾದ ಭೂದೇವಿಯೇ, ಮತ್ತು ಯಾವ ಸೀತೆಯು ಜನಕವಂಶಸ್ಥರಾದ ಅರಸುಗಳಿಗೂ ರಘುವಂಶಸ್ಥರಾದ ಅರಸುಗಳಿಗೂ ಸರ್ವಪ್ರಕಾರದಿಂದಲೂ ಕುಲಭೂಷಣಳಾಗಿ ಇರುವಳೊ ಮತ್ತು ಜನಕರಾಯನ ಯಜ್ಞಭೂಮಿಯಲ್ಲಿ ಪುಣ್ಯಶೀಲೆಯಾದ ಯಾವ ಸೀತೆಯಂ ನೀನು ಪೆತ್ತವಳಾದೆಯೊ ಅಂಥ ಸೀತೆಯಂ ನೀನು ರಕ್ಷಿಸುವವಳಾಗು!" ಎಂದು ಭೂಮಿಯಂ ಪ್ರಾರ್ಥಿಸಿ, ಶ್ರೀರಾಮನು ಲವಣಾಸುರನಂ ಸಂಹರಿಸಲೋಸುಗ ಶತ್ರುಘ್ನನಂ ಕಳುಹಿಸುವವನಾಗಿ ಅಲ್ಲಿಂದ ತೆರಳಿಪೋದನು.

ಆಬಳಿಕ ಸೀತೆಯು ಎಚ್ಚಱಗೊಂಡು–"ಎಲೈ ನೇತ್ರಾನಂದಕರನಾದ ಕಾಂತನೇ" ಎನುತ ಎದ್ದವಳಾಗಿ, "ಕಟಕಟಾ! ದುಸ್ಸ್ವಪ್ನದಿಂದ ಪುಟ್ಟಿದ ಮನೋವ್ಯಾಕುಲತ್ವದಿಂ ನಾನು ವಂಚಿಸಲ್ಪಟ್ಟವಳಾಗಿ ನನ್ನಂ ಪತಿವಿರಹಿತಳನ್ನಾಗಿ ನೋಡುತ್ತೇನೆ." ಎಂದು, ಪುನಃ ನೋಡಿ "ಕಟಕಟಾ! ಕಾಂತನಾದ ಸ್ವಾಮಿಯು ನಿದ್ರೆಗೈಯುತ್ತಲಿರುವ ನನ್ನೊಬ್ಬಳಂ ಬಿಟ್ಟು ಹೊಱಟುಹೋದನು; ಈಗ ಇದೇನೋ ತಿಳಿಯದು. ಆಗಲಿ. ನಾನು ಪುನಃ ಕಾಂತನಂ ನೋಡುವವಳಾಗಿ ನನಗೆ ನಾನು ಪ್ರಭುವಾದರೆ ಪ್ರಿಯನಲ್ಲಿ ಕೋಪವಂ ಮಾಡುತ್ತೇನೆ" ಎಂದು ಚಿಂತಿಸಿ ಸೀತಾದೇವಿಯು–"ಎಲೈ, ಈ ಬಾಗಿಲಲ್ಲಿ ಪರಿಜನರೊಳಗೆ ಯಾವನು ಇದ್ದಾನೆ?" ಎಂದು ಕೇಳಲು; ಆಗ ಪುನಃ ಆ ದುರ್ಮುಖನು ಪ್ರವೇಶಿಸಿ ಕೈಮುಗಿದು–"ಎಲೌ ದೇವಿಯೇ, ಕುಮಾರನಾದ ಲಕ್ಷ್ಮಣಸ್ವಾಮಿಯು ನಿನ್ನಂ ಕುಱಿತು–"ರಥವು ಸಿದ್ಧವಾಗಿದೆ. ಪೂಜ್ಯಳಾದ ನೀನು ರಥವನ್ನೇಱುವವಳಾಗು ಎಂದು ವಿಜ್ಞಾಪಿಸುತ್ತಾನೆ" ಎಂದು ಪೇಳಲು; ಸೀತೆಯು–"ಹಾಗೆ ಆಗಲಿ, ನಾನು ರಥವನ್ನೇಱುವವಳಾಗುತ್ತೇನೆ" ಎಂದು ಮೇಲಕ್ಕೆ ಎದ್ದವಳಾಗಿ, ಮುಂದಕ್ಕೆ ಅಡಿಯಿಟ್ಟು, "ಎಲೈ ದುರ್ಮುಖನೇ, ನನ್ನ ಗರ್ಭಭಾರವು ಅದರುತ್ತಲಿದೆ. ಮೆಲ್ಲಮೆಲ್ಲನೆ ನಡೆಯೋಣ" ಎನ್ನಲು; ದುರ್ಮುಖನು "ಹಾಗಾಗಲಿ" ಎಂದು ಕೈಮುಗಿದು–"ದೇವಿಯು ಇತ್ತಿತ್ತ ಅಡಿಗಳಂ ಪಾಲಿಸಬೇಕು" ಎಂದನು.

ಆಬಳಿಕ ಸೀತೆಯು–"ರಘುಕುಲದೇವತೆಗಳಿಗೆ ನಮಸ್ಕಾರವು. ತಪಸ್ಸೇ ದ್ರವ್ಯವಾಗಿ ಉಳ್ಳ ಋಷಿಗಳಿಗೆ ನಮಸ್ಕಾರವು" ಎಂದು ಪೇಳಿ ರಥವನ್ನು ಏಱಿದಳು.

ಪ್ರಥಮಾಂಕತಾತ್ಪರ್ಯಂ ಸಮಾಪ್ತಂ.

---

# ॥ ದ್ವಿತೀಯಾಂಕಂ ॥

ಆಬಳಿಕ ಎರಡನೆಯ ದಿವಸದಲ್ಲಿ ಅದೇ ರೀತಿ ಪುನಃ ವಿದ್ವಾಂಸರೆಲ್ಲರೂ ಸಭೆಯಲ್ಲಿ ಕೂಡಿರುವರಾಗಲು ; ಸೂತ್ರಧಾರನು ನಟನು ಇವರು ಮೊದಲಾದ ಗಾಯಕರು ರಂಗ ಸ್ಥಾನವನ್ನೈದಿ ಗಾನಪೂರ್ವಕವಾಗಿ ಸಭಾಪ್ರಾರ್ಥನೆ ಮುಂತಾದ ಪೂರ್ವರಂಗವನ್ನಾ ಚರಿಸಿ ತಂತಮ್ಮ ವ್ಯಾಪಾರಗಳಲ್ಲಿ ಸನ್ನದ್ಧರಾಗಿ ನಿಂತಿರಲು ; ರಂಗಸ್ಥಾನಕ್ಕೆ ಪಶ್ಚಿಮ ವಾಗಿ, ವೇಷಧಾರಿಗಳಿಗೆ ಸ್ಥಾನವಾಗಿ ತೆಱೆಯಿಂ ಮಱೆಯಾಗಿಯೂ ಇರುವ ನೇಪಥ್ಯ ವೆಂಬ ಸ್ಥಾನದಲ್ಲಿ ಒಬ್ಬಳು ತಪಸ್ವಿನಿಯಾದ ಸ್ತ್ರೀಯಂ ಕಂಡು–" ಎಲೌ ತಪಸ್ವಿನಿಯೆ, ನಿನಗೆ ಕುಶಲವೆ ? "–ಎಂದು ಪ್ರಶ್ನೆಗೈದಳು.

ಬಳಿಕ ಮಾರ್ಗರ ವೇಷವಂ ತಾಳಿರುವ ಆ ತಪಸ್ವಿನಿಯು ಅದಂ ಕೇಳಿ ರಂಗಸ್ಥಾ ನವಂ ಪ್ರವೇಶವಂ ಗೈದು–" ಎಲೌ, ಈ ವನದೇವತೆಯು ತನ್ನ ಹಸ್ತದಲ್ಲಿರುವ ಫಲ ಪುಷ್ಪಪಲ್ಲವಾರುಣವಾದ ಅರ್ಘ್ಯದ್ರವ್ಯದೊಡಗೂಡಿ ನನ್ನನ್ನೆದುರುಗೊಂಡು ನಿಂತಿದ್ದಾಳೆ " ಎಂದು ಪೇಳಲು ; ಆ ವನದೇವತೆಯು ರಂಗಸ್ಥಾನವಂ ಪ್ರವೇಶವಂ ಗೈದು ಆ ತಪಸ್ವಿ ನಿಗೆ ಅರ್ಘ್ಯವನ್ನಿತ್ತು ಕೈಮುಗಿದು–" ಎಲೌ ಪೂಜ್ಯಳೇ, ಈ ವನವೆಲ್ಲವೂ ನಿನಗೆ ಮನಸ್ಸು ಬಂದಂತೆ ಭೋಗಿಸುವುದಕ್ಕೆ ಯೋಗ್ಯವಾಗಿ ಇದೆ. ಈಗ ನೀನು ಬಂದು ನನಗೆ ದರ್ಶ ನವಂ ಕೊಟ್ಟುದಱಿಂ ಈ ದಿನವೇ ಸುದಿವಸವಾಯಿತು. ನನ್ನಂತೆ ಒಂದೇ ಸ್ಥಾನದಲ್ಲಿ ವಾಸಂಗೈಯುವ ಜನರಿಗೆ ಸುಜನರೊಡನೆ ಸಂಗತಿಯು ಅತಿ ಪ್ರಯತ್ನದಿಂ ಪುಣ್ಯವಿಶೇಷ ದಿಂದಲು ಉಂಟಾಗುವುದಲ್ಲವೆ ? ಅದುಕಾರಣ ಈ ವನದಲ್ಲಿ ವೃಕ್ಷಚ್ಛಾಯೆಗಳು, ಮಧುರ ವಾದ ಜಲವು, ಮತ್ತು ತಪಸ್ಸಿಗೆ ಯೋಗ್ಯಾಹಾರವಾದ ಫಲವೂ ಕಂದಮೂಲವಾದರೂ ಯಾವುದುಂಟೋ ಅದೆಲ್ಲವೂ ನಿಮಗೆ ಸ್ವಾಧೀನವೇ ಹೊಱತು ಪರಾಧೀನವಲ್ಲ " ಎಂದು ಉಪಚಾರವಚನಂಗಳಂ ನುಡಿಯಲು ; ಅದಂ ಕೇಳಿ ಆ ತಪಸ್ವಿನಿಯು ಆ ವನದೇವತೆಯಂ ಕುಱಿತು–" ಎಲೌ ಪುಣ್ಯವತಿಯೇ, ಈ ವಿಷಯದಲ್ಲಿ ನೀನು ನನಗೆ ಉಪಚಾರವಚನವಂ ಪೇಳತಕ್ಕುದು ಏನು ಇದೆ ? ಲೋಕದಲ್ಲಿ ಸಜ್ಜನರ ವ್ಯಾಪಾರವು ಸರ್ವಪ್ರಾಣಿಗಳಿಗೂ ಅತಿ ಪ್ರಿಯವಾಗಿ ಇರುವುದು. ಮತ್ತು ವಾಕ್ಕು ಮಿತವಾಗಿ ವಿನಯದಿಂ ಮಧುರವಾಗಿ ಇಹುದು. ಬುದ್ಧಿಯಾದರೋ ಸ್ವಭಾವದಿಂದಲೇ ಉಪಶಾಂತಿಯುಕ್ತವಾಗಿರುವುದು. ಪರಿ ಚಿತಿಯಾದರೋ ದೋಷರಹಿತವಾಗಿರುವುದು. ಮತ್ತು ಅವರ ಅಂತಃಕರಣವೃತ್ತಿಯು ಮುಂದೆಯಾದರೂ ಹಿಂದೆಯಾದರೂ ಹೆಚ್ಚುಕಡಮೆ ಇಲ್ಲದೆ ಏಕರಸವಾಗಿ ಕಪಟವಿಲ್ಲದು ದಱಿಂ ಪರಿಶುದ್ಧವಾಗಿಯೂ ಇರುವುದಱಿಂ ಸರ್ವೋತ್ಕೃಷ್ಟವಾಗಿರುವುದು. ಅದುಕಾ ರಣ ನೀನು ಸುಜನವಾದುದಱಿಂ ನನ್ನಂ ಈ ರೀತಿ ಉಪಚರಿಸುವುದು ಅತಿಶಯವಲ್ಲ " ಎಂಬದಾಗಿ ಪರಸ್ಪರ ಉಪಚಾರನ್ನಾಚರಿಸಿ ಇವರಿರ್ವರು ಕುಳಿತವರಾಗಲು.

ಆಗ ವನದೇವತೆಯು ಆ ತಪಸ್ವಿನಿಯಂ ಕುಱಿತು—"ಎಲೌ ತಪೋನಿಷ್ಠಳೇ, ಪೂಜ್ಯಳಾದ ನಿನ್ನಂ ನಾನು ಯಾರೆಂದು ತಿಳಿಯುವಳಾಗಲಿ?" ಎಂದು ಹೇಳಲು ; ತಪಸ್ವಿನಿಯು—"ಎಲೌ ವನದೇವತೆಯೇ, ನನ್ನಂ ಆತ್ರೇಯಿಯೆಂದು ಜನರು ಕರೆಯುವರು" ಎಂದು ಹೇಳಿದಳು. ಆ ಬಳಿಕ ವನದೇವತೆಯು—"ಎಲೌ ಪೂಜ್ಯಳಾದ ಆತ್ರೇಯಿ, ನೀನು ಎಲ್ಲಿಂದ ಇಲ್ಲಿಗೆ ಬಂದೆ? ಈ ದಂಡಕಾರಣ್ಯದಲ್ಲಿ ಸಂಚರಿಸುವುದಕ್ಕೆ ಪ್ರಯೋಜನವೇನು?" ಎಂದು ಪ್ರಶ್ನೆಗೈಯಲು ; ಆತ್ರೇಯಿಯು—"ಎಲೌ ವನದೇವತೆಯೇ ಕೇಳು. ಈ ದಂಡಕಾರಣ್ಯದಲ್ಲಿ ಅಗಸ್ತ್ಯರು ಮೊದಲಾದ ಬ್ರಹ್ಮಜ್ಞಾನಿಗಳು ಬಹುಮಂದಿ ವಾಸಂಗೈಯುವರಾದಕಾರಣ ನಾನು ಅವರಲ್ಲಿ ವೇದಾಂತವಿದ್ಯೆಯಂ ಉಪದೇಶವಂ ಮಾಡಿಕೊಂಡು ಅದಱ ಅರ್ಥವಂ ತಿಳಿಯುವುದಕ್ಕೋಸ್ಕರ ವಾಲ್ಮೀಕರ ಸಮೀಪದಿಂ ಇಲ್ಲಿಗೆ ಬರುತ್ತಲಿದ್ದೇನೆ" ಎಂದು ಉತ್ತರವನ್ನಿತ್ತಳು. ಅದಂ ಕೇಳಿ ವನದೇವತೆಯು—"ಎಲೌ ಆತ್ರೇಯಿಯೇ, ಮಿಗಿಲಾದ ಮುನಿಗಳು ಕೂಡ ಆ ಬ್ರಹ್ಮವಿದ್ಯೆಯಂ ಅಭ್ಯಾಸಂಗೈಯಲೋಸುಗ ಪೂರ್ವಿಕನಾಗಿ ಬ್ರಹ್ಮಸ್ವರೂಪವಂ ಉಪದೇಶಂಗೈಯುವನಾಗಿಯೂ ಇರುವ ಆ ವಾಲ್ಮೀಕಿಮುನಿಯನ್ನೇ ಸರ್ವಕಾಲದಲ್ಲೂ ಸೇವಿಸುತ್ತಲಿರುವವರಲ್ಲವೆ? ಹೀಗಿರುವಲ್ಲಿ ಪೂಜ್ಯಳಾದ ನಿನಗೆ ಆ ಮುನಿಯ ಸಮೀಪದಿಂ ಇಲ್ಲಿಗೆ ಪ್ರಯಾಣ ಉಂಟಾಗುವುದಕ್ಕೆ ಕಾರಣವೇನು?" ಎಂದು ಕೇಳಲು ; ಅದಂ ಕೇಳಿ ಆತ್ರೇಯಿಯು—"ಎಲೌ ವನದೇವತೆಯೇ, ಆ ವಾಲ್ಮೀಕಿಮುನಿಯ ಸನ್ನಿಧಾನದಲ್ಲಿ ವಿದ್ಯಾಭ್ಯಾಸಕ್ಕೆ ಮಹತ್ತಾದ ವಿಘ್ನವುಂಟಾದುದಱಿಂ ನಾನು ಈ ದೀರ್ಘವಾದ ಪ್ರವಾಸವನಂಗೀಕರಿಸಿದೆನು" ಎಂದು ಹೇಳಿದಳು. ಅದಂ ಕೇಳಿ ವನದೇವತೆಯು—"ಎಲೌ ಪೂಜ್ಯಳೇ, ಆ ವಿಘ್ನವೆಂಥದು?" ಎನಲು ; ಆತ್ರೇಯಿಯು—"ಎಲೌ ವನದೇವತೆಯೇ ಕೇಳು. ಒಬ್ಬಾನೊಬ್ಬ ದೇವತೆಯು ಸರ್ವರಿಗಿಂತಲೂ ಪರಮಾಶ್ಚರ್ಯಕರರಾಗಿ ಸ್ತನ್ಯಪಾನವಂ ಬಿಡುವುದಕ್ಕೆ ಯೋಗ್ಯವಾದ ವಯಸ್ಸಿನಲ್ಲಿರುವ ಬಾಲಕರಿಬ್ಬರಂ ಸಂಗಡ ಕರೆತಂದು ಪೂಜ್ಯರಾದ ವಾಲ್ಮೀಕಿಮುನಿಗೆ ಒಪ್ಪಿಸಿದಳು. ಮತ್ತು ಆ ಬಾಲಕರಿಬ್ಬರು ತಮ್ಮ ಗುಣಗಳಿಂ ಋಷಿಗಳ ಅಂತಃಕರಣಂಗಳಂ ಮಾತ್ರವೇ ಸ್ನೇಹಯುಕ್ತಂಗಳನ್ನಾಗಿ ಮಾಡುವರಾಗುವುದಿಲ್ಲ ; ಮತ್ತೇನೆಂದರೆ, ಪಶು ಪಕ್ಷಿ ಮೊದಲಾದ ಪ್ರಾಣಿಗಳ ಅಂತಃಕರಣಗಳನ್ನು ಕೂಡ ಸ್ನೇಹಯುಕ್ತಗಳನ್ನಾಗಿ ಮಾಡುತ್ತಲಿದ್ದಾರೆ" ಎಂದು ಹೇಳಲು ; ವನದೇವತೆಯು—"ಎಲೌ ಆತ್ರೇಯಿಯೇ, ಆ ಬಾಲಕರ ನಾಮಧೇಯಂಗಳಂ ತಿಳಿಯುವೆಯೊ ಏನು?" ಎಂದಳು. ಪುನಃ ಆತ್ರೇಯಿಯು—"ಎಲೌ ಪುಣ್ಯವತಿಯೇ, ಆ ದೇವತೆಯೇ ಕುಶಲವರೆಂದು ಆ ಬಾಲಕರ ನಾಮಧೇಯಂಗಳಂ ಅವರ ಪ್ರಭಾವವಂ ಸಹ ಹೇಳಿದಳು" ಎನಲು ; ವನದೇವತೆಯು—"ಆ ಬಾಲಕರ ಪ್ರಭಾವವೆಂಥದು?" ಎಂದು ಪ್ರಶ್ನೆಗೈದಳು. ಆತ್ರೇಯಿಯು—"ರಹಸ್ಯಯುಕ್ತಗಳಾದ ಜೃಂಭಕಾಸ್ತ್ರಂಗಳು ಆ ಬಾಲಕರಿಗೆ ಜನ್ಮಸಿದ್ಧಗಳಾಗಿ ಇರುವುದೆಂಬುವೇ ಪ್ರಭಾವವು" ಎಂದು ಹೇಳಲು ; ವನದೇವತೆಯು—"ಎಲೌ ಪೂಜ್ಯಳೇ, ಇದು ಅತ್ಯಂತಾಶ್ಚರ್ಯಕರವು" ಎಂದು ಹೇಳಿದಳು. ಆತ್ರೇಯಿಯು—"ಎಲೌ ವನದೇವತೆಯೇ, ಕೇಳು. ಪೂಜ್ಯನಾದ ವಾಲ್ಮೀಕಿಮುನಿಯು ತಾನೇ ಪೋಷಕಮಾತೃಭಾವವಂ ವಹಿಸಿ ಆ ಬಾಲಕರಿಬ್ಬರನ್ನು ಪೋಷಿಸಿ ಸರ್ವಪ್ರಕಾರಗಳಿಂದಲೂ

ರಕ್ಷಿಸಿದನು. ಮತ್ತು ಆ ಕುಶಲವರಿಗೂ ಚೌಲಕರ್ಮವಾಗಲು ಮೂಱುವೇದಂಗಳಂ ಹೊಱತು ಮಿಗಿಲಾದ ವಿದ್ಯೆಗಳಂ ಸಾವಧಾನವಾಗಿ ಉಪದೇಶವಂ ಮಾಡಿದನು. ಆ ಬಳಿಕ ಗರ್ಭೈಕಾದಶವಾದ ವರ್ಷದಲ್ಲಿ ಕ್ಷತ್ರಿಯಂಗೆ ಉಚಿತವಾದ ಕಲ್ಪದಿಂದ ಆ ಕುಶಲವರಿಗೆ ಉಪನಯನವಂ ಮಾಡಿ ವೇದವಿದ್ಯಾಭ್ಯಾಸವಂ ಮಾಡಿಸಿದನು. ಆ ಮುನಿಯ ಸನ್ನಿಧಾನದಲ್ಲಿ ಕುಶಲವರು ಅತಿ ಪ್ರಕಾಶಮಾನವಾದ ಪ್ರಜ್ಞೆಯುಳ್ಳವರಾದಕಾರಣ ಅವರೊಡನೆ ನಮ್ಮಂಥ ಜನವು ಅಧ್ಯಯನವಂ ಮಾಡುವುದಕ್ಕೆ ಯೋಗ್ಯವಲ್ಲ. ಯಾವ ಕಾರಣ ಲೋಕದಲ್ಲಿ ಗುರುವಾದ ಪುರುಷನು ಪಕ್ಷಪಾತವಿಲ್ಲದೆ ಪ್ರಜ್ಞಾವಂತನಾದ ಶಿಷ್ಯನಿಗೆ ಯಾವ ರೀತಿ ವಿದ್ಯೆಯಂ ಉಪದೇಶವಂ ಮಾಡುವನೋ ಅದೇ ರೀತಿ ಮೂಢನಾದ ಶಿಷ್ಯನಿಗೂ ವಿದ್ಯೆಯಂ ಉಪದೇಶವಂ ಮಾಡುವನು. ಮತ್ತು ಅವರಿಬ್ಬರಲ್ಲಿ ಪ್ರಾಜ್ಞನಾದ ಶಿಷ್ಯನಿಗೆ ಜ್ಞಾನ ವಿಷಯವಾಗಿ ಸಾಮರ್ಥ್ಯವಂ ಕಲ್ಪಿಸುವುದಿಲ್ಲ ; ಮೂಢನಾದ ಶಿಷ್ಯನಿಗೆ ಜ್ಞಾನವಿಷಯವಾಗಿ ಶಕ್ತಿಯನ್ನಪಹರಿಸುವುದಿಲ್ಲ. ಈ ರೀತಿ ಪಕ್ಷಪಾತವಿಲ್ಲದೆ ಗುರುವು ಒಂದೇ ಮುಖದಿಂ ಇಬ್ಬರಿಗೂ ಉಪದೇಶಿಸಿದರೂ ಜ್ಞಾನವಿಷಯದಲ್ಲಿ ಪರಸ್ಪರವಾಗಿ ತಾರತಮ್ಯವುಂಟಾಗುವುದು. ಅದೆಂತೆಂದರೆ :—ಲೋಕದಲ್ಲಿ ರತ್ನಮಣಿಮಯವಾದ ಕನ್ನಡಿಯಲ್ಲಿ ಮುಖವಂ ತೋಱಿಸಿದರೆ ಆ ಕನ್ನಡಿಯು ಬಿಂಬವಂ ಗ್ರಹಿಸುವುದಱಲ್ಲಿ ಸಮರ್ಥವಾಗುವುದೆ ಹೊಱತು ಮೃಣ್ಮಯಂಗಳಾದ ಕುಡ್ಯಾದಿಗಳಲ್ಲಿ ಮುಖವಂ ತೋಱಿಸಿದರೆ ಅವು ಬಿಂಬವಂ ಗ್ರಹಿಸುವುದಱಲ್ಲಿ ಸಮರ್ಥಂಗಳಾಗಲಾಱವು. ಅದುಕಾರಣ ಆ ಕುಶಲವರೊಡನೆ ಕೂಡ ನಮ್ಮಂಥ ಜನಕ್ಕೆ ವಿದ್ಯಾಭ್ಯಾಸವಂ ಮಾಡುವುದಱಲ್ಲಿ ಯೋಗ್ಯತೆ ಇಲ್ಲವೆಂಬುದೇ ನನ್ನ ಬ್ರಹ್ಮವಿದ್ಯಾಭ್ಯಾಸಕ್ಕೆ ವಿಘ್ನವು. ಇದಲ್ಲದೆ ಮತ್ತೊಂದು ವಿಘ್ನವುಂಟು '' ಎಂದು ಪೇಳಿದಳು. ಅದಂ ಕೇಳಿ ವಾಸಂತಿಯು—'' ಎಲೌ ತಪೋನಿಷ್ಠಳೆ, ಮತ್ತೊಂದು ವಿಘ್ನವೇನು ? '' ಎಂದು ಪ್ರಶ್ನೆಗೈಯಲು ; ಪುನಃ ಆತ್ರೇಯಿಯು—'' ಎಲೌ ವನದೇವತೆಯೇ, ಕೇಳು. ಅದೇನೆಂದರೆ :—ಬ್ರಹ್ಮರ್ಷಿಯಾದ ವಾಲ್ಮೀಕಿಯು ಒಂದು ದಿನ ಮಧ್ಯಾಹ್ನಕಾಲದಲ್ಲಿ ಅನುಷ್ಠಾನವಂ ಮಾಡಲೋಸುಗ ತಮಸೆಯೆಂಬ ನದಿಯನ್ನೈದಿದವನಾಗಿ ಆ ನದೀತೀರದಲ್ಲಿ ಪರಸ್ಪರ ಕೂಡಿಕೊಂಡು ಸಂಚರಿಸುವ ಕ್ರೌಂಚಗಳೆಂಬ ಸ್ತ್ರೀಪುರುಷಪಕ್ಷಿಗಳಲ್ಲಿ ಕಿರಾತನಿಂದ ಸಂಪರಿಸಲ್ಪಡುವುದಾಗಿರುವ ಒಂದು ಪುರುಷಪಕ್ಷಿಯಂ ನೋಡಿದನು. ಆಗ ವಾಲ್ಮೀಕಿಮುನಿಯು ಆ ಕಿರಾತನಂ ಕುಱಿತು ಆಕಸ್ಮಿಕವಾಗಿ ಅನುಷ್ಟುಭವೆಂಬ ಛಂದಸ್ಸಿನಿಂದ ಪರಿಮಿತವಾಗಿ ಇರುವ ಶ್ಲೋಕವಂ ನುಡಿದನು. ಆ ಶ್ಲೋಕಾರ್ಥವೇನೆಂದರೆ :—ಎಲೈ ಭಾಗ್ಯರಹಿತನಾದ ಕಿರಾತನೇ, ನೀನು ಯಾವಕಾರಣ ಕ್ರೌಂಚಗಳೆಂಬ ಈ ಸ್ತ್ರೀಪುರುಷ ಪಕ್ಷಿಗಳೆರಡಱಲ್ಲಿ ಕಾಮದಿಂ ಮೋಹಯುಕ್ತವಾಗಿರುವ ಒಂದು ಪುರುಷಪಕ್ಷಿಯಂ ಸಂಹರಿಸಿದೆಯೊ ಆ ಕಾರಣ ನೀನು ಬಹುಸಂವತ್ಸರಂಗಳು ಜೀವಿಸುವನಾಗಬೇಡವೆಂಬ ಅರ್ಥವುಳ್ಳ ಶ್ಲೋಕವಂ ರಾಮವಚನವನ್ನಾಗಿ ಪ್ರಯೋಗಿಸಿದನು '' ಎಂದು ಪೇಳಲು ; ವನದೇವತೆಯು—'' ಎಲೌ ಪೂಜ್ಯಳೇ, ವೇದವಂ ಹೊಱತು ಮತ್ತೊಂದು ಸ್ಥಳದಲ್ಲಿ ಛಂದೋಬದ್ಧವಾಗಿ ಶ್ಲೋಕವು ಆವಿರ್ಭವಿಸಿದುದು ನೂತನವಾದುದಱಿಂ ಆಶ್ಚರ್ಯಕರವು '' ಎಂದು ಪೇಳಿದಳು. ಅದಂ ಕೇಳಿ ಆತ್ರೇಯಿಯು—'' ಎಲೌ ಪುಣ್ಯವತಿಯೇ, ಆ ಬಳಿಕ ಅದೇ ಸಮಯದಲ್ಲಿ

ಸಮಸ್ತ ಭೂತಂಗಳಂ ಸೃಜಿಸುವ ಭಗವಂತನಾದ ಬ್ರಹ್ಮದೇವನು ತಾನೇ ವಾಲ್ಮೀಕಿಯ ಆಶ್ರಮವನ್ನೈದಿ ಆವಿರ್ಭವಿಸಿದ ಶಬ್ದಬ್ರಹ್ಮಪ್ರಕಾಶವುಳ್ಳ ಪೂಜ್ಯನಾದ ಆ ವಾಲ್ಮೀಕಿಮುನಿಯಂ ಕುಱಿತು ಇಂತೆಂದನು : ಎಲೈ ಮುನಿಯೇ, ನೀನು ವಾಗ್ರೂಪವಾದ ಬ್ರಹ್ಮನಲ್ಲಿ ಬುದ್ಧಿಪ್ರಕಾಶವುಳ್ಳವನಾದೆಯಾದಕಾರಣ ಈಗ ನಿನ್ನ ಮುಖದಿಂ ಆವಿರ್ಭವಿಸಿರುವ ಅನುಷ್ಟುಭವೆಂಬ ಛಂದಸ್ಸಿನಿಂದಲೇ ಶ್ರೀರಾಮಚರಿತ್ರವಂ ಮಹಾ ಕಾವ್ಯರೂಪದಿಂ ರಚಿಸುವನಾಗು. ಶಾಶ್ವತವಾದ ಬ್ರಹ್ಮಸ್ವರೂಪವು ನಿನಗೆ ಸ್ಫುಟವಾಗಿ ತೋಱುವುದಾಗಲಿ! ಮತ್ತು ನಿನಗೆ ಜ್ಞಾನದೃಷ್ಟಿಯುಂಟಾಗಲಿ! ಲೋಕದಲ್ಲಿ ನೀನೆ ಆದಿಕವಿಯಾಗುವೆ, ಎಂದು ಮುನಿಗೆ ವರವನ್ನಿತ್ತು ಆ ಮುನಿಯಿಂ ವಿಶೇಷದಿಂ ಪೂಜಿತನಾಗಿ ಅಲ್ಲೇ ಅದೃಶ್ಯನಾದನು. ಆ ಬಳಿಕ ಪೂಜ್ಯನಾದ ವಾಲ್ಮೀಕಿಮುನಿಯು ಮನುಷ್ಯರಲ್ಲಿ ಮೊದಲು ಆ ಪ್ರಕಾರದಿಂ ಆವಿರ್ಭವಿಸಿದುದಾಗಿ ವೇದರೂಪವಾದ ಶಬ್ದಬ್ರಹ್ಮದ ರೂಪಾಂತರವಾಗಿ ಇತಿಹಾಸರೂಪವಾಗಿಯೂ ಇರುವ ರಾಮಾಯಣವೆಂಬ ಮಹಾಕಾವ್ಯವಂ ರಚಿಸಿದನು '' ಎಂಬದಾಗಿ ಆತ್ರೇಯಿಯು ಪೇಳಲು ; ವನದೇವತೆಯು–'' ವಿರಕ್ತನಾದ ವಾಲ್ಮೀಕಿಮುನಿಗೆ ಸಂಸಾರವು ವಿಸ್ತಾರವಾಯಿತು ಎಂದು ಆಶ್ಚರ್ಯಪಟ್ಟಳು. ಆತ್ರೇಯಿಯು–'' ಎಲೌ ವನದೇವತೆಯೇ, ವಾಲ್ಮೀಕಿಮುನಿಗೆ ಸಂಸಾರವೃದ್ಧಿಯನ್ನೈದಿ ಇರುವುದಱಿಂದಲೇ ನಾನು ನಿನ್ನಂ ಕುಱಿತು ಆ ವಾಲ್ಮೀಕಿಮುನಿಯ ಸನ್ನಿಧಿಯಲ್ಲಿ ವಿದ್ಯಾಭ್ಯಾಸಕ್ಕೆ ಮಹತ್ತಾದ ವಿಘ್ನವುಂಟಾಯಿತೆಂದು ಪೇಳಿದೆನು '' ಎನಲು ; ಅದಂ ಕೇಳಿ ವನದೇವತೆಯು '' ಯುಕ್ತವೇ ಸರಿ ಯುಕ್ತವೇ ಸರಿ '' ಎಂದು ನುಡಿದಳು. ಆ ಆತ್ರೇಯಿಯು–'' ಎಲೌ ಪುಣ್ಯವತಿಯೇ, ನಾನು ಈ ವನದಲ್ಲಿ ನಿನ್ನಿಂದ ಪೂಜಿತಳಾಗಿ ವಿಶ್ರಮಿಸಿಕೊಂಡವಳಾದೆನಾದಕಾರಣ ಈಗ ನೀನು ನನಗೆ ಅಗಸ್ತ್ಯಾಶ್ರಮಕ್ಕೆ ಪೋಗುವ ಮಾರ್ಗವಂ ತಿಳುಹಿಸು '' ಎಂದಳು. ವಾಸಂತಿಯು– '' ಎಲೌ ಆತ್ರೇಯಿಯೇ, ಇಲ್ಲಿಂದ ಈ ಪಂಚವಟಿಯೆಂಬ ಕ್ಷೇತ್ರವನ್ನೈದಿ ಅಲ್ಲಿಂದ ಈ ಗೋದಾವರೀತೀರದಲ್ಲೇ ಪೋಗುವಳಾಗು '' ಎನಲು ; ಆತ್ರೇಯಿಯು ಕಣ್ಣೀರಂ ಬಿಡುವಳಾಗಿ–'' ಎಲೌ ಪುಣ್ಯವತಿಯೇ, ಈ ಸಮೀಪದಲ್ಲಿರುವ ತಪೋವನವೇ ಪಂಚವಟಿಯೇ ಏನು? ಈ ನದಿಯೇ ಗೋದಾವರಿಯೇ ಏನು? ಮತ್ತು ನೀನೇ ಜನಸ್ಥಾನದಲ್ಲಿ ವನದೇವತೆಯಾದ ವಾಸಂತಿಯೇ ಏನು? ಈ ಪರ್ವತವೇ ಪ್ರಸ್ರವಣವೆಂಬುವುದೊ ಏನು? '' ಎಂದು ಪ್ರಶ್ನೆ ಮಾಡಲು ; ವಾಸಂತಿಯು–'' ಎಲೌ ತಪೋನಿಷ್ಠಳೇ, ನೀನು ಕೇಳಿದುದೆಲ್ಲವು ಯಥಾರ್ಥವೇ ಸರಿ '' ಎನಲು ; ಆತ್ರೇಯಿಯು ಸೀತೆಯಂ ಸ್ಮರಿಸಿಕೊಂಡು–'' ಎಲೌ ಸೀತೆಯೇ, ನಿನ್ನಿಂದ ಪೋಷಿಸಲ್ಪಟ್ಟುದಾದಕಾರಣ ನಿನಗೆ ಪ್ರೇಮಪಾತ್ರವಾಗಿ ಪ್ರಸ್ತಾಪದಿಂದ ಪ್ರಾಪ್ತಗಳಾದ ವೃತ್ತಾಂತಗಳಿಗೆ ವಿಷಯವಾಗಿಯು ಇರುವ ಈವೃಕ್ಷಸಮೂಹವು ತಾನು ದೃಷ್ಟಿಗೋಚರವಾಗಿರುವುದಾದಕಾರಣ ನೀನು ನಾಮಮಾತ್ರದಿಂ ಅವಶಿಷ್ಟಳಾಗಿದ್ದರೂ ಅಂಥ ನಿನ್ನಂ ಪ್ರತ್ಯಕ್ಷವಾಗಿ ಎದುರಿಗೆ ನಿಂತಿರುವಳನ್ನಾಗಿ ಮಾಡುತ್ತಿದೆ '' ಎಂಬ ಆತ್ರೇಯಿಯ ವಚನವಂ ಕೇಳಿ ವಾಸಂತಿಯು ಭಯಭರಿತಳಾಗಿ ಮನಸ್ಸಿನಲ್ಲಿ, '' ಇದೇನು! ಈ ತಪಸ್ವಿನಿಯು ಸೀತೆಯಂ ನಾಮಮಾತ್ರದಿಂ ಅವಶಿಷ್ಟಳೆಂದು ಪೇಳುತ್ತಾಳೆ '' ಎಂದು ಚಿಂತಿಸಿ,–'' ಎಲೌ ಪೂಜ್ಯಳೇ, ಸೀತೆಗೆ ಅಂಥ ಮಹಾ

ಭಯವೇನು ಉಂಟಾಗಿದೆ ?'' ಎಂದು ಪ್ರಶ್ನೆಗೈಯಲು ; ಆತ್ರೇಯಿಯು–'' ಎಲೌ ವಾಸಂತಿಯೇ ಕೇಳು, ಸೀತೆಗೆ ಮಹಾಭಯಮಾತ್ರ ಉಂಟಾಗಲಿಲ್ಲ, ಅಪವಾದವು ಸಹ ಉಂಟಾಗಿದೆ'' ಎಂದು ಆ ಜನಾಪವಾದಕಾರಣವಂ ರಹಸ್ಯವಾಗಿ ಕಿವಿಯಲ್ಲಿ ತಿಳುಹಿಸಿದಳು. ಆಗ ವಾಸಂತಿಯು ಅದಂ ಕೇಳಿ–'' ಹಾ ! ಕಟಕಟಾ ! ಈ ದೈವಗತಿಯೆಂಬ ಸಿಡಿಲಿನ ವೇಗವು ಅತಿ ದುಸ್ಸಹವು'' ಎಂದು ಪೇಳಿ ಮೂರ್ಛೆಯನ್ನೈದಿದಳು. ಆತ್ರೇಯಿಯು– '' ಎಲೌ ವಾಸಂತಿಯೇ, ಚಿತ್ತವಂ ಸಂತೈಸು ಸಂತೈಸು'' ಎನಲು ; ವಾಸಂತಿಯು ಮೂರ್ಛೆದಿಳಿದು,–'' ಹಾ ! ಪ್ರಿಯಸಖಿಯಾದ ಸೀತೆಯೇ ! ಹಾ ! ಮಹಾಭಾಗ್ಯವತಿಯೇ ! ನಿನ್ನ ನಿರ್ಮಾಣಕ್ರಮವು ಇಂಥ ಕಷ್ಟಕ್ಕೆ ಯೋಗ್ಯವಾಯಿತೇ ! ರಾಮಭದ್ರನೇ ! ಸೀತಾ ವಿಷಯದಲ್ಲಿ ಅಜ್ಞರಾದ ಜನರು ಕಠಿನಚಿತ್ತರಾದಂತೆ ಪ್ರಾಜ್ಞನಾದ ನೀನೂ ಕೂಡ ಕಠಿನಚಿತ್ತನಾದೆಯಲ್ಲಾ ! ಇನ್ನು ನಿನ್ನ ಸಂಗತಿಯು ಸಾಕು ! ಎಲೌ ಪೂಜ್ಯಳಾದ ಆತ್ರೇಯಿಯೇ, ಲಕ್ಷ್ಮಣಸ್ವಾಮಿಯು ಶ್ರೀರಾಮನ ಆಜ್ಞೆಯಿಂದ ಸೀತೆಯಂ ವಾಲ್ಮೀಕಿಯ ಆಶ್ರಮದ ಸಮೀಪದಲ್ಲಿ ಬಿಟ್ಟು ಅರಣ್ಯದಿಂದ ತಿರಿಗಿಬಂದವನಾದಮೇಲೆ ಆ ಅರಣ್ಯದಲ್ಲಿ ಸೀತೆಗೆ ಏನು ದಶೆಯಾಯಿತು ? ಏನಾದರೂ ವೃತ್ತಾಂತವುಂಟೊ ?'' ಎಂದು ಪ್ರಶ್ನೆಗೈಯಲು ; ಆತ್ರೇಯಿಯು–'' ಯಾವ ವೃತ್ತಾಂತವೂ ಇಲ್ಲ'' ಎಂದು ಪೇಳಿದಳು. ಅದಂ ಕೇಳಿ ವಾಸಂತಿಯು–'' ಹಾ ! ಕಟಕಟ ! ಪೂಜ್ಯರಾದ ಅರುಂಧತೀವಸಿಷ್ಠರೇ ನಿಯಾಮಕವಾಗಿವುಳ್ಳ ಆ ರಾಜಗೃಹಂಗಳಲ್ಲಿ ವೃದ್ಧರಾಗಿರುವ ಕೌಸಲ್ಯಾದೇವಿ ಮೊದಲಾದ ಮಹಾರಾಜಪತ್ನಿಯರುಗಳು ಜೀವವಂತರಾಗಿರಲು ಇಂಥ ಪೂರ್ಣಗರ್ಭಿಣಿಯಾದ ಸೀತೆಗೆ ಎಂತು ತ್ಯಾಗವುಂಟಾಯಿತು ?'' ಎಂದು ಕೇಳಿದಳು. ಆತ್ರೇಯಿಯು–'' ಎಲೌ ವಾಸಂತಿಯೇ, ಆ ಸೀತಾತ್ಯಾಗಕಾಲದಲ್ಲಿ ವಸಿಷ್ಠಾರುಂಧತೀದೇವಿಯರು ಮೊದಲಾದ ಗುರುಜನರು ಋಷ್ಯಶೃಂಗಮುನಿಯ ಯಜ್ಞಕ್ಕೆ ಹೋಗಿ ಇದ್ದರು. ದ್ವಾದಶವರ್ಷಸಾಧ್ಯವಾದ ಆ ಸತ್ರಯಾಗವು ಈಗ ಪೂರ್ತಿಯಾಯಿತು. ಈಗ ಋಷ್ಯಶೃಂಗಮುನಿಯು ಯಜ್ಞಾರ್ಥವಾಗಿ ಬಂದಿದ್ದ ಗುರುಜನರಂ ಚೆನ್ನಾಗಿ ಪೂಜಿಸಿ ಅಲ್ಲಿಂದ ಕಳುಹಿಸಿದನು. ಆ ಬಳಿಕ ಪೂಜ್ಯಳಾದ ಅರುಂಧತೀದೇವಿಯು ಸೊಸೆಯಾದ ಸೀತೆಯಿಂ ರಹಿತವಾದ ಅಯೋಧ್ಯಾಪುರಕ್ಕೆ ನಾನು ಬರುವಳಾಗುವುದಿಲ್ಲ ಎಂದು ಪೇಳಿದಳು. ಆ ವಚನವಂ ಕೇಳಿ ಕೌಸಲ್ಯಾದೇವಿ ಮೊದಲಾದ ರಾಮಮಾತೃಗಳು ಬಹುಚೆನ್ನಾಯಿತೆಂದು ಶ್ಲಾಘನಂಗೈದು ತಾವು ಸಹ ಸೀತಾರಹಿತವಾದ ಅಯೋಧ್ಯೆಯಂ ಪ್ರವೇಶಿಸುವುದಿಲ್ಲವೆಂದು ಪ್ರತಿಜ್ಞೆಯಂ ಮಾಡಿದರು. ಪೂಜ್ಯನಾದ ವಸಿಷ್ಠಮುನಿಯು ಕೂಡ ಅವರ ಚಿತ್ತಾನುಸರಣದಿಂದ ಇನ್ನು ನಮಗೆ ಅಯೋಧ್ಯೆಯಲ್ಲಿ ಕಾರ್ಯವೇನು ? ನಾವೆಲ್ಲರೂ ವಾಲ್ಮೀಕ್ಯಾಶ್ರಮವನ್ನೈದಿ ಅಲ್ಲೇ ವಾಸವಂ ಮಾಡೋಣವೆಂದು ನಿಶ್ಚಯವಂ ಮಾಡಿದರು'' ಎಂಬ ಆತ್ರೇಯೀವಚನವಂ ಕೇಳಿ ವಾಸಂತಿಯು–'' ಎಲೌ ಪೂಜ್ಯಳೇ, ಅರಸಾದ ಆ ಶ್ರೀರಾಮನು ಈಗ ಏನನ್ನಾಚರಿಸುವನು ?'' ಎಂದು ಪ್ರಶ್ನೆಗೈಯಲು, ಆತ್ರೇಯಿಯು–'' ಎಲೌ ವಾಸಂತಿಯೇ, ಈಗ ಅರಸಾದ ಶ್ರೀರಾಮನು ರಾಜಕ್ರತುವಾದ ಅಶ್ವಮೇಧವೆಂಬ ಯಜ್ಞವಂ ಮಾಡಲೋಸುಗ ಸಂಕಲ್ಪಿಸಿ ದೀಕ್ಷಿತನಾಗಿ ಇದ್ದಾನೆ'' ಎನಲು : ಅದಂ ಕೇಳಿ ವಾಸಂ

ತಿಯು—"ಕಟಕಟಾ! ಬಿಡು. ಪುನಃ ಶ್ರೀರಾಮನು ವಿವಾಹಮಂ ಮಾಡಿಕೊಂಡನೆ ಏನು?" ಎಂದು ಪ್ರಶ್ನೆಗೈದಳು. ಆತ್ರೇಯಿಯು ಇಲ್ಲವಿಲ್ಲವೆಂದು ಪೇಳಲು; ವಾಸಂತಿಯು—"ಎಲೌ ಪೂಜ್ಯಳೇ, ಹಾಗಾದರೆ ಆ ಯಜ್ಞದಲ್ಲಿ ಶ್ರೀರಾಮನಿಗೆ ಮತ್ತೊಬ್ಬಳಾದ ಧರ್ಮಪತ್ನಿ ಯಾರು?" ಎಂದು ಕೇಳಲು; ಆತ್ರೇಯಿಯು—"ಎಲೌ ಪುಣ್ಯವತಿಯೇ, ಆ ಯಜ್ಞದಲ್ಲಿ ಶ್ರೀರಾಮನಿಗೆ ಸುವರ್ಣಮಯವಾದ ಸೀತಾಪ್ರತಿಮೆಯೇ ಧರ್ಮಪತ್ನಿಯು" ಎಂದಳು. ಅದಂ ಕೇಳಿ ವಾಸಂತಿಯು ಸಂತೋಷಪಡುತ್ತ—"ಎಲೌ ಪೂಜ್ಯಳೇ, ಇದು ಆಶ್ಚರ್ಯವು. ಲೋಕದಲ್ಲಿ ಸರ್ವೋತ್ಕೃಷ್ಟರಾಗಿ ಇರುವ ಮಹಾತ್ಮರ ಮನಸ್ಸುಗಳು ವಜ್ರಕ್ಕಿಂತಲೂ ಕಠಿನಗಳಾಗಿಯು ಪುಷ್ಪಕ್ಕಿಂತಲೂ ಅತಿಕೋಮಲಂಗಳಾಗಿಯು ಇರುವುದಾದಕಾರಣ ಮಹಾತ್ಮರ ಮನೋವೃತ್ತಿಗಳಂ ಯಾವ ಪುರುಷನು ತಿಳಿಯುವುದಕ್ಕೆ ಯೋಗ್ಯನಾದಾನು?" ಎಂದು ಪೇಳಿದಳು. ಆತ್ರೇಯಿಯು—"ಎಲೌ ವಾಸಂತಿಯೇ, ಮತ್ತು ಅಶ್ವಮೇಧಕ್ಕೆ ಯೋಗ್ಯವಾದ ಅಶ್ವವು ವಾಮದೇವನೆಂಬ ಮುನಿಯಿಂ ಮಂತ್ರಿಸಲ್ಪಟ್ಟುದಾಗಿ ದೇಶಂಗಳಂ ಸಂಚರಿಸಲೋಸುಗ ಬಿಡಲ್ಪಟ್ಟಿತು. ಆ ಅಶ್ವವಂ ರಕ್ಷಿಸಲೋಸುಗ ಶಾಸ್ತ್ರೋಕ್ತಪ್ರಕಾರವಾಗಿ ಆಯುಧಧಾರಿಗಳಾದ ಶೂರರೂ ಕೂಡ ಕಳುಹಿಸಲ್ಪಟ್ಟರು. ಮತ್ತು ಲಕ್ಷ್ಮಣಸ್ವಾಮಿಗೆ ಪುತ್ರನಾದ ಚಂದ್ರಕೇತುವು ದಿವ್ಯಾಸ್ತ್ರಸಂಪ್ರದಾಯವನ್ನುಪದೇಶವಂ ಮಾಡಿಕೊಂಡು ಚತುರಂಗ ಸೇನಾಸಮೇತನಾಗಿ ಆ ಅಶ್ವರಕ್ಷಕರಿಗೆ ಅಧ್ಯಕ್ಷನಾಗಿ ಸಂಗಡಲೇ ಶ್ರೀರಾಮನಿಂದ ಕಳುಹಿಸಲ್ಪಟ್ಟನು" ಎಂಬ ವಚನವಂ ಕೇಳಿ ವಾಸಂತಿಯು ಸಂತೋಷದಿಂ ಕುತೂಹಲದಿಂ ಕಣ್ಣಾಲಿಯಿಂದಲೂ ಕೂಡಿದವಳಾಗಿ,—ಎಲೌ ತಾಯೇ, ಕುಮಾರನಾದ ಲಕ್ಷ್ಮಣಸ್ವಾಮಿಗೂ ಕೂಡ ಇಂಥ ಪುತ್ರನುಂಟಾದನೆಂಬುದಂ ಕೇಳಿ ನಾನು ಜೀವಿಸುತ್ತೇನೆ" ಎನಲು; ಆತ್ರೇಯಿಯು ವಾಸಂತಿಯಂ ಕುರಿತು—"ಎಲೌ ಪುಣ್ಯವತಿಯೇ, ಕೇಳು. ಅಷ್ಟರೊಳಗೆ ರಾಜದ್ವಾರದಲ್ಲಿ ಒಬ್ಬ ಬ್ರಾಹ್ಮಣನು ಮೃತನಾದ ಪುತ್ರನಂ ಮುಂದೆ ಇಟ್ಟು ವಕ್ಷಸ್ಥಳವಂ ತಾಡಿಸುತ, ಲೋಕದಲ್ಲಿ ಬ್ರಾಹ್ಮಣನಿಗೆ ಯಾರೂ ದಿಕ್ಕಿಲ್ಲವೆಂದು ಮೊರೆಯಿಟ್ಟನು." ಅದಂ ಕೇಳಿ ವಾಸಂತಿಯು—"ಮುಂದೆ ಏನು ನಡೆಯಿತು?" ಎಂದು ಪ್ರಶ್ನೆಗೈಯಲು; ಆತ್ರೇಯಿಯು—"ಎಲೌ ವನದೇವತೆಯೇ, ಕೇಳು, ಆಬಳಿಕ ಪರಮದಯಾಳುವಾದ ಶ್ರೀರಾಮಭದ್ರನು ಆ ಬ್ರಾಹ್ಮಣನ ಮೊರೆಯಂ ಕೇಳಿ, ತನ್ನ ರಾಜದೋಷ ಹೊರತು ಪ್ರಜೆಗಳಿಗೆ ಅಕಾಲಮೃತ್ಯುವು ಬರಲಾರದಾದಕಾರಣ ಇದು ತನ್ನ ದೋಷವೇ ಸರಿ ಎಂದು ತನ್ನ ಮನಸ್ಸಿನಲ್ಲಿ ವಿಚಾರಿಸುತ್ತಲಿರಲು; ಆಗಲೇ ಒಂದು ಆಕಾಶವಾಣಿಯು ಸ್ವಾಮಿಯಿಂ ಶ್ರುತವಾಯಿತು. ಅದೇನೆಂದರೆ:—ಎಲೈ ರಾಮನೇ, ಶಂಬೂಕನೆಂಬ ಒಬ್ಬ ಶೂದ್ರನು ಭೂಮಿಯಲ್ಲಿ ತಪಸ್ಸಂ ಮಾಡುತ್ತಲಿದ್ದಾನೆ. ನಿನ್ನಿಂದ ಅವನು ಶಿರಶ್ಛೇದನವಂ ಮಾಡಿಸಿಕೊಂಬುದಕ್ಕೆ ಯೋಗ್ಯನಾದಕಾರಣ, ನೀನು ಆ ಶಂಬೂಕನಂ ಸಂಹರಿಸಿ ಈ ಬ್ರಾಹ್ಮಣಪುತ್ರನಂ ಬದುಕಿಸುವನಾಗು,—ಎಂದು ಆಕಾಶವಾಣಿಯು ನುಡಿಯಲು; ಅದಂ ಕೇಳಿ ಜಗತ್ಪತಿಯಾದ ಶ್ರೀರಾಮನು ಖಡ್ಗಪಾಣಿಯಾಗಿ ಪುಷ್ಪಕವೆಂಬ ವಿಮಾನವನೇರಿ ಶೂದ್ರನಾದ ತಪಸ್ವಿಯಂ ಹುಡುಕುವುದಕ್ಕೋಸ್ಕರ ಸಮಸ್ತ ದಿಕ್ಕುಗಳಂ

ಸಂಚರಿಸಲೋಸುಗ ಪ್ರಾರಂಭಿಸಿದನು'' ಎಂಬ ಆತ್ರೇಯಿಯ ವಚನವಂ ಕೇಳಿ ವಾಸಂತಿಯು-''ಎಲೌ ಪೂಜ್ಯಳೇ, ಶಂಬೂಕನೆಂಬ ಶೂದ್ರನು ಈ ಜನಸ್ಥಾನದಲ್ಲಿ ತಪಸ್ಸಂಗೈಯುತಲಿದ್ದಾನೆಯಾದಕಾರಣ ಶ್ರೀರಾಮಭದ್ರನು ಪುನಃ ಬಂದು ಈ ಜನಸ್ಥಾನದ ವನವನ್ನು ಅಲಂಕಾರಯುಕ್ತವನ್ನಾಗಿ ಮಾಡುವನೊ ಏನು?'' ಎಂದು ಪ್ರಶ್ನೆಗೈಯಲು; ಆತ್ರೇಯಿಯು-''ಎಲೌ ವನದೇವತೆಯೇ, ಶ್ರೀರಾಮನು ಇಲ್ಲಿಗೆ ಈಗ ಬರುವನು'' ಎಂದು ಪೇಳಿದಳು. ಅದಂ ಕೇಳಿ ವಾಸಂತಿಯು-''ಎಲೌ ಆತ್ರೇಯಿ, ಇದು ಹೀಗಿರಲಿ ಈ ದಿವಸದ ಮಧ್ಯಾಹ್ನವಾಯಿತು. ಅದೆಂತೆನೆ: ಬಿಸಿಲಿನ ವೇಗದಿಂದ ಹೊಱಗಣ ಸಂಚಾರವಂ ಬಿಟ್ಟು ವೃಕ್ಷಗಳಲ್ಲೇ ಸೇರಿಕೊಂಡು ಅಲ್ಲಿಯ ನೆರಳನ್ನಾಶ್ರೈಸಿಕೊಂಡು ಇರುವ ಪಕ್ಷಿಗಳು ತಮ್ಮ ಚಂಚೂಪುಟದಿಂದ ಸೆಳೆಯಲ್ಪಟ್ಟ ಕ್ರಿಮಿಯುಕ್ತಗಳಾಗಿರುವ ತ್ವಕ್ಕುಗಳಂ ಕೆರೆದು ಕೆರೆದು ಸೆಳೆಯುವುವಾದಕಾರಣ ಆ ಪಕ್ಷಿಗಳ ಚಂಚೂಪುಟಂಗಳಿಂ ಸೆಳೆಯಲ್ಪಟ್ಟ ಹುಳುತು ಇರುವ ತ್ವಕ್ಕುಗಳುಳ್ಳವಾಗಿ, ಮತ್ತು ಕೂಗುತ್ತಲಿರುವ ಮನೋಹರಂಗಳಾದ ಕಪೋತಪಕ್ಷಿಗಳು ಕಾಡಕೋಳಿಗಳು ಸಹ ಉಳ್ಳಂಥವಾಗಿ, ತಡಿಯಲ್ಲಿ ಬೆಳೆದಿರುವುದಾಗಿಯೂ ತಮ್ಮ ಕೊಂಬೆಗಳಲ್ಲಿ ಪಕ್ಷಿಗಳ ಗೂಡುಗಳಂ ಧರಿಸುತಲಿರುವುವಾಗಿಯೂ ಇರುವ ವೃಕ್ಷಗಳು ಬಿಸಲಿನಲ್ಲಿ ಬೆವರಿ ನವೆಗೊಂಡಿರುವ ಗಜಕಪೋಲಸ್ಥಾನಂಗಳಿಂ ಕೊಂಬೆಗಳು ಒರೆಯಲ್ಪಡುವುದಱಿಂ ಚೆನ್ನಾಗಿ ಕಂಪಿಸುವುವಾದಕಾರಣ ಕೆಳಗೆ ಉದುಱುತ್ತಲಿರುವ ಬಿಸಲಿನ ತಾಪದಿಂದ ದ್ರವರಹಿತಂಗಳಾದ ತೊಟ್ಟುಗಳಿಂ ಬೀಳುತ್ತಲಿರುವ ತಮ್ಮ ಪುಷ್ಪಂಗಳಿಂ ಗೋದಾವರೀ ನದಿಯಂ ಪೂಜಿಸುತ್ತಲಿವೆ'' ಎಂದು ಪೇಳಿದಳು.

ಈ ರೀತಿ ಆತ್ರೇಯಿಯು ವಾಸಂತಿಯು ಸಹ ಕೂಡಿ ಪರಸ್ಪರವಾಗಿ ಸಂಭಾಷಣವಂ ಮಾಡಿ ಈ ನಾಟಕದ ಪೂರ್ವೋತ್ತರಂಗಳಾದ ಕಥಾಭಾಗಂಗಳನ್ನು, ಸಾಂಪ್ರತ ಶಂಬೂಕನ ಸಂಹಾರಾರ್ಥವಾಗಿ ಪುನಃ ಶ್ರೀರಾಮನು ಬಂದು ಜನಸ್ಥಾನವೆಂಬ ದಂಡಕಾರಣ್ಯ ಪ್ರದೇಶವಂ ಪ್ರವೇಶಿಸುವುದನ್ನು ಸಹ ಸೂಚಿಸಿ ಪೊಱಟುಪೋದರು.

ಆ ಬಳಿಕ ಶ್ರೀರಾಮನು ಶಂಬೂಕಸಂಹಾರಾರ್ಥವಾಗಿ ಪುಷ್ಪಕವನ್ನೇಱಿ ದಯಾಪೂರ್ವಕವಾಗಿ, ಹಸ್ತದಿಂ ಒರೆಯಿಂದ ಎಳೆಯಲ್ಪಟ್ಟ ಖಡ್ಗವುಳ್ಳವನಾಗಿ ರಂಗಸ್ಥಾನವಂ ಪ್ರವೇಶಿಸಿ ತನ್ನ ಬಲಗೈಯಂ ಕುಱಿತು ಇಂತೆಂದನು:-''ಎಲೈ ದಕ್ಷಿಣಹಸ್ತವೇ, ಮೃತನಾದ ಬ್ರಾಹ್ಮಣಶಿಶುವಂ ಬದುಕಿಸುವುದಕ್ಕೋಸ್ಕರ ಈ ಶೂದ್ರಮುನಿಯಾದ ಶಂಬೂಕನಲ್ಲಿ ಖಡ್ಗವಂ ಬಿಡು, ಚಿಂತಿಸಬೇಡ. ಪೂರ್ಣವಾದ ಗರ್ಭವುಳ್ಳುದಱಿಂ ಖೇದಯುಕ್ತಳಾದ ಸೀತೆಯನ್ನರಣ್ಯವನ್ನೈದಿಸಿ ತ್ಯಾಗಂಗೈಯುವುದಱಲ್ಲಿ ಸಮರ್ಥನಾದ ಅಂಥ ರಾಮನಿಗೆ ಚಿಹ್ನವಾಗುವೆಯಾದಕಾರಣ ನಿನಗೆ ದಯೆಯೇಕೆ?'' ಎಂದು ಪೇಳುತ್ತ ಅತಿವ್ಯಸನದಿಂ ಖಡ್ಗದಿಂದ ಆ ಶಂಬೂಕನಂ ಸಂಹರಿಸಿ, ತನ್ನ ಮನಸ್ಸಿನಲ್ಲಿ-ಕಠಿನಚಿತ್ತನಾದ ರಾಮನಿಗೆ ಅನುಗುಣವಾದ ಈ ಮುನಿಸಂಹಾರವಂ ಮಾಡಿದೆನು. ಇನ್ನಾದರೂ ಆ ಬ್ರಾಹ್ಮಣಶಿಶುವು ಜೀವಿಸುವುದೊ? ಎಂದು ಚಿಂತಿಸುತಿರಲು; ಅಷ್ಟಱೊಳಗೆ ಒಬ್ಬ ದಿವ್ಯಪುರುಷನು ರಂಗಸ್ಥಳವಂ ಪ್ರವೇಶಿಸಿ-''ರಾಜಶ್ರೇಷ್ಠನು ಸರ್ವೋತ್ಕೃಷ್ಟನಾಗಿರಲಿ!'' ಎಂದು ವಂದಿಸಿ ಇಂತೆಂದನು:-''ಎಲೈ ಶ್ರೀರಾಮನೇ, ಪುತ್ರವ್ಯಸನದಿಂ ಪೀಡಿತನಾದ

ಬ್ರಾಹ್ಮಣನಿಗೆ ನೀನು ಅಭಯುವಂ ಕೊಟ್ಟು ಯಮನಿಗಿಂತಲೂ ಅತಿಶಯವಾಗಿ ನನ್ನಂ ದಂಡಿಸಿದೆಯಾದಕಾರಣ ಆ ಬ್ರಾಹ್ಮಣನ ಶಿಶುವು ಜೀವಿಸಿದಂಥದಾಯಿತು. ಮತ್ತು ಶೂದ್ರನಾದ ನನಗೂ ಕೂಡ ನಿನ್ನ ಶಸ್ತ್ರಪ್ರಯೋಗದಿಂ ದೇವತ್ವವುಂಟಾಗಿ ಪರಮೈಶ್ವರ್ಯವು ಪ್ರಾಪ್ತವಾಯಿತು. ಶಂಬೂಕನಾದ ಈ ನಾನು ಶಿರಸ್ಸಿನಿಂದ ನಿನ್ನ ಪಾದಂಗಳಂ ನಮಸ್ಕರಿಸುತ್ತೇನೆ. ಲೋಕದಲ್ಲಿ ಸತ್ಪುರುಷರ ಸಂಗತಿಯಿಂ ಸಂಭವಿಸಿದ ಮರಣಂಗಳು ಕೂಡ ಪುರುಷರಂ ದುಃಖಸಾಗರದಿಂ ದಾಂಟಿಸುವುವಾದಕಾರಣ ಮಹಾಪುರುಷನಾದ ನಿನ್ನ ಸಂಗತಿಯಿಂ ನಾನು ಕೃತಾರ್ಥನಾದೆನು '' ಎಂದು ಶಂಬೂಕನು ಬಿನ್ನವಿಸಲು; ಅದಂ ಕೇಳಿ ಶ್ರೀರಾಮನು—'' ಎಲೈ ದಿವ್ಯಪುರುಷನೇ, ಆ ಬ್ರಾಹ್ಮಣನ ಶಿಶುವು ಜೀವಿಸಿದನೆಂಬುದು, ನಿನಗೆ ದೇವತ್ವವುಂಟಾಯಿತೆಂಬುದು ಸಹ ಇವೆರಡೂ ನಮಗೆ ಇಷ್ಟವಾದುವು. ಅದುಕಾರಣ ತೀಕ್ಷ್ಣವಾದ ತಪಸ್ಸಿನ ಫಲವಂ ನೀನು ಅನುಭವಿಸುವನಾಗು. ಮತ್ತು ಯಾವ ದಿವ್ಯ ಲೋಕದಲ್ಲಿ ಪುಣ್ಯಫಲರೂಪಂಗಳಾದ ಸಂಪತ್ತುಗಳುಂಟೋ, ಬ್ರಹ್ಮಾನುಸಂಧಾನದಿಂ ಪ್ರಕಾಶಿಸುವ ಸುಖಂಗಳು ಬ್ರಹ್ಮಸ್ವರೂಪಾನುಭವದಿಂ ಶೋಭಿಸುವ ಆನಂದಗಳು ಸಹ ಉಂಟಾಗುವುವೊ, ಅಂಥ ತೇಜೋಮಯಂಗಳಾದ ಶುಭಕರಂಗಳಾದ ವೈರಾಜಗಳೆಂಬ ದಿವ್ಯಲೋಕಂಗಳು ನಿನಗೆ ಉಂಟಾಗಲಿ !'' ಎಂದು ಪೇಳಿದನು. ಶಂಬೂಕನು—'' ಎಲೈ ಸ್ವಾಮಿಯೇ, ಭೂಮಿಯಲ್ಲಿ ಶೂದ್ರನಾಗಿ ಜನಿಸಿದ ನನಗೆ ಈ ದೇವತ್ವವು ಈ ಮಹಿಮೆಯು ಉಂಟಾಗುವುದಕ್ಕೆ ನಿನ್ನ ಪ್ರಸಾದವೇ ಮುಖ್ಯಕಾರಣ ಹೊರತು ತಪಸ್ಸುಗಳಿಂ ಫಲವೇನು ? ಆದಾಗ್ಯೂ ನನಗೆ ತಪಸ್ಸು ಮಹತ್ತಾದ ಉಪಕಾರವಂ ಮಾಡಿತು. ಅದೆಂತೆನೆ :—ಎಲೈ ಸ್ವಾಮಿಯೇ, ಲೋಕಂಗಳಿಗೆ ಅಧಿಪತಿಯಾಗಿ ರಕ್ಷಕನಾಗಿಯೂ ಇರುವೆಯಾದಕಾರಣ ಸರ್ವಜನರಿಂದಲೂ ಹುಡುಕಲು ಯೋಗ್ಯನಾದ ನೀನು ಈ ಲೋಕದಲ್ಲಿ ಶೂದ್ರನಾದ ನನ್ನಂ ಹುಡುಕುವವನಾಗಿ ನೂರು ಯೋಜನಂಗಳಂ ದಾಂಟಿಕೊಂಡು ಈ ಜನಸ್ಥಾನಕ್ಕೆ ಪುನಃ ಬಂದೆ ಎಂಬ ಅರ್ಥವು ನನ್ನ ತಪಸ್ಸುಗಳ ಅನುಗ್ರಹವೇ ಸರಿ. ಹಾಗಲ್ಲದಿದ್ದರೆ ನೀನು ಪುನಃ ಅಯೋಧ್ಯಾಪಟ್ಟಣದಿಂದ ಈ ದಂಡಕಾರಣ್ಯದಲ್ಲಿ ಬರೋಣವು ಎಂತು ಉಂಟಾಗುವುದು ? '' ಎಂದು ಶಂಬೂಕನು ಬಿನ್ನವಿಸಲು ; ಅದಂ ಕೇಳಿ ಶ್ರೀರಾಮನು—'' ಇದೇನು ದಂಡಕಾರಣ್ಯವೆಂದು ಪೇಳುತ್ತಾನೆ ! '' ಎನುತ, ನಾಲ್ಕುಕಡೆಯಲ್ಲೂ ನೋಡಿ—'' ಹಾ! ಹೌದು. ಅದೆಂತೆನೆ : ಒಂದು ಕಡೆಯಲ್ಲಿ ಮನೋಹರಂಗಳಾದ ನೆರಳುಗಳುಳ್ಳವಾಗಿ, ಮತ್ತೊಂದುಕಡೆಯಲ್ಲಿ ಭಯಂಕರವಾದ ವಿಸ್ತಾರದಿಂದ ನೋಡಲಶಕ್ಯವಾದಂಥವುಗಳಾಗಿ, ಮತ್ತು ಪರ್ವತನದಿಗಳ ಶಬ್ದಾಡಂಬರಗಳಿಂದ ಸರ್ವಪ್ರದೇಶಗಳಲ್ಲಿಯೂ ಧ್ವನಿಗೈಯುತಲಿರುವ ದಿಕ್ಕುಗಳುಳ್ಳವಾಗಿ, ಮತ್ತು ತೀರ್ಥಗಳು ಆಶ್ರಮಗಳು ಪರ್ವತಗಳು ನದಿಗಳು ಹಳ್ಳಗಳು ಪ್ರವೇಶಿಸಲಶಕ್ಯವಾದ ವನಗಳು ಸಹ ಇವುಗಳೊಡಗೂಡಿರುವುವಾಗಿ, ನಮ್ಮಿಂದ ಪರಿಚಯಮಾಡಲ್ಪಟ್ಟ ಭೂಮಿಯುಳ್ಳವಾಗಿಯೂ ಇರುವ ದಂಡಕಾರಣ್ಯ ಪ್ರದೇಶಗಳು ಚೆನ್ನಾಗಿ ಕಾಣಲ್ಪಡುತ್ತಲಿವೆ '' ಎನಲು ; ಶಂಬೂಕನು ಕೈಮುಗಿದು, '' ಎಲೈ ಸ್ವಾಮಿಯೇ, ಇದು ದಂಡಕಾರಣ್ಯವೇ ಹೌದು. ಇಲ್ಲೇ ಅಲ್ಲವೆ ಸ್ವಾಮಿಯು ವಾಸವಂ ಮಾಡುತ್ತ ಹದಿನಾಲ್ಕು ಸಾಸಿರಮಂದಿ ರಾಕ್ಷಸರಂ

ಸೇನಾಪತಿಗಳಂ ಖರನು ದೂಷಣನು ತ್ರಿಶಿರನೆಂಬುವನು ಸಹ ಈ ಮೂಱು ಮಂದಿ ವೀರರನ್ನು ಕೂಡ ಯುದ್ಧದಲ್ಲಿ ನೀವು ಸಂಹರಿಸಿದಿರಿ. ಆರೀತಿ ತಾವು ದುಷ್ಟರಂ ಸಂಹರಿಸಿದುದಱಿಂದಲೇ ಸಿದ್ಧಕ್ಷೇತ್ರವಾದ ಈ ಜನಸ್ಥಾನದಲ್ಲಿ ನಮ್ಮಂಥ ದಶೆಯಲ್ಲಿರುವ ಜನರಿಗೆ ಏತಱಿಂದಲೂ ಭಯವಿಲ್ಲದಂತೆ ಸಂಚಾರವುಂಟಾಯಿತು '' ಎಂದು ಪೇಳಲು ; ಶ್ರೀರಾಮನು– '' ಎಲೈ ದಿವ್ಯಪುರುಷನೇ, ಇದು ದಂಡಕಾರಣ್ಯಮಾತ್ರವೆಯಲ್ಲದೆ ಜನಸ್ಥಾನವೂ ಹೌದೆ ? '' ಎನಲು ; ಶಂಬೂಕನು–'' ಎಲೈ ಸ್ವಾಮಿಯೇ, ಇದು ಜನಸ್ಥಾನವೇ ಸರಿ. ಇತ್ತಲು ಸರ್ವಪ್ರಾಣಿಗಳಿಗೂ ರೋಮಾಂಚನವನ್ನುಂಟುಮಾಡುವುವಾಗಿ, ಅತ್ಯಂತವಾಗಿ ಮದಿಸಿರುವ ದುಷ್ಟಮೃಗಗಳ ಸಮೂಹಂಗಳಿಂ ಆಕ್ರಮಿಸಲ್ಪಟ್ಟ ಪರ್ವತಗಳು ಗುಹೆಗಳು ಸಹ ಉಳ್ಳಂಥವಾಗಿಯೂ, ಈ ಜನಸ್ಥಾನ ಸಮೀಪದಲ್ಲಿರುವ ಈ ದೀರ್ಘಂಗಳಾದ ಅರಣ್ಯಗಳು ದಕ್ಷಿಣದಿಕ್ಕಂ ವ್ಯಾಪಿಸಿಕೊಂಡು ಇವೆ, ನೋಡುವವರಾಗಿ; ಈ ದಂಡ್ಯಕಾರಣ್ಯಪ್ರದೇಶಗಳು ಹೇಗೆ ಇರುವುವೆಂದರೆ :–ಒಂದುಕಡೆಯಲ್ಲಿ ನಿಶ್ಶಬ್ದಂಗಳಾಗಿ ಪ್ರಾಣಿಗಳ ಸಂಚಾರವಿಲ್ಲದೆ ಸ್ತಿಮಿತಗಳಾಗಿಯೂ ಇವೆ ; ಮತ್ತೊಂದು ಕಡೆಯಲ್ಲಿ ಕರ್ಣಕಠೋರಂಗಳಾದ ಮೃಗಪಕ್ಷಿ ಮೊದಲಾದ ಜಂತುಗಳ ಕೋಲಾಹಲಶಬ್ದಗಳುಳ್ಳವಾಗಿ ಇವೆ ; ಮತ್ತೊಂದು ಕಡೆಯಲ್ಲಿ ತಮ್ಮ ಇಚ್ಛೆ ಬಂದಂತೆ ನಿದ್ರೆಗೈಯುತ್ತಲಿರುವ ಮಹಾಶರೀರಗಳುಳ್ಳ ಸರ್ಪಗಳ ವಿಷಯುಕ್ತಗಳಾದ ಶ್ವಾಸಗಳಿಂದ ಅತ್ಯಂತವಾಗಿ ಜ್ವಲಿಸುತ್ತಲಿರುವ ಅಗ್ನಿಯುಳ್ಳವಾಗಿಯೂ ಇವೆ; ಮತ್ತು ಹಳ್ಳಗಳು ಗರ್ಭಪ್ರದೇಶಗಳಲ್ಲಿ ಸ್ವಲ್ಪವಾಗಿ ಸ್ವಚ್ಛವಾಗಿಯು ಇರುವ ಜಲವುಳ್ಳವಾಗಿ ಇವೆ ; ಮತ್ತು ಈ ಅರಣ್ಯಪ್ರದೇಶಗಳಲ್ಲಿ ಬಾಯಾಱಿಕೆಯುಳ್ಳ ಹಾವುರಾಣಿಗಳು ಅಜಗರಂಗಳ ದೇಹಂಗಳಿಂ ದ್ರವಿಸುವ ಸ್ವೇದಜಲವಂ ಪಾನಂಗೈಯುತಲಿವೆ : ನೋಡಿ '' ಎಂಬದಾಗಿ ಶಂಬೂಕನು ದಂಡಕಾರಣ್ಯಪ್ರದೇಶಂಗಳಂ ತೋಱಿಸಿದವನಾಗಲು ; ಶ್ರೀರಾಮನು–'' ಎಲೈ ದಿವ್ಯಪುರುಷನೇ, ಪೂರ್ವದಲ್ಲಿ ಖರನೆಂಬ ರಾಕ್ಷಸನಿಗೆ ಸ್ಥಾನವಾಗಿ ಇದ್ದ ಈ ಜನಸ್ಥಾನವಂ ನಾನು ನೋಡುತ್ತೇನೆ ; ಇಲ್ಲಿ ಇರುವಾಗ ನಡೆದ ಆ ಪೂರ್ವವೃತ್ತಾಂತಗಳನ್ನು ಪ್ರತ್ಯಕ್ಷವಾಗಿರುವವನಂತೆ ಅನುಭವಿಸುತ್ತೇನೆ '' ಎಂದು ಪೇಳಿ ನಾಲ್ಕು ಕಡೆಯಲ್ಲೂ ನೋಡಿ, '' ಸೀತೆಯು ಸರ್ವ ಪ್ರಕಾರಗಳಿಂದಲೂ ರಾಮನಲ್ಲಿ ಪರಮಪ್ರೀತಿಯುಳ್ಳವಳಾಗಿ ಇದ್ದಳು '' ಎಂದು ಸೀತೆಯಂ ಸ್ಮರಿಸುತ್ತ ಶಂಬೂಕನಂ ಕುಱಿತು–'' ಎಲೈ ಶಂಬೂಕನೇ, ಇವಲ್ಲವೆ ಪ್ರವೇಶಿಸಲಶಕ್ಯಂಗಳಾದ ಅರಣ್ಯಗಳು ? ಇನ್ನು ಇವುಗಳಿಗಿಂತಲೂ ಭಯಂಕರವಾದುವು ಇಲ್ಲವೇನು ? '' ಎನ್ನುತ ಕಣ್ಣೀರಂ ಧರಿಸಿ, '' ಎಲೈ ಪೂರ್ವದಲ್ಲಿ ಯಾವ ಸೀತೆಯು ನನ್ನಂ ಕುಱಿತು–ಎಲೈ ಪ್ರಿಯನೇ, ಪುಷ್ಪರಸಂಗಳಿಂ ಪರಿಮಳಿಸುವ ವನಂಗಳಲ್ಲಿ ನಿನ್ನೊಡಗೂಡಿ ವಾಸಂಗೈಯುವೆನೆಂದು ಪೇಳಿ, ಈ ಪ್ರದೇಶಗಳಲ್ಲಿ ನನ್ನೊಡನೆ ಕೂಡಿ ವಿಹಾರಂಗಳಂ ಮಾಡಿದವಳೇ ಆಗಿ, ತನ್ನ ಸಂಕಲ್ಪಗಳಂ ಪೂರೈಸಿದಳಲ್ಲ, ಆ ಸೀತೆಗೆ ನನ್ನಲ್ಲಿರುವ ಆ ಸ್ನೇಹವು ಇಂಥದೆಂದು ವರ್ಣಿಸುವುದಕ್ಕೆ ಶಕ್ಯವಲ್ಲ. ಲೋಕದಲ್ಲಿ ಯಾವ ಜನಕ್ಕೆ ಯಾವ ಜನವು ಅತಿಪ್ರೇಮವಿಷಯವಾಗಿರುವುದೊ ಆ ಜನವು ಆ ಜನಕ್ಕೆ ಸುಖಲೇಶವನ್ನಾಚರಿಸುವನಾಗದಿದ್ದಾಗ್ಯೂ ತನ್ನ ಸುಖವಿಶೇಷದಿಂದಲೇ ಅವನ ದುಃಖಂಗಳಂ ಪರಿಹರಿಸುತ್ತಾನೆ. ಅದು ಹೇಗೆಂದರೆ : ಪ್ರೇಮಪಾತ್ರವಾದ ಜನವು

ಸೌಖ್ಯವನ್ನನುಭವಿಸುವುದು ಯಾವದುಂಟೊ ಅದೇ ಪ್ರೇಮವಂ ಮಾಡುವ ಜನಕ್ಕೆ ಧನವಾಗುವುದಾದಕಾರಣ, ಪೂರ್ವದಲ್ಲಿ ಈ ಜನಸ್ಥಾನದಲ್ಲಿ ವಾಸವಂ ಮಾಡುವಾಗ ಸೀತೆಯು ಸರ್ವ ಪ್ರಕಾರಂಗಳಿಂದಲೂ ನನ್ನಂ ಸೌಖ್ಯಪಡಿಸಿ ಆ ನನ್ನ ಸೌಖ್ಯಗಳಿಂದಲೇ ತನ್ನ ದುಃಖಂಗಳಂ ಪರಿಹರಿಸಿಕೊಂಬವಳಾಗಿ ಇದ್ದಳು" ಎಂದು ವ್ಯಸನಪಟ್ಟವನಾಗಲು ; ಅದಂ ಕೇಳಿ ಶಂಬೂಕನು–"ಎಲೈ ಸ್ವಾಮಿಯೇ, ಆ ಸುಖವಿಶೇಷಂಗಳು ಪುನಃ ದುರ್ಲಭಂಗಳಾದಕಾರಣ ಆ ಪೂರ್ವವೃತ್ತಾಂತವಂ ಸ್ಮರಿಸಿ ಫಲವೇನು? ಇಲ್ಲಿಂದ ಮುಂದೆ ಮದಭರಿತಗಳಾಗಿರುವ ನವಿಲುಗಳ ಕಂಠಗಳಂತೆ ಶ್ಯಾಮಲವಾದ ಕಾಂತಿಯುಳ್ಳ ಸಮೀಪಪ್ರದೇಶಂಗಳಿಂ ವ್ಯಾಪಿಸಲ್ಪಟ್ಟುವಾಗಿ ಮತ್ತು ನಿಬಿಡಂಗಳಾಗಿ ನೀಲವರ್ಣಗಳಾಗಿಯೂ ಇರುವ ನೆರಳುಗಳುಳ್ಳ ವೃಕ್ಷಗಳ ಸಮೂಹಂಗಳಿಂ ಅಲಂಕರಿಸಲ್ಪಟ್ಟುವಾಗಿ, ಇತರ ಭಯವಿಲ್ಲದೆ ನಿಶ್ಚಲಂಗಳಾಗಿರುವ ಮೃಗಸಮೂಹಗಳುಳ್ಳವಾಗಿ, ನಿರಾತಂಕಗಳಾಗಿ, ಅಪಾರಂಗಳೂ ಆಗಿರುವ ಈ ಮಹಾರಣ್ಯಗಳಂ ಮಹಾಭಾಗ್ಯವಂತನಾದ ಸ್ವಾಮಿಯು ನೋಡಬೇಕು. ಎಲೈ ಸ್ವಾಮಿಯೇ, ಈ ಅರಣ್ಯಗಳಲ್ಲಿ ನದಿಗಳು ಮದಯುಕ್ತಗಳಾದ ಪಕ್ಷಿಗಳಿಂ ಕಂಪಿಸಲ್ಪಟ್ಟಿರುವ ವಾನೀರಗಳೆಂಬ ವೃಕ್ಷವಿಶೇಷಗಳಿಂದ ಉದುರುತ್ತಲಿರುವ ಪುಷ್ಪಗಳಿಂ ಪರಿಮಳಯುಕ್ತವಾಗಿ ಶೀತಳವಾಗಿ ಸ್ವಚ್ಛವಾಗಿಯೂ ಇರುವ ಜಲವುಳ್ಳವಾಗಿ ಮತ್ತು ತೀರಗಳಲ್ಲಿ ಪಟಲಸಮೂಹಂಗಳು ಪರಿಪಕ್ವಗಳಾದುದರಿಂ ಕಪ್ಪಾಗಿರುವ ಜಂಬೂವೃಕ್ಷಗಳ ಪೂವೆಗಳಿಂ ಆ ಜಂಬೂಫಲಗಳು ಉದುರುವುದಾದಕಾರಣ ಧ್ವನಿಗೈಯುತ್ತಲಿರುವ ಬಹು ಪ್ರವಾಹವುಳ್ಳವಾಗಿಯೂ ಪ್ರವಹಿಸುತ್ತಲಿವೆ ; ನೋಡಬೇಕು. ಇನ್ನು ಈ ಅರಣ್ಯಗಳಲ್ಲಿ ಗುಹೆಗಳನ್ನಾಶ್ರಯಿಸಿಕೊಂಡು ಇರುವ ಯೌವನಶಾಲಿಗಳಾದ ಕರಡಿಗಳ ಶ್ಲೇಷ್ಮದೊಡಗೂಡಿ ಕಂಠದಿಂ ಹೊರಡುವ ಗರ್ಗರ ಶಬ್ದಗಳು ಪ್ರತಿಧ್ವನಿಗಳಿಂ ಮಹತ್ತುಗಳಾಗಿ ಸುತ್ತಲೂ ವ್ಯಾಪಿಸುತ್ತಲವೆ ; ಮತ್ತು ಸಲ್ಲಕಿಗಳೆಂಬ ವೃಕ್ಷಗಳಲ್ಲಿ ಕಾಡಾನೆಗಳಿಂದ ಸೀಳಲ್ಪಟ್ಟುವಾದಕಾರಣ ವಿಸ್ತರಿಸಿಕೊಂಡಿರುವ ಗ್ರಂಥಿಗಳಿಂ ಹೊರಡುವ ವೃಕ್ಷಸಾರಂಗಳ ಗಂಧವು ಶೀತಲವಾಗಿ ತೀಕ್ಷ್ಣವಾಗಿ ಕಹಿಯಾಗಿಯೂ ವ್ಯಾಪಿಸುತ್ತಲಿದೆ ; ನೋಡಿ" ಎಂದು ಶಂಬೂಕನು ಬಿನ್ನವಿಸಲು ; ಶ್ರೀರಾಮನು ಅದಂ ಕೇಳಿ ಸೀತಾಶೋಕದಿಂ ಸ್ತಂಭಿಸಲ್ಪಟ್ಟ ವಾಕ್ಕುಳ್ಳವನಾಗಿ, ಆ ಬಳಿಕ–"ಎಲೈ ಪುಣ್ಯವಂತನೇ, ನಿನ್ನ ದೇವಲೋಕಮಾರ್ಗಗಳು ಕ್ಷೇಮಂಕರಗಳಾಗಲಿ ! ಪುಣ್ಯಕರಂಗಳಾದ ಆ ದೇವಲೋಕಂಗಳಂ ಕುರಿತು ಪೋಗುವನಾಗು" ಎಂದು ನಿರೂಪಿಸಲು ; ಆ ದಿವ್ಯಪುರುಷನು "ಹಾಗೆ ಆಗಲಿ" ಎಂದು ಸ್ವಾಮಿಗೆ ಕೈಮುಗಿದು, "ಪೂರ್ವಿಕನಾಗಿ ಬ್ರಹ್ಮವಾದಿಯಾಗಿರುವ ಅಗಸ್ತ್ಯಮುನಿಯಂ ವಂದಿಸಿದವನಾಗಿ, ನಾನು ಶಾಶ್ವತವಾದ ಲೋಕವಂ ಪ್ರವೇಶಂಗೈಯುವೆನು" ಎಂದು ಪೇಳಿ ತೆರಳಿಪೋದನು.

ಆಗ ಶ್ರೀರಾಮನು ಈ ರೀತಿ ಚಿಂತಿಸಿದನು. ಅದೆಂತೆನೆ :–ಯಾವ ವನದಲ್ಲಿ ನಾವು ವಾನಪ್ರಸ್ಥರಾಗಿ ದುಷ್ಟನಿಗ್ರಹ ಶಿಷ್ಟಪರಿಪಾಲನ ರೂಪವಾದ ಸ್ವಧರ್ಮದಲ್ಲಿ ಆಸಕ್ತರಾಗಿ ಸಂಸಾರವಿಷಯಗಳಲ್ಲಿ ರಸಜ್ಞರಾಗಿಯೂ ಬಹುಕಾಲ ಪೂರ್ವದಲ್ಲಿ ವಾಸವಂಗೈಯುತಲಿದ್ದೆವೊ, ಆ ವನವು ಪುನಃ ಎಂತು ನಮಗೆ ದೃಷ್ಟಿವಿಷಯವಾಯಿತು !"

ಎಂಬದಾಗಿ ಆಶ್ಚರ್ಯಪಟ್ಟು, ಪುನಃ ಪೂರ್ವದಲ್ಲಿ ವಾಸಂಗೈಯಲ್ಪಟ್ಟ ಆ ಪರ್ವತಾದಿಗಳಂ ನೋಡಿ ಸ್ವಾಮಿಯು ಅವಂ ಸ್ಮರಿಸುವನದೆಂತೆನೆ:–ಧ್ವನಿಗೈಯುತ್ತಲಿರುವ ನವಿಲುಗಳುಳ್ಳ ಈ ಪರ್ವತಗಳು ಆ ಪರ್ವತಗಳೇ ಅಲ್ಲವೆ? ಮದಿಸಿರುವ ಹುಲ್ಲೆಗಳುಳ್ಳ ಈ ವನಂಗಳು ಆ ವನಂಗಳೇ ಅಲ್ಲವೆ? ಅತಿ ಮನೋಹರಂಗಳಾದ ವಂಜುಳಗಳೆಂಬ ಪಕ್ಷಿಗಳ ಧ್ವನಿಗಳುಳ್ಳವಾಗಿ ನಿಬಿಡಂಗಳಾಗಿ ಬೆಳೆದಿರುವ ನೀಲವರ್ಣಂಗಳಾದ ನಿಚುಳಗಳೆಂಬ ವೃಕ್ಷಗಳುಳ್ಳ ಈ ನದೀತೀರಗಳು ಆ ನದೀತೀರಂಗಳೇ ಅಲ್ಲವೆ? ಎಂದು ಸ್ಮರಿಸಿದನು. ಮತ್ತು ಯಾವ ಪರ್ವತವು ಮೇಘಸಮೂಹದಂತೆ ಸಮೀಪದಲ್ಲಿ ಕಪ್ಪಾಗಿ ಪ್ರಕಾಶಿಸುತ್ತಲಿದೆಯೊ ಮತ್ತು ಯಾತಱ ಸಮೀಪದಲ್ಲಿ ಗೋದಾವರಿಯೆಂಬ ನದಿಯು ಪ್ರವಹಿಸುತ್ತಲಿದೆಯೋ ಆ ಪರ್ವತವು ಪ್ರಸ್ರವಣವೆಂಬುದಲ್ಲವೆ? ಪೂರ್ವದಲ್ಲಿ ಈ ಪ್ರಸ್ರವಣಪರ್ವತದ ಶಿಖರದಲ್ಲಿಯೇ ಗೃಧ್ರರಾಜನಾದ ಜಟಾಯುವು ವಾಸಂಗೈಯುತ್ತಲಿದ್ದನು. ಈ ಪರ್ವತದೊಳಗೆ ನಾವೂ ಕೂಡ ನಮ್ಮ ಪರ್ಣಶಾಲೆಗಳಲ್ಲಿ ವಾಸಂಗೈಯುತ್ತಲಿದ್ದೆವು. ಮತ್ತು ಈ ಪರ್ವತದ ಸಮೀಪದಲ್ಲೇ ಗೋದಾವರೀಜಲದಲ್ಲಿ ವಾಸಿಸಿಕೊಂಡು ಕಪ್ಪಾಗಿರುವ ಕೋಮಲವಾದ ವೃಕ್ಷಗಳ ಸಂಪತ್ತುಳ್ಳುದಾಗಿ ಒಳಗೆ ಧ್ವನಿಗೈಯುತಲಿರುವ ಪಕ್ಷಿಗಳಿಂ ಘೋಷಯುಕ್ತವಾಗಿಯೂ ಇರುವ ಈ ವನಪ್ರದೇಶವು ರಮಣೀಯವಾಗಿ ಇದೆ. ಮತ್ತು ಯಾವ ಪಂಚವಟಿಯಲ್ಲಿ ಬಹುಕಾಲ ವಾಸವಂ ಮಾಡಿದುದಱಿಂ ಸಮಸ್ತ ಪ್ರದೇಶಂಗಳು ನಾನಾ ಪ್ರಕಾರಂಗಳಾದ ನಮ್ಮ ವಿಲಾಸಗಳಿಗೆ ಸಾಕ್ಷಿಗಳಾಗಿ ಇರುವುವೊ, ಇನ್ನು ಎಲ್ಲಿ ಪ್ರಿಯಳಾದ ಸೀತೆಗೆ ಪ್ರಿಯಸಖಿಯಾದ ವಾಸಂತಿಯೆಂಬ ವನದೇವತೆಯು ವಾಸಂಗೈಯುವಳೊ, ಆ ಪಂಚವಟಿಯೆಂಬ ಕ್ಷೇತ್ರವು ಇದೇ ಅಲ್ಲವೆ? ಈ ರೀತಿ ಈ ದಂಡಕಾರಣ್ಯಪ್ರದೇಶಂಗಳೆಲ್ಲವು ಈಗ ಪುನಃ ದೃಷ್ಟಿವಿಷಯಂಗಳಾಗುವುದಱಿಂ ಎನಗೆ ದುಃಖವು ಪ್ರಾಪ್ತವಾಯಿತು.– ಎಂದು ಚಿಂತಿಸಿ, ಶ್ರೀರಾಮನು ಆ ದುಃಖವಂ ವಿವರಿಸುವನದೆಂತೆನೆ:–ಯಾವ ರೀತಿ ದೇಹದಲ್ಲಿ ತಗಲಿದಂಥ ವಿಷರಸವು ಬಹುಕಾಲದಿಂ ತನ್ನ ವೇಗವಂ ತೋಱಿಸುವುದಾಗಿ ಪ್ರಯತ್ನವಂ ಮಾಡುತ್ತ ಅತ್ಯಂತವಾಗಿ ವ್ಯಾಪಿಸಿದರೆ ಸಹಿಸಲಶಕ್ಯವಾಗುವುದೊ; ಮತ್ತು ಯಾವ ರೀತಿ ದೇಹದಲ್ಲಿ ತಗಲಿಕೊಂಡಿರುವ ಶಲ್ಯಖಂಡವು ಎಲ್ಲಿಯಾದರೂ ತಗಲುವುದಱಿಂ ಚೆನ್ನಾಗಿ ಚಲಿಸುವುದಾದರೆ ದುಸ್ಸಹವಾಗುವುದೊ; ಮತ್ತು ಹೃದಯವೆಂಬ ಮರ್ಮಸ್ಥಾನದಲ್ಲಿ ಚೆನ್ನಾಗಿ ಬೇರುಬಿಟ್ಟು ಗಂಟಾಗಿರುವ ವ್ರಣವು ಒಡೆದರೆ ಯಾವ ರೀತಿ ಸಹಿಸಲಶಕ್ಯವೊ: ಆ ರೀತಿ ಪೂರ್ವದಲ್ಲಿ ಸೀತಾವಿರಹದಿಂದುಂಟಾದ ಶೋಕವು ಈಗ ಪುನಃ ನೂತನವಾದಂಥದಾಗಿ ನನ್ನಂ ಅತಿದೀನನನ್ನಾಗಿ ಮಾಡುತ್ತಲಿದೆಯಲ್ಲ! ಆದರೂ ಚಿಂತೆಯಿಲ್ಲ. ನಮಗೆ ಪೂರ್ವಮಿತ್ರವಾಗಿರುವ ಈ ಭೂಪ್ರದೇಶಗಳಂ ನೋಡುತ್ತೇನೆ–ಎಂದು ಚೆನ್ನಾಗಿ ನೋಡಿ, ಶ್ರೀರಾಮನು ಇಂತೆಂದನು.–ಎಲೈ ಈ ಪ್ರದೇಶಗಳಲ್ಲಿ ಭೂತಗಳಿರುವ ರೀತಿಯು ವ್ಯತ್ಯಸ್ತವಾಗಿ ಇದೆ. ಅದೆಂತೆನೆ: ಪೂರ್ವ ಈ ನದಿಗಳ ಮಧ್ಯದಲ್ಲಿ ಎಲ್ಲಿ ಜಲವು ಪ್ರವಹಿಸುತಿದ್ದಿತೊ ಅಲ್ಲಿ ಈಗ ಮರಳಿನ ರಾಶಿಯು ಬೆಳೆದು ಇದೆ. ಮತ್ತು ಎಲ್ಲಿ ವೃಕ್ಷಗಳು ತುಂಬಿಕೊಂಡು ಇದ್ದುವೊ ಈಗ ಅಲ್ಲಿ ವಿರಳಗಳಾಗಿ ಇವೆ. ಬಹುಕಾಲಕ್ಕೆ ಈ ವನವು ಪುನಃ ದೃಷ್ಟವಾದುದಱಿಂದ ಇದು ಮತ್ತೊಂದು ವನವೋ

ಎಂಬದಾಗಿ ತಿಳಿಯುತ್ತೇನೆ. ಆದಾಗ್ಯೂ ಪರ್ವತಗಳಿರುವ ರೀತಿಯು ಅದೇ ವನವು ಇದೆಂಬ ಬುದ್ಧಿಯಂ ದೃಢವಾಗಿ ಮಾಡುತ್ತಲಿದೆ. ಕಟಕಟಾ! ಈ ಪಂಚವಟಿಯಂ ನಾನು ಬಿಟ್ಟಾಗ್ಯೂ ಅದು ನನ್ನಂ ಸ್ನೇಹದಿಂ ಬಲಾತ್ಕರಿಸಿ ಇತ್ತಲೆಳೆಯುತ್ತಲಿದೆ—ಎನುತ ಶೋಕದೊಡಗೂಡಿ—ಎಲೈ ಯಾವ ಪಂಚವಟಿಯಲ್ಲಿ ನಾನು ಮೊದಲು ಆ ಸೀತೆಯೊಡನೆ ಕೂಡಿದವನಾಗಿ ಸ್ವಗೃಹದಲ್ಲಿರುವವನಂತೆ ಆ ದಿವಸಂಗಳ ಕಳೆಯುವವನಾದೆನೊ, ಮತ್ತು ನಾನು ಪೂರ್ವದಲ್ಲಿ ಸೀತಾಸಹಿತನಾಗಿ ಯಾವ ಪಂಚವಟಿಯಲ್ಲಿ ನಡೆದಿರುವ ದೀರ್ಘಂಗಳಾದ ಕಥೆಗಳನ್ನೇ ಪ್ರಸ್ತಾಪಂಗೆಯ್ಯುತಲಿದ್ದೆನೊ, ಅಂಥ ಪಂಚವಟಿಯಂ ಈಗ ರಾಮನು ಅಂಥ ಪ್ರಿಯಳಾದ ಸೀತೆಯಂ ಅರಣ್ಯವನ್ನೈದಿಸಿ ಏಕಾಕಿಯಾಗಿ ನೋಡುವನೊ ನೋಡದೆ ಹೋದಾನೊ, ಇವೆರಡೂ ಸಹಿಸುವುದಕ್ಕೆ ಶಕ್ಯವಲ್ಲ—ಎಂದು ಶ್ರೀರಾಮನು ಚಿಂತಿಸುತ್ತಿರಲು ;

ಅಷ್ಟರೊಳಗೆ ಶಂಬೂಕನು ಅಗಸ್ತ್ಯಾಶ್ರಮದಿಂ ಬಂದು ರಂಗಸ್ಥಲವಂ ಪ್ರವೇಶಂಗೈದು, "ಭೂಪತಿಯು ಸರ್ವೋತ್ಕೃಷ್ಟನಾಗಿರಲಿ!" ಎಂದು ಕೈಮುಗಿದು ಸ್ವಾಮಿಯಂ ಕುರಿತು ವಿಜ್ಞಾಪಿಸಿದನದೆಂತೆನೆ:—"ಎಲೈ ಸ್ವಾಮಿಯೇ, ಪೂಜ್ಯನಾದ ಅಗಸ್ತ್ಯಮುನಿಯು ನನ್ನ ಮುಖದಿಂ ತಾವು ಪುನಃ ದಂಡಕಾರಣ್ಯಕ್ಕೆ ಬಂದಿರುವುದಂ ಕೇಳಿ ತಮ್ಮಂ ಕುರಿತು ಆಜ್ಞಾಪಿಸಿದನು. ಅದೇನೆಂದರೆ:—ಎಲೈ ರಾಮನೇ, ನನ್ನ ಪತ್ನಿ ಲೋಪಾಮುದ್ರೆಯು ನೀನು ಈ ವನಕ್ಕೆ ಬಂದಿರುವುದಂ ಕೇಳಿ ನಕ್ಷತ್ರಲೋಕದಿಂ ಇಳಿದು ಬಂದು ವಾತ್ಸಲ್ಯಯುಕ್ತಳಾಗಿ ನಿನ್ನಂ ನೋಡಬೇಕೆಂದು ಎದುರು ನೋಡುತ್ತಲಿದ್ದಾಳೆ. ಅದೇರೀತಿ ಮಹಾಮುನಿಗಳೆಲ್ಲರೂ ನಿನ್ನ ದರ್ಶನವನ್ನಪೇಕ್ಷಿಸುತ್ತಲಿದ್ದಾರೆ. ಅದುಕಾರಣ ನೀನು ನಮ್ಮ ಆಶ್ರಮಕ್ಕೆ ಬರುವವನಾಗು. ಇಲ್ಲಿ ನಮ್ಮೆಲ್ಲರಂ ಸಂತೋಷಪಡಿಸಿ ಬಳಿಕ ವೇಗಯುಕ್ತವಾದ ಪುಷ್ಪಕದಿಂ ಸ್ವದೇಶವನ್ನೈದಿ ಅಶ್ವಮೇಧದಲ್ಲಿ ಸನ್ನದ್ಧನಾಗು, ಎಂದು ಅಗಸ್ತ್ಯಮುನಿಯು ಆಜ್ಞಾಪಿಸಿದನು" ಎಂದು ಶಂಬೂಕನು ಬಿನ್ನವಿಸಲು ; ಅದಂ ಕೇಳಿ ಶ್ರೀರಾಮನು—"ಪೂಜ್ಯನಾದ ಅಗಸ್ತ್ಯಮುನಿಯು ಆಜ್ಞಾಪಿಸಿದಂತೆ ಆಗಲಿ" ಎಂದು ಪೇಳಲು ; ಶಂಬೂಕನು—"ಎಲೈ ಸ್ವಾಮಿಯೇ, ಇತ್ತಲಿತ್ತಲು ದಯೆಮಾಡಬೇಕು" ಎಂದು ಅಗಸ್ತ್ಯಾಶ್ರಮದ ಮಾರ್ಗವಂ ತೋರಿಸಿದನು.

ಶ್ರೀರಾಮನು ಪುಷ್ಪಕವಂ ನಡೆಯಿಸುವನಾಗಿ, "ಎಲೆ ಪೂಜ್ಯಳಾದ ಪಂಚವಟಿಯೇ, ಗುರುಜನರ ಆಜ್ಞೆಯು ಉಪೇಕ್ಷಿಸಲು ಶಕ್ಯವಲ್ಲದುದರಿಂ ರಾಮನು ನಿನ್ನಂ ಅತಿಕ್ರಮಿಸಿ ಅಗಸ್ತ್ಯಾಶ್ರಮಕ್ಕೆ ಪೋಗುವುದರಿಂ ನೀನು ಕ್ಷಣಮಾತ್ರ ಕ್ಷಮಿಸಬೇಕು" ಎಂದು ಪಂಚವಟಿಯಂ ಕುರಿತು ಪೇಳಿದವನಾಗಿ, ಅಲ್ಲಿಂದ ಪುಷ್ಪಕವಂ ನಡೆಯಿಸುವನಾಗಲು, ಶಂಬೂಕನು—"ಎಲೈ ಸ್ವಾಮಿಯೇ, ಇತ್ತನೋಡಿ. ಗುರುಗುಂಜಿಬಳ್ಳಿಗಳು ಸುತ್ತಲೂ ಬೆಳೆದುಕೊಂಡು ಪೊದೆಯಾಗಿ ಇರುವುದಾದಕಾರಣ ಆ ಪೊದೆಗಳ ಮಧ್ಯದಲ್ಲಿ ಗೂಗೆಗಳು ಗುಂಪಾಗಿ ಸೇರಿಕೊಂಡು ಘೂತ್ಕಾರಶಬ್ದಗಳಂ ಮಾಡುತ್ತಲಿವೆ. ಮತ್ತು ಆ ಗುರುಗುಂಜಿಯ ಪೊದೆಗಳ ಮಧ್ಯದಲ್ಲಿ ಹಿಂಡಾಗಿ ಸ್ತಂಭಗಳಂತೆ ಅತ್ಯುನ್ನತಂಗಳಾಗಿ ಬೆಳೆದಿರುವ ಬಿದುರುಗಳು ವಾಯುವೇಗದಿಂ ಕಂಪಿಸಲ್ಪಡುವುವಾದಕಾರಣ ಪರಸ್ಪರ

ಕೂಡಿ ಸಂಪರ್ಷಣವಂ ಮಾಡುತ್ತ ಮಹಾಘೋಷವಂ ಮಾಡುತ್ತಲಿವೆ. ಆ ಗೂಗೆಗಳ ಘೂತ್ಕಾರ ಶಬ್ದಂಗಳು ಬಿದುರುಗಳ ಮಹಾಘೋಷಂಗಳು ಸಹ ಈ ಉಭಯವು ಮಿಶ್ರವಾದುದರಿಂದ ಭಯದಿಂ ಮೌನವಂ ತಾಳಿರುವ ವಾಯಸ ಸಮೂಹಗಳುಳ್ಳ ಈ ಪರ್ವತವು ಕ್ರೌಂಚಾವತವೆನಿಸಿಕೊಂಬುದು. ಈ ಪರ್ವತದಲ್ಲಿ ಸಂಚರಿಸುತ್ತಲಿರುವ ನವಿಲುಗಳ ಧ್ವನಿಗಳಿಂ ಭಯಪಡುವುವಾದ ಕಾರಣ ಸರ್ಪಗಳು ಪುರಾತನಂಗಳಾದ ಶ್ರೀಗಂಧವೃಕ್ಷಗಲ್ಲಿರುವ ಮಹಾರಂಧ್ರಗಳಲ್ಲಿ ಸೇರಿಕೊಂಡು ಹೊರಳುತ್ತಲಿವೆ. ಮತ್ತು ಎಲೈ ಸ್ವಾಮಿಯೇ, ಈ ದಕ್ಷಿಣದಲ್ಲಿರುವ ಪರ್ವತಗಳು ಗುಹೆಗಳಲ್ಲಿ ಶಬ್ದವಂ ಮಾಡುತ್ತಲಿರುವ ಗೋದಾವರೀ ಜಲವುಳ್ಳವಾಗಿ, ಮೇಘಂಗಳಿಂ ಆಶ್ರಯಿಸಲ್ಪಟ್ಟಿರುವ ಅಗ್ರಗಳುಳ್ಳವಾದಕಾರಣ ಕಪ್ಪಾಗಿರುವ ಶಿಖರಗಳುಳ್ಳವಾಗಿಯು ಇವೆ. ಮತ್ತು ಅಗಾಧವಾದ ಜಲವುಳ್ಳ ಪುಣ್ಯಕರಂಗಳಾದ ಈ ನದೀಸಂಗಮಗಳು ಪರಸ್ಪರ ಜಲಾಭಿಘಾತವುಂಟಾಗೋಣದರಿಂದ ಇಕ್ಕಟ್ಟಾಗಿ ಚಲಿಸುತಲಿರುವ ತೆರೆಗಳ ಕಲಕಲಶಬ್ದಂಗಳಿಂ ಮಹತ್ತುಗಳಾಗಿ ಇವೆ. ಸ್ವಾಮಿಯು ನೋಡಬೇಕು" ಎಂದು ಶಂಬೂಕನು ಮಾರ್ಗವಂ ತೋಱಿಸುತ್ತ ಶ್ರೀರಾಮನೊಡಗೂಡಿ ಅಗಸ್ತ್ಯಾಶ್ರಮವಂ ಪ್ರವೇಶಿಸಿದನು.

ದ್ವಿತೀಯಾಂಕತಾತ್ಪರ್ಯಂ ಸಮಾಪ್ತಂ.

---

## ॥ ತೃತೀಯಾಂಕಂ ॥

ಈರೀತಿ ಶಂಬೂಕನು ಅಗಸ್ತ್ಯಾಶ್ರಮದಿಂದ ಪುನಃ ಸ್ವಾಮಿಯ ಸನ್ನಿಧಿಯನ್ನೈದಿ ಅಗಸ್ತ್ಯಮುನಿಯ ಆಜ್ಞಾವಚನವಂ ಬಿನ್ನವಿಸಿ ಸ್ವಾಮಿಗೆ ಅಗಸ್ತ್ಯಾಶ್ರಮದ ಮಾರ್ಗವಂ ತೋಱುಸುತ್ತ ನದೀಸಂಗಮವಂ ವರ್ಣಿಸಿದುದಱಿಂ ಮೂಱನೆಯ ದಿನದಲ್ಲಿ ಪುನಃ ವಿದ್ವಾಂಸರು ಮೊದಲಾದ ಸಾಮಾಜಿಕರು ಸಭೆಯಲ್ಲಿ ಕುಳಿತು ನಾಟಕಾಭಿನಯವಂ ನೋಡಲೋಸುಗ ಕುತೂಹಲಯುಕ್ತರಾಗಲು ; ಸೂತ್ರಧಾರ ಮೊದಲಾದ ಗಾಯಕರು ರಂಗಸ್ಥಾನದಲ್ಲಿ ಗಾನಪೂರ್ವಕವಾಗಿ ಸಭಾಪ್ರಾರ್ಥನೆ ಮೊದಲಾದ ಪೂರ್ವರಂಗವನ್ನಾಚರಿಸಿದವರಾಗಲು.

ಆಗ ನೇಪಥ್ಯವೆಂಬ ಸ್ಥಾನದಿಂ ನದೀವೇಷವಂ ಧರಿಸಿರುವ ಸ್ತ್ರೀಯರುಗಳು ಇಬ್ಬರು ರಂಗಸ್ಥಾನವಂ ಪ್ರವೇಶಂಗೈದು, ಅವರೊಳಗೊಬ್ಬಳು ಮತ್ತೊಬ್ಬಳಂ ಕುಱಿತು ಪ್ರಶ್ನೆಗೈವಳದೆಂತೆನೆ :—ಎಲೌ ಸಖಿಯಾದ ಮುರುಳೆಯೆ, ಏನುಕಾರಣ ನೀನು ತ್ವರೆಯೊಡಗೂಡಿದವಳಂತೆ ಇರುವೆ ?'' ಎಂದು ಪ್ರಶ್ನೆಗೈಯಲು ; ಮುರುಳೆಯೆಂಬ ನದಿಯು ಇಂತೆಂದಳು :—'' ಎಲೌ ಪೂಜ್ಯಳಾದ ತಮಸೆಯೆ, ಕೇಳು. ಪೂಜ್ಯನಾದ ಅಗಸ್ತ್ಯಮುನಿಗೆ ಪತ್ನಿಯಾದ ಲೋಪಾಮುದ್ರೆಯು ನದಿಗಳಲ್ಲಿ ಶ್ರೇಷ್ಠಳಾದ ಗೋದಾವರಿಯಂ ಕುಱಿತು ಒಂದು ಅರ್ಥವಂ ಪೇಳುವುದಕ್ಕೋಸ್ಕರ ನನ್ನಂ ಕಳುಹಿಸಿದವಳಾದಕಾರಣ ನಾನು ತ್ವರೆಯಿಂ ಪೋಗುವೆನು. ಆ ಲೋಪಾಮುದ್ರಾದೇವಿಯು ಗೋದಾವರಿಯಂ ಕುಱಿತು ಪೇಳಿದ ಅರ್ಥವೇನೆಂದರೆ : ಎಲೌ ಗೋದಾವರಿಯೇ, ಸೀತಾಪರಿತ್ಯಾಗವಂ ಮಾಡಿದುದು ಮೊದಲುಗೊಂಡು ಶ್ರೀರಾಮನು ಯಾವ ರೀತಿ ವಿರಹದುಃಖವನ್ನನುಭವಿಸುವನೊ ಆರೀತಿಯಂ ನೀನು ತಿಳಿಯುವೆಯಲ್ಲ. ಶ್ರೀರಾಮನು ಮಹಾಗಾಂಭೀರ್ಯಶಾಲಿಯಾದುದಱಿಂ ಸೀತಾವಿಷಯಕವಾದ ಆ ಶೋಕವು ಹೊಱಕ್ಕೆ ಪ್ರಕಟವಾಗದೆ ಒಳಗೆ ಮಹತ್ತಾದ ವ್ಯಥೆಯನ್ನುಂಟುಮಾಡುವುದಾದಕಾರಣ ಆ ಶ್ರೀರಾಮನ ಶೋಕರಸವು ಪುಟಪಾಕದಂತೆ ಇರುವುದು. ಆರೀತಿ ವಿಶೇಷದಿಂ ಇಷ್ಟಳಾಗಿರುವ ಸೀತೆಗೆ ಮಹಾಕಷ್ಟವು ಪ್ರಾಪ್ತವಾದುದಱಿಂ ಜನಿಸಿರುವ ಆ ವಿರಹಶೋಕವು ಅತಿಪ್ರಬಲವಾಗಿ ದೀರ್ಘವಾಗಿ ಸಂತತವಾಗಿಯೂ ಇರುವುದಾದಕಾರಣ ರಾಮಭದ್ರನು ಅತಿಕೃಶನಾಗಿ ಇದ್ದಾನೆ. ಈಗ ಕಾರಣಾಂತರದಿಂ ಪುನಃ ನಮ್ಮ ಆಶ್ರಮಕ್ಕೆ ಬಂದವನಾದುದಱಿಂ ಆ ರಾಮಭದ್ರನಂ ನೋಡಿ ನನ್ನ ಹೃದಯವು ಕಂಪಿಸುತ್ತಲಿದೆ. ಈಗ ರಾಮಭದ್ರನು ನಮ್ಮ ಆಶ್ರಮದಿಂ ಪುನಃ ತಿರಿಗಿ ಬಂದವನಾಗಿ ನಿಯಮದಿಂ ಪಂಚವಟೀವನದಲ್ಲಿ ಪೂರ್ವವು ಸೀತೆಯೊಡಗೂಡಿ ವಾಸವಂ ಮಾಡುವಾಗ ತಮ್ಮ ಸ್ವೇಚ್ಛಾವಿಹಾರಂಗಳಿಗೆ ಸಾಕ್ಷೀಭೂತಂಗಳಾದ ಪ್ರದೇಶಂಗಳಂ ಮುಂದೆ ನೋಡುವವನಾಗಿ ಇದ್ದಾನೆ. ಅಂಥ ಪ್ರದೇಶಂಗಳಂ ನೋಡುವ ಕಾಲಗಳಲ್ಲಿ ಶ್ರೀರಾಮನು ಸ್ವಭಾವದಿಂ ಧೈರ್ಯಯುಕ್ತನಾದರೂ ಇಂಥ ವಿರಹಾವಸ್ಥೆಯಲ್ಲಿ ಅತಿವಿಶಾಲ

ವಾಗಿ ದೀರ್ಘವಾಗಿಯೂ ಇರುವ ಶೋಕವು ಮಹಾವೇಗದಿಂ ಚಿತ್ತವಂ ವ್ಯಾಕುಲವಾಗಿ ಮಾಡುವುದಾದಕಾರಣ ಅಡಿಗಡಿಗೂ ಶ್ರೀರಾಮನಿಗೆ ಮಹಾಪ್ರಮಾದಗಳುಳ್ಳ ಅನೇಕ ವಿರಹಾವಸ್ಥೆಗಳು ಊಹಿಸತಕ್ಕುವಾಗಿ ಇರುವುವಾದುದಱಿಂದ, ಎಲೌ ಪೂಜ್ಯಳಾದ ಗೋದಾವರಿಯೇ, ಅಲ್ಲಿ ನೀನು ಶ್ರೀರಾಮನ ವಿಷಯದಲ್ಲಿ ಸಾವಧಾನಚಿತ್ತಳಾಗಿರಬೇಕು. ಮತ್ತು ಎಲೌ ಗೋದಾವರಿಯೇ, ಜಲಬಿಂದುಗಳ ತುಂತುರುಗಳಿಂ ಶೀತಳಂಗಳಾಗಿ ಕಮಲಕೇಸರಗಳಲ್ಲಿರುವ ಪರಿಮಳಗಳಂ ಗ್ರಹಿಸಿಕೊಂಡು ಬೀಸುತ್ತಲಿರುವ ಇಚ್ಛಾನುಗುಣ ವಾಗಿ ನಿನ್ನಿಂದ ಪ್ರೇರಿಸಲ್ಪಟ್ಟ ತರಂಗವಾಯುಗಳಿಂದ ಆಗಾಗ ಮೂರ್ಛೆಯುಂಟಾದಲ್ಲಿ ರಾಮಭದ್ರನ ಜೀವವಂ ಸಮಾಧಾನಪಡಿಸು–ಎಂಬ ಅರ್ಥವಂ ಗೋದಾವರಿಗೆ ತಿಳುಹಿಸು ವುದಕ್ಕೋಸುಗ ಲೋಪಾಮುದ್ರೆಯು ನನ್ನಂ ಕಳುಹಿಸಿದಕಾರಣ ನಾನು ತ್ವರೆಯಿಂ ಪೋಗುವೆನು'' ಎಂದು ಪೇಳಿದಳು. ಅದಂ ಕೇಳಿ ತಮಸೆಯೆಂಬ ನದಿಯು ಇಂತೆಂ ದಳು:–'' ಎಲೌ ಮುರುಳೆಯೇ, ಸ್ನೇಹವಿರುವ ಕಡೆಯಲ್ಲಿ ದಾಕ್ಷಿಣ್ಯವಿರುವುದು ಉಚಿ ತವೇ ಸರಿ. ಮತ್ತೇನೆಂದರೆ: ಈಗ ಉಂಟಾಗುವ ವಿರಹಾವಸ್ಥೆಗಳಲ್ಲಿ ರಾಮಭದ್ರನು ಜೀವಿಸುವುದಕ್ಕೆ ಸಂಜೀವನೌಷಧಿಯಂತೆ ಒಂದು ಉಪಾಯವು ಸಮೀಪದಲ್ಲಿ ಇದೆ.'' ಎಂದು ಪೇಳಿದಳು. ಅದಂ ಕೇಳಿ ಮುರುಳೆಯು ''ಅದು ಹೇಗೆ?'' ಎಂದು ಪ್ರಶ್ನೆಗೈ ಯಲು; ''ಎಲೌ ಮುರುಳೆಯೇ, ಅದೆಲ್ಲವಂ ಕೇಳು. ಶ್ರೀರಾಮನ ಆಜ್ಞೆಯಿಂ ಲಕ್ಷ್ಮಣಸ್ವಾಮಿಯು ವಾಲ್ಮೀಕಿಮಹಾಮುನಿಯ ತಪೋವನದ ಸಮೀಪದಲ್ಲಿ ಸೀತೆಯಂ ಪರಿತ್ಯಾಗಂಗೈದು ಅಲ್ಲಿಂದ ತಿರಿಗಿ ಬಂದವನಾಗಲು, ಆಬಳಿಕ ಸೀತಾದೇವಿಯು, ಪ್ರಸವ ವೇದನೆಯು ಪ್ರಾಪ್ತವಾಗಲು, ಆ ವೇದನೆಯಂ ಸಹಿಸಲಾಱದೆ ಅತಿದುಃಖವೇಗದಿಂ ತನ್ನ ದೇಹವಂ ಗಂಗಾಪ್ರವಾಹದಲ್ಲಿ ಬಿಟ್ಟಳು. ಆಗಲೇ ಆ ಗಂಗಾಪ್ರವಾಹದಲ್ಲಿ ಎರಡು ಶಿಶುಗಳಂ ಪೆತ್ತಳು. ಆಬಳಿಕ ಪೂಜ್ಯಳಾದ ಗಂಗಾದೇವಿಯು ಭೂಮಿದೇವಿಯು ಸಹ ಇವರಿಬ್ಬರು ಆ ಶಿಶುಗಳಂ ತಾವು ಎತ್ತಿಕೊಂಡು ಆ ಸೀತೆಯಂ ಸಂಗಡ ಕರ ಕೊಂಡು ಪಾತಾಳಲೋಕವನ್ನೈದಿಸಿದರು. ಅನಂತರದಲ್ಲಿ ಆ ಶಿಶುಗಳಿಬ್ಬರು ಸ್ತನ್ಯಪಾ ನವಂ ಬಿಟ್ಟವರಾಗಲು, ಗಂಗಾದೇವಿಯು ತಾನೇ ಆ ಶಿಶುಗಳಂ ಕರಕೊಂಡು ಪೋಗಿ ಮಹರ್ಷಿಯಾದ ವಾಲ್ಮೀಕರಿಗೆ ಸಮರ್ಪಿಸಿದಳು'' ಎಂಬ ತಮಸೆಯ ವಚನವಂ ಕೇಳಿ, ಮುರುಳೆಯು ಆಶ್ಚರ್ಯಪಡುತ್ತ ಇಂತೆಂದಳು:–'' ಎಲೌ ತಮಸೆಯೆ, ಇಂಥ ಮಹಾತ್ಮರಿಗೆ ದುರ್ದಶೆ ಬಂದಾಗ್ಯೂ ಅದು ಆಶ್ಚರ್ಯಕರವಾಗುತ್ತಲಿದೆ. ಅದು ಹೇಗೆಂದರೆ:-ಅಂಥ ಲೋಕಪಾವನೆಯಾದ ಗಂಗಾದೇವಿಯು ಭೂದೇವಿಸಹ ಈ ಸೀತೆಗೆ ಬಂದ ದುರ್ದಶೆಯಲ್ಲಿ ತಾವು ಪರಿಜನವಾಗಿ ಹೆಱಿಗೆ ಮೊದಲಾದ ಸೇವೆಯಂ ಮಾಡಿದವರಲ್ಲವೆ?'' ಎಂಬದಾಗಿ ಮುರುಳೆಯು ಪೇಳಲು; ತಮಸೆಯು–'' ಎಲೌ, ಕೇಳು. ಈಗ ಪೂಜ್ಯಳಾದ ಗಂಗೆಯು ಅಯೋಧ್ಯಾಪುರದ ಸಮೀಪದಲ್ಲಿ ಪ್ರವಹಿಸುವ ಸರಯೂನದಿಯ ಮುಖದಿಂ ಈ ಶಂಬೂ ಕನ ಸಂಹಾರನಿಮಿತ್ತವಾಗಿ ಪುನಃ ಶ್ರೀರಾಮನಿಗೆ ಜನಸ್ಥಾನಪ್ರವೇಶವು ಸಂಭವಿಸು ವುದಂ ಕೇಳಿ ಯಾವರೀತಿ ಲೋಪಾಮುದ್ರೆಯು ವಾತ್ಸಲ್ಯದಿಂ ಶ್ರೀರಾಮನ ವಿಷಯ ವಾಗಿ ಯಾವ ಪ್ರಮಾದವಂ ಶಂಕಿಸಿದಳೊ ತಾನು ಆ ಪ್ರಮಾದವನ್ನೇ ಶಂಕಿಸಿ, ಒಂದು

ಅನಿಷ್ಟಶಾಂತಿಗೋಸುಗ ದೇವತಾಪೂಜೆಯು ಮಾಡತಕ್ಕುದೆಂಬ ವ್ಯಾಜವಂ ಕಲ್ಪಿಸಿ ಆ ವ್ಯಾಜದಿಂದ ಸೀತಾಸಮೇತಳಾದ ನನ್ನಂ ಗೋದಾವರೀತೀರವಂ ಕುಱಿತು ಕಳುಹಿಸಿದಳು '' ಎಂದು ಪೇಳಲು; ಅದಂ ಕೇಳಿ ಮುರುಳೆಯು–'' ಎಲೌ ತಮಸೆಯೇ, ಪೂಜ್ಯಳಾದ ಗಂಗೆಯು ಚೆನ್ನಾಗಿ ಯೋಚಿಸಿದಳು. ಅದೆಂತೆನೆ–ರಾಜನೀತಿಯಲ್ಲಿ ಉದ್ಯುಕ್ತನಾಗಿರುವ ಶ್ರೀರಾಮನು ಲೋಕಗಳಿಗೆ ಕ್ಷೇಮಕರಗಳಾದ ಆಯಾಯ ಕಾರ್ಯಗಳಿಂ ವ್ಯಾಪಾರಯುಕ್ತನಾಗಿರುವನಾದಕಾರಣ ಈ ಶ್ರೀರಾಮನಿಗೆ ಚಿತ್ತವಿಕ್ಷೇಪಗಳು ನಿತ್ಯಗಳಾಗಿರುವುವಲ್ಲ. ಹೀಗಿರುವಲ್ಲಿ ಏಕಾಗ್ರಚಿತ್ತನಾಗಿ ಶೋಕಮಾತ್ರದೊಡನೆ ಕೂಡಿಕೊಂಡಿರುವ ಶ್ರೀರಾಮನಿಗೆ ಶಂಬೂಕನ ನಿಮಿತ್ತವಾಗಿ ಪುನಃ ದಂಡಕಾರಣ್ಯ ಪ್ರವೇಶವುಂಟಾದಡೆ ಮಹಾಪ್ರಮಾದವನ್ನುಂಟುಮಾಡುವುದೆಂದು ಚಿಂತಿಸಿ ಗಂಗೆಯು ಶ್ರೀರಾಮನ ಕ್ಷೇಮಾರ್ಥವಾಗಿ ಸೀತಾಸಹಿತಳಾದ ನಿನ್ನಂ ಗೋದಾವರೀತೀರಕ್ಕೆ ಕಳುಹಿಸಿದಳಲ್ಲವೆ? ಆದಾಗ್ಯೂ ಸೀತೆಯು ಇಂಥ ದುರ್ದಶೆಯಲ್ಲಿ ರಾಮನಂ ಎಂತು ಸಮಾಧಾನಪಡಿಸಿಯಾಳು!'' ಎಂಬ ಮುರುಳೆಯ ವಚನವಂ ಕೇಳಿ, ತಮಸೆಯು ಇಂತೆಂದಳು:–'' ಎಲೌ ಮುರುಳೆಯೇ, ಪೂಜ್ಯಳಾದ ಗಂಗೆಯು ಒಂದು ವ್ಯಾಜವಂ ಕಲ್ಪಿಸಿ ಸೀತೆಯಂ ಕುಱಿತು ಇಂತೆಂದಳು:–ಎಲೌ ಮಗಳೇ, ಯಜ್ಞಭೂಮಿಯಲ್ಲಿ ಜನಿಸಿದವಳೇ, ಎಲೌ ಸೀತೆಯೇ, ಈಗ ಆಯುಷ್ಮಂತರಾದ ಕುಶಲವರಿಗೆ ಜನ್ಮಸಂವತ್ಸರಂಗಳು ಹನ್ನೆರಡು ತುಂಬುವುವಾದಕಾರಣ ಹನ್ನೆರಡನೆಯ ಸಂವತ್ಸರದ ಸಂಖ್ಯಾರ್ಥವಾದ ಮಂಗಳಗ್ರಂಥಿಯು ಈ ದಿವಸವು ಜನ್ಮದಿವಸವಾದುದಱಿಂದ ಬಳೆಯತಕ್ಕುದಾಗಿ ಇದೆಯಾದಕಾರಣ ನಿನಗೆ ಪೂರ್ವಿಕನಾಗಿ ಮಾವನಾಗಿಯು ಈ ವರೆಗೂ ವೃದ್ಧಿಯನ್ನೆಯ್ದಿರುವ ಮನುಚಕ್ರವರ್ತಿ ಸಂಬಂಧಿಯಾದ ರಾಜಶ್ರೇಷ್ಠವಂಶಕ್ಕೆ ಮೂಲಪುರುಷನಾಗಿ ದೇವೋತ್ತಮನಾಗಿಯೂ ಇರುವ ಪಾಪಪರಿಹಾರಕನಾದ ಸೂರ್ಯನಂ ನಿನ್ನ ಹಸ್ತದಿಂ ಕೊಯ್ಯಲ್ಪಟ್ಟ ಪುಷ್ಪಗಳಿಂ ಪೂಜಿಸಿ ಸೇವಿಸುವಳಾಗು. ಈಗ ಸೂರ್ಯನ ಸೇವಾರ್ಥವಾಗಿ ಈ ಪಾತಾಳಲೋಕದಿಂದ ಭೂಲೋಕವನ್ನೆಯ್ದಿರುವ ನಿನ್ನಂ ನಮ್ಮ ಪ್ರಭಾವದಿಂದ ದೇವತೆಗಳೂ ಕೂಡ ನೋಡಲಾಱರು. ಹೀಗಿರುವಲ್ಲಿ ಮನುಷ್ಯರು ನೋಡರು ಎಂದು ಹೇಳತಕ್ಕುದೇನಿದೆ?–ಎಂಬದಾಗಿ ಗಂಗಾದೇವಿಯು ಸೀತೆಗೆ ಆಜ್ಞಾಪಿಸಿ, ಆ ಬಳಿಕ ನನ್ನಂ ಕುಱಿತು ಆಜ್ಞಾಪಿಸಿದಳು. ಅದೆಂತೆನೆ- ಎಲೌ ತಮಸೆಯೇ, ನನಗೆ ಸೊಸೆಯಾಗಿ ಮಗಳಾಗಿಯೂ ಇರುವ ಈ ಸೀತೆಯು ನಿನ್ನಲ್ಲಿ ಅತಿಪ್ರೇಮವುಳ್ಳವಳಾದಕಾರಣ ಸೂರ್ಯಪ್ರಾರ್ಥನಾನಿಮಿತ್ತವಾಗಿ ಈ ಸೀತೆಗೆ ನೀನೇ ಸಹಾಯವಾಗಿ ಭೂಲೋಕವನ್ನೆಯ್ದುವಳಾಗು ಎಂದು, ನಾನು ಗಂಗೆಯಿಂ ಆಜ್ಞಾಪಿಸಲ್ಪಟ್ಟವಳಾದೆ. ಆದುದಱಿಂದ ಆ ಕಾರ್ಯವನನುಸರಿಸಿಕೊಂಡು ಇದ್ದೇನೆ '' ಎಂಬ ತಮಸೆಯ ಉತ್ತರವಂ ಕೇಳಿ, ಮುರುಳೆಯು ಇಂತೆಂದಳು:–'' ಎಲೌ ತಮಸೆಯೆ, ನಾನು ಈ ವೃತ್ತಾಂತವನ್ನು ಪೂಜ್ಯಳಾದ ಲೋಪಾಮುದ್ರೆಗೆ ತಿಳುಹಿಸುವಳಾಗುತ್ತೇನೆ. ರಾಮಭದ್ರನೂ ಕೂಡ ಅಗಸ್ತ್ಯಾಶ್ರಮದಿಂ ತಿರಿಗಿ ಬಂದನೆನುತಲೆ ಊಹಿಸುತ್ತೇನೆ '' ಎಂದು ಮುರುಳೆಯು ಪೇಳಲು; ತಮಸೆಯು ಮುರುಳೆಯಂ ಕುಱಿತು–'' ಎಲೌ ಸಖಿಯೇ, ರಾಮಭದ್ರನು ಈ ಜನಸ್ಥಾನಕ್ಕೆ ಬರುವವನಾದುದಱಿಂದಲೇ ಈ ಸೀತೆಯು ಗೋದಾವರಿಯ ಮಡುವಿನಿಂದ ಹೊಱಟವ

ಳಾಗಿ ವಿರಹವೇದನೆಯಿಂ ಅತಿಶುಭ್ರವಾಗಿ ದುರ್ಬಲಗಳಾಗಿಯು ಇರುವ ಕಪೋಲಸ್ಥಳಗಳಿಂ ಸುಂದರವಾಗಿ ಚಲಿಸುತ್ತಲಿರುವ ಕೇಶಸಮೂಹವುಳ್ಳುದಾಗಿಯೂ ಇರುವ ಮುಖವಂ ಧರಿಸುತಲಿರುವಳಾದಕಾರಣ ಇದು ಶೋಕರಸದ ಮೂರ್ತಿಯೋ ಅಥವಾ ಅಱುವಂ ತಾಳಿರುವ ವಿರಹವ್ಯಥೆಯೋ ಎಂಬ ಹಾಗೆ ತೋಱುವಳಾಗಿ ಈ ವನವನ್ನೈದುತ್ತಾಳೆ'' ಎಂಬ ತಮಸೆಯ ವಚನವಂ ಕೇಳಿ, ಮುರುಳೆಯು ಸೀತೆಯಂ ನೋಡಿ, ಇವಳೇ ಆಸೀತೆಯು ಎಂದು ತಿಳಿದು, '' ಎಲೌ ತಮಸೆಯೇ, ವೃಕ್ಷದ ಅಗ್ರಪ್ರದೇಶದಿಂ ಕೊಯ್ಯಲ್ಪಟ್ಟ ಚಿಗುರಿನಂತೆ ಮನೋಹರವಾಗಿ, ವಿರಹತಾಪದಿಂ ಅತಿಶುಭ್ರವರ್ಣವಾಗಿ, ಕೃಶವಾಗಿಯೂ ಇರುವ ಈ ಸೀತೆಯ ಶರೀರವಂ ಪುಷ್ಪದಂತೆ ಕೋಮಲವಾಗಿರುವ ಹೃದಯವಂ ಶೋಷಿಸುವುದಾಗಿ ಭಯಂಕರವಾಗಿ ದೀರ್ಘವಾಗಿಯೂ ಇರುವ ಶೋಕವು ಶರತ್ಕಾಲದಲ್ಲಿ ಪುಟ್ಟುವ ಶಖೆಯು ಕೇತಕೀಪುಷ್ಪದ ಗರ್ಭಪ್ರದೇಶದಲ್ಲಿರುವ ಗಱಿಯಂ ಬಾಡಿಸುವಂತೆ ಬಾಡಿಸುತ್ತಲಿವೆ ನೋಡು'' ಎಂದು ನುಡಿದಳು.

ಈರೀತಿ ತಮಸಾಮುರುಳೆಗಳೆಂಬ ನದಿಗಳಿರ್ವರೂ ತಮ್ಮ ಪ್ರಶ್ನೋತ್ತರವಚನಗಳಿಂದ ಪೂರ್ವೋತ್ತರ ಕಥಾಸಂಗತಿಗಳಂ ಶ್ರೀರಾಮಪ್ರವೇಶವಂ ಸೀತಾಪ್ರವೇಶವಂ ಸಹ ಸೂಚನಂಗೈದು ರಂಗಸ್ಥಾನದಿಂ ತಿರಿಗಿ ಹೊಱಟುಪೋಗಲು.

ಆಬಳಿಕ ನೇಪಥ್ಯವೆಂಬ ಸ್ಥಾನದಲ್ಲಿ ಒಬ್ಬಳು—'' ಎಲೆ ಮಗುವೆ! ಎಲೆ ಮಗುವೆ! '' ಎಂದು ಘೋಷವಂ ಮಾಡಲು ;

ಆಬಳಿಕ ಸೂರ್ಯನ ಪೂಜಾನಿಮಿತ್ತವಾಗಿ ಪುಷ್ಪಂಗಳಂ ಕೊಯ್ಯುವುದಱಲ್ಲಿ ಉದ್ಯುಕ್ತವಾದ ಹಸ್ತವುಳ್ಳ ಸೀತೆಯು ಶೋಕದೊಡನೆಯು ಕುತೂಹಲದೊಡನೆಯು ಕೂಡಿದವಳಾಗಿ, ಆ ನೇಪಥ್ಯದಲ್ಲಿ ಪುಟ್ಟಿದ ಶಬ್ದವಂ ಕೇಳುತ, ರಂಗಸ್ಥಾನವಂ ಪ್ರವೇಶಂಗೈದು, '' ಎಲೌ, ಇದೇನು ಆಶ್ಚರ್ಯವು! ಪ್ರಿಯಸಖಿಯಾದ ವಾಸಂತಿಯು ನುಡಿಯುವಳೆಂದು ನಾನು ತಿಳಿಯುತ್ತೇನೆ'' ಎಂದು ಪೇಳಲು ;

ಆಗ ಪುನಃ ನೇಪಥ್ಯದಲ್ಲಿ ಒಬ್ಬಳು ಇಂತೆಂದಳು :—'' ಪೂರ್ವದಲ್ಲಿ ಸೀತಾದೇವಿಯು ತನ್ನ ಹಸ್ತದಲ್ಲಿ ಪಿಡಿಯಲ್ಪಟ್ಟ ಸಲ್ಲಕಿಯೆಂಬ ವೃಕ್ಷದ ತಳಿರುಗಳಿಂದ ಮುಂದುಗಡೆಯಲ್ಲಿ ಚಲಿಸುತ್ತಲಿರುವ ಯಾವ ಬಾಲ ಗಜವಂ ಪೋಷಿಸಿದಳೋ,'' ಎನಲು ;

ಅದಂ ಕೇಳಿ ಸೀತೆಯು '' ಆ ಬಾಲಗಜಕ್ಕೆ ಏನು ''—ಎನಲು ;

ಆಗ ಪುನಃ ನೇಪಥ್ಯದಲ್ಲಿ ಒಬ್ಬಳು ಇಂತೆಂದಳು :—'' ಆ ಬಾಲಗಜವು ಸ್ತ್ರೀಗಜದೊಡಗೂಡಿ ಜಲಮಧ್ಯದಲ್ಲಿ ವಿಹರಿಸುವುದಾಗಿ ಮತ್ತೊಂದು ಮಹತ್ತಾದ ಗಜದಿಂ ಕೊಬ್ಬಿನಿಂದ ಮೇಲೆ ಬಿದ್ದು ತಿರಸ್ಕರಿಸಲ್ಪಟ್ಟಿತು'' ಎನಲು ;

ಸೀತೆಯು ಕೇಳಿ ತ್ವರೆಯೊಡಗೂಡಿ ಮುಂದಕ್ಕೆ ಕೆಲವು ಅಡಿಗಳನಿಟ್ಟು, '' ಎಲೈ, ಪೂಜ್ಯರಿಗೆ ಪುತ್ರನಾದ ಕಾಂತನೇ, ನನ್ನ ಪುತ್ರನಾದ ಈ ಗಜಬಾಲಕನಂ ಸಲಹು ಸಲಹು'' ಎಂದು ಪೇಳಿ, ಆ ಬಳಿಕ ವ್ಯಸನದಿಂ '' ಎಲೈ ಪೂರ್ವದಲ್ಲಿ ನಮಗೆ ಆವಾಸಸ್ಥಾನವಾದ ಈ ಪಂಚವಟಿಯೆಂಬ ಪ್ರದೇಶವಂ ನೋಡಿದುದಱಿಂದ ಬಹುಕಾಲ ಪರಿಚಯ ಮಾಡಲ್ಪಟ್ಟ ಆ ಕಾಂತನೆಂಬ ಅಕ್ಷರಂಗಳೇ ಅಲ್ಪಭಾಗ್ಯಳಾದ ನನ್ನಂ ಪುನಃ ಅನುಸರಿಸಿ

ಕೊಂಡು ಮುಖದಿಂ ಹೊಱಡುತ್ತಲಿವೆ, ಬಿಡುಬಿಡು.'' ಎಂದು ತನ್ನಂ ತಾನೇ ನಿಂದಿಸಿ, ''ಹಾ ಕಾಂತನೇ!'' ಎಂದು ಮೂರ್ಛೆಯನ್ನೈದಿದಳು.

ಆಗ ತಮಸೆಯು ರಂಗಸ್ಥಾನವಂ ಪ್ರವೇಶಿಸಿ, ''ಎಲೌ ಮಗಳೆ, ಸಮಾಧಾನಪಡುವಳಾಗು, ಸಮಾಧಾನಪಡುವಳಾಗು'' ಎಂದು ಸೀತೆಯಂ ಸಂತೈಸಿದಳು.

ಅಷ್ಟುಱೊಳಗೆ ನೇಪಥ್ಯದಲ್ಲಿ ''ಎಲೈ ವಿಮಾನರಾಜನೆ, ನೀನು ಇಲ್ಲೆ ಇರು'' ಎಂಬ ಘೋಷವುಂಟಾಯಿತು.

ಅದಂ ಕೇಳಿ ಸೀತೆಯು ಭಯದೊಡನೆ ಉಲ್ಲಾಸದೊಡನೆಯು ಕೂಡಿ ಇಂತೆಂದಳು :– ''ಎಲೌ, ಜಲಭಾರದಿಂ ಪರಿಪೂರ್ಣವಾದ ಮೇಘದ ನಿಬಿಡವಾದ ಘರ್ಜನದಂತೆ ಗಂಭೀರವಾಗಿ ತುಂಬಾಗಿ ಇರುವ ಎಲ್ಲೋ ಒಂದಾನೊಂದು ವಚನಘೋಷವು ಕರ್ಣಾನಂದವನ್ನುಂಟುಮಾಡುತ್ತ ಅಲ್ಪಭಾಗ್ಯಳಾದ ನನ್ನಂ ಶೀಘ್ರದಿಂ ಕುತೂಹಲಯುಕ್ತಳನ್ನಾಗಿ ಮಾಡುತ್ತಲಿದೆ!'' ಎಂದು ಪೇಳಲು; ತಮಸೆಯು ಮುಗುಳುನಗೆಯೊಡನೆ ಕಣ್ಣೀರೊಡನೆಯೂ ಕೂಡಿ, ''ಎಲೌ ಮಗಳೆ, ಎಲ್ಲೋ ಒಂದುಕಡೆಯಲ್ಲಿ ಸ್ಫುಟವಲ್ಲದೆ ಇರುವ ಒಂದು ಘೋಷವಂ ಕೇಳಿ ನೀನು ಮೇಘಗರ್ಜನವಂ ಕೇಳಿದ ಹೆಣ್ಣು ನವಿಲಂತೆ ಭಯಯುಕ್ತಳಾಗಿ ಕುತೂಹಲಯುಕ್ತಳಾಗಿಯೂ ನಿಂತಿರುವೆ!'' ಎಂದು ಪೇಳಲು; ಅದಂ ಕೇಳಿ ಸೀತೆಯು ''ಎಲೌ ಪೂಜ್ಯಳೇ, ನೀನು ಆ ಘೋಷವು ಅಸ್ಫುಟವಾಗಿರುವುದೆಂದು ಪೇಳುವೆಯೇನು? ಕಾಂತನಾದ ಸ್ವಾಮಿಯೇ ಈರೀತಿ ನುಡಿದನೆಂದು ಸ್ವರಸಂದರ್ಭದಿಂ ನಾನು ತಿಳಿಯುವೆನಲ್ಲ!'' ಎಂಬದಾಗಿ ಸೀತೆಯು ಪೇಳಲು: ತಮಸೆಯು ಸೀತೆಯಂ ಕುಱಿತು–''ಎಲೌ ಸೀತೆಯೇ, ಇಕ್ಷ್ವಾಕುವಂಶಸ್ಥನಾದ ಅರಸು ತಪಸ್ಸಂಗೈಯುವ ಶೂದ್ರನಂ ದಂಡಿಸುವುದಕ್ಕೋಸ್ಕರ ಜನಸ್ಥಾನವೆಂಬ ದಂಡಕಾರಣ್ಯಪ್ರದೇಶವಂ ಕುಱಿತು ಬಂದನೆಂಬ ವೃತ್ತಾಂತವು ಶ್ರುತವಾಗುತ್ತಲಿದೆ'' ಎನಲು; ಸೀತೆಯು–''ಎಲೌ ಪೂಜ್ಯಳೇ, ದೈವಯೋಗದಿಂ ಆ ಅರಸು ಸ್ವಧರ್ಮದಲ್ಲಿ ವಿಮುಖನಲ್ಲದೆ ಇದ್ದಾನೆಯಲ್ಲವೆ?'' ಎಂದು ಪೇಳಲು;

ಅಷ್ಟುಱೊಳಗೆ ನೇಪಥ್ಯದಲ್ಲಿ ಒಬ್ಬ ಪುರುಷನು ಇಂತೆಂದನು :–''ಯಾವ ಪ್ರಸ್ರವಣ ಪರ್ವತದ ತಪ್ಪಲುಗಳಲ್ಲಿರುವ ವೃಕ್ಷಗಳು ಮೃಗಗಳು ಸಹ ನನಗೆ ಬಂಧುಗಳಾಗಿ ಇದ್ದುವೋ ಮತ್ತು ಯಾವ ತಪ್ಪಲುಗಳಲ್ಲಿ ನಾನು ಪ್ರಿಯಳಾದ ಸೀತೆಯೊಡಗೂಡಿ ಬಹುಕಾಲ ವಾಸವಂ ಮಾಡಿದೆನೊ, ಗೋದಾವರಿಯೆಂಬ ನದಿಯ ಸಮೀಪದಲ್ಲಿರುವ ಪ್ರಸ್ರವಣ ಪರ್ವತದ ಅನೇಕಂಗಳಾದ ಗುಹೆಗಳು ಗಿರಿನದಿಗಳು ಸಹ ಉಳ್ಳ ಆ ತಪ್ಪಲುಗಳೇ ಇವಲ್ಲವೆ'' ಎಂದು ಪೇಳಲು;

ಸೀತೆಯು ನೋಡಿ, ''ಚೆನ್ನಾಯಿತು! ಇದೇನು? ಪ್ರಾತಃಕಾಲದಲ್ಲಿರುವ ಚಂದ್ರಮಂಡಲದಂತೆ ಅತ್ಯಂತ ಶ್ವೇತವರ್ಣವಾಗಿ ಅತಿಕೃಶವಾಗಿದ್ದಾಗ್ಯೂ ನೋಡುವುದಕ್ಕೆ ರಮ್ಯವಾಗಿಯೂ ಆಕೃತಿಯು ಇರುವುದಱಿಂ, ಸ್ವಾಭಾವಿಕಗಳಾಗಿ ಸೌಮ್ಯಗಳಾಗಿ ಗಂಭೀರಗಳಾಗಿಯೂ ಇರುವ ಗುಣಗಳುಳ್ಳ ಪ್ರಿಯನೇ ಈತನು, ಹೌದು. ಎಲೌ ಪೂಜ್ಯಳಾದ ತಮಸೆಯೇ, ನನ್ನನ್ನವಲಂಬಿಸುವಳಾಗು'' ಎಂದು ಪೇಳಿ, ತಮಸೆಯನ್ನಾಲಿಂಗನಂಗೈದು ಮೂರ್ಛೆಯನ್ನೈದಿದಳು. ಆಗ ತಮಸೆಯು ಸೀತೆಯಂ ತಬ್ಬಿಕೊಂಡು, ''ಎಲೌ ಮಗಳೆ, ಚಿತ್ತವಂ ಸಂತೈಸು ಸಂತೈಸು'' ಎಂದು ಪೇಳಿದಳು.

ಅಷ್ಟರೊಳಗೆ ನೇಪಥ್ಯದಲ್ಲಿ ಪುನಃ ಆ ಪುರುಷನು ಇಂತೆಂದನು:—'' ಈ ಪಂಚವಟಿಯ ದರ್ಶನದಿಂದ ಪೂರ್ವದಲ್ಲಿ ಮನಸ್ಸಿನಲ್ಲೇ ಅಡಗಿರುವ ದುಃಖವೆಂಬ ಅಗ್ನಿಯು ಈಗ ಪ್ರಬಲವಾಗಿ ಜ್ವಲಿಸುವುದಾದಕಾರಣ ಅಂಥ ದುಃಖಾಗ್ನಿಯಿಂದೆದ್ದಿರುವ ಧೂಮದ ಮುಂಭಾಗವೋ ಎಂಬಂತೆ ಮೂರ್ಛೆಯು ಮೊದಲು ನನ್ನಂ ಸುತ್ತಿಕೊಳ್ಳುತಲಿದೆ. ಕಟಕಟ! ಎಲೌ ಪ್ರಿಯಳಾದ ಸೀತೆಯೇ!'' ಎಂದು ಸಂತಪಿಸುವವನಾಗಲು ;

ರಂಗಸ್ಥಾನದಲ್ಲಿ ತಮಸೆಯು ತನ್ನ ಮನಸ್ಸಿನಲ್ಲಿ, ನಮ್ಮ ಗುರುಜನರು ಈ ರೀತಿ ಶ್ರೀರಾಮನಿಗೆ ಪುನಃ ಪಂಚವಟೀದರ್ಶನದಿಂ ಮೂರ್ಛೆ ಮೊದಲಾದ ಅನರ್ಥವು ಸಂಭವಿಸುವುದೆಂದು ಪೂರ್ವದಲ್ಲೇ ಊಹಿಸಿದ್ದರಲ್ಲವೆ?—ಎಂದು ಚಿಂತಿಸಿದಳು.

ಪುನಃ ನೇಪಥ್ಯದಲ್ಲಿ ಆ ಪುರುಷನು '' ಹಾ! ದಂಡಕಾರಣ್ಯದಲ್ಲಿ ಪ್ರಿಯ ಸಖಿಯಾಗಿ ಇದ್ದವಳೇ! ಹಾ! ಜನಕರಾಯನ ಪುತ್ರಿಯಾದ ಸೀತೆಯೇ!'' ಎಂದು ಪ್ರಿಯಳಂ ಸ್ಮರಿಸುವವನಾಗಲು ;

ಅದಂ ಕೇಳಿ ರಂಗಸ್ಥಾನದಲ್ಲಿ ಸೀತೆಯು ಇಂತೆಂದಳು:—'' ಕಟಕಟಾ! ಬಿಡು ಬಿಡು, ಪ್ರಿಯನಾದ ಸ್ವಾಮಿಯು ಅಲ್ಪಭಾಗ್ಯಳಾದ ನನ್ನನ್ನೇ ಸ್ಮರಿಸಿಕೊಳ್ಳುತ್ತ, ಕಮಲಗಳಂತೆ ಇರುವ ನೇತ್ರಂಗಳಂ ಮುಚ್ಚಿಕೊಂಡವನಾಗಿ, ವಿರಹವ್ಯಥೆಯೊಡಗೂಡಿದವನಾದ ಕಾರಣ ನಿಶ್ವಾಸಗಳು ಶೋಕವೇಗದಿಂದ ತಡೆಯಲ್ಪಟ್ಟುದಱಿಂ ಸಹಿಸಲು ಶಕ್ಯವಲ್ಲದೆ ಭೂಪ್ರದೇಶದಲ್ಲಿ ಕಟಕಟಾ! ಮೂರ್ಛಿತನೇ ಆದನು. ಎಲೌ ಪೂಜ್ಯಳಾದ ತಮಸೆಯೇ, ರಕ್ಷಿಸು ರಕ್ಷಿಸು, ಪ್ರಿಯನಾದ ಸ್ವಾಮಿಯಂ ಬದುಕಿಸು'' ಎಂದು ತಮಸೆಯ ಪಾದಂಗಳಲ್ಲಿ ಬಿದ್ದಳು. ಆಗ ತಮಸೆಯು ಸೀತೆಯಂ ಕುಱಿತು—'' ಎಲೌ ಭಾಗ್ಯವತಿಯೇ, ನಿನ್ನ ಹಸ್ತವು ಸ್ವಾಮಿಗೆ ಇಷ್ಟವಾದ ಸ್ಪರ್ಶವುಳ್ಳುದಾದಕಾರಣ ಆ ನಿನ್ನ ಹಸ್ತಸ್ಪರ್ಶದಲ್ಲಿ ಈ ರಾಮಭದ್ರನು ಆಸಕ್ತನಾಗಿದ್ದುದಱಿಂ ನೀನೇ ಜಗತ್ಪತಿಯಾದ ಆ ರಾಮನಂ ಹಸ್ತಸ್ಪರ್ಶದಿಂ ಬದುಕಿಸುವಳಾಗು'' ಎಂದು ಪೇಳಲು ; ಅದಂ ಕೇಳಿ ಸೀತೆಯು—'' ಏನಾಗುವುದೊ ಅದಾಗಲಿ, ಪೂಜ್ಯಳಾದ ತಮಸೆಯು ಯಾವ ರೀತಿ ಆಜ್ಞಾಪಿಸುವಳೊ ಆ ರೀತಿ ಆಚರಿಸೋಣ'' ಎಂದು ತ್ವರೆಯೊಡಗೂಡಿ ಅಲ್ಲಿಂದ ಪೊಱಟು ಪೋದಳು.

ಆ ಬಳಿಕ ಶ್ರೀರಾಮನು ಭೂಮಿಯಲ್ಲಿ ಪವಡಿಸಿದವನಾಗಿ ಕಣ್ಣೀರೊಡಗೂಡಿರುವ ಸೀತೆಯಿಂ ಸ್ಪರ್ಶಿಸಲ್ಪಡುವನಾದಕಾರಣ ಆನಂದದಿಂ ಉಚ್ಛ್ವಾಸಯುಕ್ತನಾಗಿಯೂ ರಂಗಸ್ಥಾನವಂ ಪ್ರವೇಶಿಸುವನಾಗಲು ;

ಸೀತೆಯು ಸ್ವಲ್ಪ ಸಂತೋಷಯುಕ್ತಳಾಗಿ, '' ಮೂಱುಲೋಕಗಳಿಗೂ ಪೋಗಿರುವ ಜೀವವು ಪುನಃ ಹಿಂದಕ್ಕೆ ತಿರಿಗಿ ಬಂತೆಂದು ನಾನು ತಿಳಿಯುವೆನು'' ಎಂದು ತನ್ನ ಮನಸ್ಸಿನಲ್ಲಿ ಭಾವಿಸಿದಳು. ಆಗ ಶ್ರೀರಾಮನು ಆನಂದದಿಂದ ಇಂತೆಂದನು:—'' ಎಲೈ ಇದೇನು! ಶ್ರೀ ಚಂದನ ವೃಕ್ಷದ ತಳಿರುಗಳಂ ತಂದು ಹಸ್ತಗಳಿಂ ಅವುಗಳ ಸ್ವರಸವು ಹೃದಯದಲ್ಲಿ ಹಿಂಡಲ್ಪಟ್ಟಿತೋ, ಅಲ್ಲದೆ ತಳಿರುಗಳಂತೆ ಮನೋಹರಗಳಾದ ಚಂದ್ರಕಿರಣಗಳಂ ಹಸ್ತಂಗಳಿಂ ಪೀಡಿಸಿ ಆ ಅಮೃತರಸವು ಹೃದಯದಲ್ಲಿ ಬಿಡಲ್ಪಟ್ಟಿತೋ, ಅಲ್ಲದೆ ಪೂರ್ವದಲ್ಲಿ ಬ್ರಹ್ಮಾಸ್ತ್ರದಿಂ ಅತಿತಾಪಯುಕ್ತವಾದ ನನ್ನ ಜೀವವಂ ಪುನಃ ಬದುಕಿಸಿದಂಥ

ಸಂಜೀವನವೆಂಬ ಔಷಧಿಯ ರಸವು ಪುನಃ ನನ್ನ ಹೃದಯದಲ್ಲಿ ಪ್ರಸರಿಸಿತೋ, ಮತ್ತು ಯಾವ ಸ್ಪರ್ಶವು ವಿರಹಸಂತಾಪದಿಂ ಜನಿಸಿದ ನನ್ನ ಮೂರ್ಛೆಯಂ ಪರಿಹರಿಸಿ ಆನಂದಾತಿಶಯದಿಂದ ಪುನಃ ನನ್ನಂ ಪರವಶನನ್ನಾಗಿ ಮಾಡುತ್ತಲಿದೆಯೋ, ಅಂಥ ಸಂಜೀವನವಾದ ಮನೋಮೋಹಕವಾದ ಈ ಸ್ಪರ್ಶವು ನಿಶ್ಚಯವಾಗಿ ಪೂರ್ವದಲ್ಲಿ ಪರಿಚಯಮಾಡಲ್ಪಟ್ಟುದೆ ಹೊಱತು ಮತ್ತೊಂದಲ್ಲ'' ಎಂದು ಶ್ರೀರಾಮನು ಪೇಳಿದವನಾಗಲು ; ಸೀತೆಯು ಭಯದೊಡನೆಯೂ ದೈನ್ಯದೊಡನೆಯೂ ಕೂಡಿದವಳಾಗಿ ಅಲ್ಲಿಂದ ಹಿಂದಕ್ಕೆ ಪೋಗಿ '' ನನಗೆ ಇರುವ ಈ ದುರ್ದಶಾಕಾಲದಲ್ಲಿ ಧೈರ್ಯದಿಂ ಸಮೀಪವನ್ನೈದಿ ಸ್ವಾಮಿಯಂ ಸ್ಪೃಶಿಸಿದೆನೆಂಬುವುದೆ ಹೆಚ್ಚಾಯಿತೆ ! '' ಎಂದಳು. ಆಗ ಶ್ರೀರಾಮನು ಆ ರೀತಿ ಕಣ್ಣುಗಳಂ ಮುಚ್ಚಿಕೊಂಡೇ ಮನಸ್ಸಿನಲ್ಲಿ ಆಲೋಚಿಸಿ, '' ನಾನು ಪ್ರೇಮಯುಕ್ತಳಾದ ಸೀತೆಯೊಡನೆ ಕೂಡಿದವನಾಗಲಿಲ್ಲವಲ್ಲ ! '' ಎಂದು ಪೇಳಲು ; ಸೀತೆಯು ಅದಂ ಕೇಳಿ '' ಗುರುಪುತ್ರನಾದ ಸ್ವಾಮಿಯು ನನ್ನಂ ನಿಂದಿಸುತ್ತಾನೆ, ಬಿಡುಬಿಡು.'' ಎಂದು ತಾನೇ ತನ್ನಂ ನಿಂದಿಸಿಕೊಂಡಳು. ಶ್ರೀರಾಮನು '' ಆಗಲಿ, ನೋಡುತ್ತೇನೆ '' ಎನಲು ; ಆಗ ಸೀತೆಯು ಭಯದಿಂದ—'' ಎಲೌ ಪೂಜ್ಯಳಾದ ತಮಸೆಯೇ, ನಾವು ಇಲ್ಲಿಂದ ಪೊಱಟುಪೋಗೋಣ, ನಾನು ಪತಿಯಿಂ ತ್ಯಜಿಸಲ್ಪಟ್ಟವಳಾದಕಾರಣ ಸಮೀಪಕ್ಕೆ ಬರುವಂತೆ ಅನುಜ್ಞೆ ಇಲ್ಲವಾದುದಱಿಂ ಸ್ವಾಮಿಯು ನನ್ನಂ ನೋಡಿ ಅಧಿಕವಾಗಿ ಕೋಪವಂ ಮಾಡಿಯಾನು ? '' ಎಂದು ಪೇಳಲು ; ಅದಂ ಕೇಳಿ ತಮಸೆಯು—'' ಎಲೌ ಮಗಳೇ, ಗಂಗಾದೇವಿಯ ಪ್ರಸಾದದಿಂ ನೀನು ವನದೇವತೆಗಳಿಗೂ ಕೂಡ ಅದೃಶ್ಯಳಾಗಿದ್ದೀಯೆ, ಭಯವೇನು ? '' ಎಂದು ಪೇಳಿದಳು. ಸೀತೆಯು '' ಹೌದು, ನನಗೆ ಈ ರೀತಿ ಗಂಗೆಯ ಅನುಗ್ರಹವಿದೆ '' ಎಂದು ಸ್ಮರಿಸಿದಳು. ಶ್ರೀರಾಮನು ಮೋಹಾವೇಶದಿಂ '' ಎಲೌ ಪ್ರಿಯಳಾದ ಸೀತೆಯೇ '' ಎಂದು ಕರೆಯಲು ; ಸೀತೆಯು ಭಯದೊಡನೆಯೂ ಗದ್ಗದಸ್ವರದೊಡನೆಯೂ ಕೂಡಿದವಳಾಗಿ '' ಎಲೆ ಸ್ವಾಮಿಯೇ, ನೀನು ಲೋಕಾಪವಾದ ನಿಮಿತ್ತವಾಗಿ ನನ್ನಂ ತ್ಯಜಿಸಿದೆಯೆಂಬ ಈ ವೃತ್ತಾಂತಕ್ಕೆ ಈ ರೀತಿ ನನ್ನಂ ಪ್ರಿಯಳೆಂದು ಮೋಹದಿಂ ಕರೆಯುವುದು ಉಚಿತವಲ್ಲ '' ಎಂದು ಪೇಳಿ, ಅಷ್ಟಱೊಳಗೆ ಕಣ್ಣೀರೊಡಗೂಡಿ, '' ಅಥವಾ ಜನ್ಮಾಂತರಂಗಳಲ್ಲಿಯೂ ಕೂಡ ಪುನಃ ಸಂಭವಿಸುವುದಲ್ಲವಾದಕಾರಣ ದುರ್ಲಭವಾದ ದರ್ಶನವುಳ್ಳವನಾಗಿ ಮತ್ತು ಅಲ್ಪಭಾಗ್ಯಳಾದ ನನ್ನಂ ಕುಱಿತು ಪ್ರೇಮಯುಕ್ತನಾಗಿ ಈ ರೀತಿ ಪ್ರಿಯಳೇ ಎಂದು ಪೇಳುವ ಗುರುಪುತ್ರನಾದ ಸ್ವಾಮಿಯಲ್ಲಿ ನಾನು ಏಕೆ ವಜ್ರಮಣಿಯಂತೆ ದಯಾರಹಿತಳಾಗುತ್ತೇನೆ ? ಈ ಸ್ವಾಮಿಯ ಹೃದಯವಂ ನಾನೊಬ್ಬಳೇ ತಿಳಿಯುವೆನು, ನನ್ನ ಹೃದಯವನ್ನು ಈ ಸ್ವಾಮಿಯೊಬ್ಬನೇ ಬಲ್ಲನು '' ಎಂದು ಪೇಳಲು; ಶ್ರೀರಾಮನು ನಾಲ್ಕು ಕಡೆಯಲ್ಲಿಯೂ ನೋಡಿದವನಾಗಿ, ಸಂತಾಪದೊಡಗೂಡಿ, '' ಕಟಕಟಾ ! ಇಲ್ಲಿ ಯಾವಳೂ ಇಲ್ಲ '' ಎಂದು ವ್ಯಸನಪಡುವನಾಗಲು ; ಆಗ ಸೀತೆಯು—'' ಎಲೌ ಪೂಜ್ಯಳಾದ ತಮಸೆಯೇ, ಸ್ವಾಮಿಯು ನನ್ನಂ ನಿಷ್ಕಾರಣವಾಗಿ ಪರಿತ್ಯಾಗವಂ ಮಾಡಿದವನಾದಾಗ್ಯೂ ಈ ರೀತಿ ನನ್ನ ವಿರಹದಿಂ ದುಃಖಿಸುವ ಈ ಪ್ರಿಯನಂ ನೋಡುವುದಱಿಂದ ನನ್ನ ಹೃದಯದ ಅವಸ್ಥೆಯು ಯಾವ ರೀತಿ ಇದೆ ಎಂದು ಪೇಳಲಿ ? ಕಟಕಟಾ ! ಪೇಳಲು ಶಕ್ಯವಲ್ಲ ! ''

ಎನಲು ; ಅದಂ ಕೇಳಿ ತಮಸೆಯು–" ಎಲೌ ಮಗಳೇ, ನಿನ್ನ ಹೃದಯದ ಅವಸ್ಥೆಯಂ ನಾನು ತಿಳಿಯುವೆನು. ಮಗಳೇ, ನಾನು ತಿಳಿಯುವೆನು " ಎಂದು ವ್ಯಸನದಿಂ ಪೇಳಿ, ಆ ಸೀತೆಯ ಹೃದಯವಿರುವುದಂ ಬಣ್ಣಿಸುವಳು.–"ಎಲೌ ಸೀತೆಯೆ, ನಿನ್ನ ಹೃದಯವು ಎಂತು ಇರುವುದೆಂದರೆ–ಪತಿಯಾದ ಶ್ರೀರಾಮನು ಲೋಕಾಪವಾದನಿಮಿತ್ತವಾಗಿ ನಿನ್ನಂ ಪರಿತ್ಯಾಗವ ಮಾಡಿದವನಾದುದಱಿಂ ಪುನಃ ಪತಿಯೊಡನೆ ಸಂಗವುಂಟಾಗುವುದೆಂಬ ಆಶೆ ಇಲ್ಲದಕಾರಣ ಈ ಪತಿಯಾರು ನಾನು ಯಾರು ಎಂದು ಉದಾಸೀನವಾಗಿಯೂ ; ಮತ್ತು ನೀನು ಪೂರ್ಣಗರ್ಭಿಣಿಯಾಗಿ ಬೇಸಱಿಕೆಯಿಂ ಶ್ರೀ ರಾಮಲಕ್ಷ್ಮಣರೊಡನೆ ಚಿತ್ರವಂ ನೋಡುವ ಕಾಲದಲ್ಲಿ ಸ್ವಾಮಿಯಂ ಕುಱಿತು–ಎಲೈ ಕಾಂತನೇ, ಈ ಚಿತ್ರವಂ ನೋಡಿದುದಱಿಂ ಪುನಃ ಆ ಋಷಿಗಳ ಆಶ್ರಮಗಳಲ್ಲಿ ಋಷಿಪತ್ನಿಯರುಗಳೊಡನೆ ವಿಹಾರಂಗೈಯಬೇಕೆಂದು ಪುನಃ ಗಂಗೆಯಲ್ಲಿ ಸ್ನಾನವಂ ಮಾಡಬೇಕೆಂದು ಸಹ ನನಗೆ ಮನೋರಥವುಂಟಾಗಿದೆ ಎಂದು ಬಿನ್ನವಿಸಲು, ಸ್ವಾಮಿಯು–ಹಾಗೆ ಆಗಲಿ, ಈ ಕ್ಷಣದಲ್ಲಿ ನಿನ್ನ ಮನೋರಥವಂ ಪೂರ್ತಿಗೈಯುವೆನು ಎಂದು ಪೇಳಿದವನಾಗಲು, ಅಷ್ಟಱೊಳಗೆ ನೀನು ಆಯಾಸದಿಂ ನಿದ್ರೆಗೈಯುತ್ತಲಿರುವಾಗ ಸ್ವಾಮಿಯು ಗೂಢಚಾರಮುಖದಿಂ ನಿನ್ನ ವಿಷಯವಾಗಿ ಒಂದು ಲೋಕಾಪವಾದವಂ ಕೇಳಿ ಆಬಳಿಕ ನಿನ್ನ ಮನೋರಥವಂ ಪೂರ್ತಿಗೈದು ಹಿತವನ್ನಾಚರಿಸುವವನಂತೆ ಕಪಟದಿಂ ಲಕ್ಷ್ಮಣನ ಮುಖಾಂತರದಿಂ ನಿನ್ನಂ ರಥವನ್ನೇಱಿಸಿ ನಿರ್ಜನವಾದ ಅರಣ್ಯದಲ್ಲಿ ತ್ಯಾಗಂಗೈಸಿದುದಱಿಂದ ಕಪಟಯುಕ್ತವಾಗಿಯೂ ; ಆಯುಸ್ಸು ಪೂರ್ತಿಯಾಗುವವರೆಗೂ ಅನುಭವಿಸತಕ್ಕುದಾದಕಾರಣ ಅತಿದೀರ್ಘವಾದ ಈ ವಿರಹದ ದಶೆಯಲ್ಲಿ ದೈವಗತಿಯಿಂ ಏನೋ ಒಂದು ನಿಮಿತ್ತದಿಂದ ಶೀಘ್ರವಾಗಿ ಪುನಃ ಸ್ವಾಮಿಯ ಮುಖದರ್ಶನವು ಘಟಿಸಿದುದಱಿಂ ಆಶ್ಚರ್ಯದಿಂ ಸ್ತಂಭಿತವಾಗಿಯೂ ; ಮತ್ತು ನೀನು ಸುಜನವಾದುದಱಿಂದ ಪತಿಭಕ್ತಿಯಲ್ಲೇ ದೃಷ್ಟಿಯನ್ನಿಟ್ಟು ನನ್ನ ಕರ್ಮಫಲವು ಈರೀತಿ ಅನುಭವಿಸತಕ್ಕುದಾಗಿ ಇರುವಲ್ಲಿ ಮಹಾತ್ಮನಾದ ಸ್ವಾಮಿಯ ದೋಷವೇನೆಂದು ಪ್ರಸನ್ನವಾಗಿಯೂ ; ಮತ್ತು ಲೋಕರಂಜನಾರ್ಥವಾಗಿ ನನ್ನಂ ತ್ಯಜಿಸಿದನೇ ಹೊಱತು ನನ್ನಂ ತ್ಯಜಿಸುವುದು ಭಾವಜ್ಞನಾದ ಸ್ವಾಮಿಗೆ ಇಷ್ಟವಲ್ಲವಾದಕಾರಣ ನಿರ್ಜನವಾದ ಈ ಅರಣ್ಯದಲ್ಲಿ ಈರೀತಿ ನನ್ನ ನಿಮಿತ್ತವಾಗಿ ದುಃಖಿಸುತ್ತಾನೆಯೆಂದೂ ; ನಿನ್ನ ಚಿತ್ತವು ಈ ಪ್ರಿಯನ ಶೋಕಗಳಂ ನೋಡುವುದಱಿಂದ ಈ ಪ್ರಿಯನ ವಿಷಯವಾಗಿ ಪ್ರೇಮದಿಂ ಒಂದು ಕ್ಷಣದಲ್ಲಿ ದ್ರವಿಸಿದಂತೆ ನಾನಾಮುಖವಾಗಿ ಪ್ರವರ್ತಿಸುತ್ತಲಿದೆ " ಎಂದು ತಮಸೆಯು ಸೀತೆಯಂ ಕುಱಿತು ಪೇಳಲು ;

ಶ್ರೀರಾಮನು–" ಎಲೌ ಪ್ರಿಯಳೇ, ಸ್ನೇಹದಿಂ ದ್ರವಯುಕ್ತವಾದುದಱಿಂ ಶೀತಳವಾದ ನಿನ್ನ ಹಸ್ತಸ್ಪರ್ಶವು ಆಕೃತಿಯುಕ್ತವಾದ ಪ್ರಸಾದವೋ ಎಂಬಂತೆ ಈಗಲೂ ನನ್ನಂ ಆನಂದಪಡಿಸುತ್ತಲಿದೆ. ಎಲೌ ಆನಂದಕರಳಾದ ಸೀತೆಯೇ, ನೀನಾದರೋ ಎಲ್ಲಿ ಇರುವೆಯೊ ನಾನು ಅಱಿಯೆ. " ಎಂದು ಪೇಳಲು ;

ಅದಂ ಕೇಳಿ ಸೀತೆಯು ಇಂತೆಂದಳು :–" ಎಲೈ ಕಾಂತನಾದ ಸ್ವಾಮಿಯೇ, ಈಗ ನನ್ನಂ ಕುಱಿತು ಪೇಳುವ ಈ ನುಡಿಗಳು ಅತಿಗಂಭೀರವಾದ ಮನಸ್ಸಿನಿಂದ ವ್ಯಕ್ತ

ವಾಗಿ ಮಾಡಲ್ಪಟ್ಟ ಸ್ನೇಹದಿಂ ಹೊಱಡುವುವಾಗಿ ಆನಂದಕರಂಗಳಾಗಿ ಅಮೃತಮಯಂಗಳಾಗಿಯೂ ಇವೆಯಲ್ಲವೆ? ಈಗ ಕಾಂತನ ಇಂಥ ನುಡಿಗಳಲ್ಲಿರುವ ನಂಬಿಕೆಯಿಂದ ನನ್ನ ಜನ್ಮಪ್ರಾಪ್ತಿಯು ನಿಷ್ಕಾರಣವಾದ ಪರಿತ್ಯಾಗದಿಂ ಹೃದಯಶಲ್ಯವುಳ್ಳುದಾದರೂ ಸಮ್ಮತವಾಗಿ ಇದೆ" ಎಂದು ಸೀತೆಯು ಪೇಳಲು;

ಶ್ರೀರಾಮನು–"ಅಥವಾ ಅತಿಪ್ರಿಯಳಾದ ಸೀತೆಯು ಎಲ್ಲಿಂದ ಬರುವಳು? ನನ್ನ ಚಿತ್ತವು, ಸೀತಾವಿರಹದಿಂದ ಸಂಭವಿಸಿದ ಸಂಕಲ್ಪವೆಂಬ ಅವಸ್ಥಾವಿಶೇಷವು ಬಲವಾದುದಱಿಂ, ಪುನಃ ಆ ಸೀತೆಯು ಇಲ್ಲಿ ಬಂದಂತೆಯೂ ತನ್ನ ಹಸ್ತದಿಂ ನನ್ನಂ ಸ್ಪೃಶಿಸಿದಂತೆಯೂ ತೋಱುತ್ತಲಿರುವುದು ರಾಮನ ಭ್ರಾಂತಿಯೇ ಹೊಱತು ಮತ್ತೊಂದಲ್ಲ" ಎಂದು ಪೇಳಲು–

ಅಷ್ಟಱೊಳಗೆ ಪುನಃ ನೇಪಥ್ಯದಲ್ಲಿ ಒಬ್ಬಳು–"ಪ್ರಮಾದ ಬಂದಿತು, ಪ್ರಮಾದ ಬಂದಿತು. ಪೂರ್ವದಲ್ಲಿ ಸೀತಾದೇವಿಯು ಸಲ್ಲಕಿಯೆಂಬ ವೃಕ್ಷದ ತಳಿರುಗಳಂ ತನ್ನ ಹಸ್ತದಲ್ಲಿ ಇರಿಸಿಕೊಂಡು ಆ ತಳಿರುಗಳಿಂ ತನ್ನ ಮುಂದುಗಡೆಯಲ್ಲಿ ಸೊಂಡಲನೆತ್ತಿಕೊಂಡು ಚಲಿಸುತ್ತಲಿರುವ ಯಾವ ಬಾಲಗಜವಂ ಪೋಷಿಸಿದಳೋ–" ಎಂದು ಪೇಳಲು; ಅದಂ ಕೇಳಿ ಶ್ರೀರಾಮನು ಶೋಕದೊಡನೆಯೂ ಕುತೂಹಲದೊಡನೆಯೂ ಕೂಡಿದವನಾಗಿ–"ಆ ಬಾಲಗಜಕ್ಕೇನು?" ಎನಲು;

ಪುನಃ ನೇಪಥ್ಯದಲ್ಲಿ "ಆ ಬಾಲಗಜವು ಈಗ ಯೌವನಶಾಲಿಯಾದುದಱಿಂ ಸ್ತ್ರೀಗಜದೊಡಗೂಡಿ ಜಲಮಧ್ಯದಲ್ಲಿ ಕ್ರೀಡಿಸುತ್ತಲಿರಲು, ಪ್ರಬಲವಾದ ಮತ್ತೊಂದು ಗಜಶ್ರೇಷ್ಠವು ಓಡಿಬಂದು ಆ ಗಜದೊಡನೆ ಕಲಹವಂ ಮಾಡುವುದಱಲ್ಲಿ ಉದ್ಯುಕ್ತವಾಗಿ ಇದೆ" ಎಂದು ಪೇಳಲು;

ಅದಂ ಕೇಳಿ ಸೀತೆಯು–"ಯಾವ ಗಜವು ಈಗ ಆ ನನ್ನ ಬಾಲಗಜದೊಡನೆ ಕಲಹೋದ್ಯುಕ್ತವಾಗುತ್ತಲಿದೆ?" ಎನಲು;

ಶ್ರೀರಾಮನು ಅತಿಕೋಪದಿಂ–"ಯಾವ ಗಜವು ಪ್ರಿಯಳಾದ ಸೀತೆಗೆ ಪುತ್ರನಾಗಿ ಸ್ತ್ರೀಗಜದೊಡಗೂಡಿರುವ ಬಾಲಗಜವಂ ತಿರಸ್ಕಾರವಂ ಮಾಡುತ್ತಲಿದೆಯೊ ಅಂಥ ದುಷ್ಟವಾದ ಗಜವು ಎಲ್ಲಿ ಇದೆ?" ಎಂದು ಪೇಳುತ್ತ ಮೇಲಕ್ಕೆ ಎದ್ದನು.

ಅಷ್ಟಱೊಳಗೆ ನೇಪಥ್ಯದಿಂದ ಆ ವಾಸಂತಿಯು ತ್ವರೆಯೊಡಗೂಡಿದವಳಾಗಿ ರಂಗಸ್ಥಾನವಂ ಪ್ರವೇಶಂಗೈದು "ಇದೇನು! ರಘುಕುಲಾನಂದಕರನಾದ ಶ್ರೀರಾಮದೇವನು ಪ್ರತ್ಯಕ್ಷವಾಗಿದ್ದಾನೆ" ಎಂದು ನೋಡಿದಳು. ವಾಸಂತಿಯು ಸ್ವಾಮಿಯ ಸಮೀಪವನ್ನೈದಿ, "ಮಹಾರಾಜನು ಸರ್ವೋತ್ಕೃಷ್ಟನಾಗಿರಲಿ!" ಎಂದು ಪೇಳಿದಳು. ಶ್ರೀರಾಮನು ನೋಡಿ, "ಇದೇನು! ಸೀತೆಗೆ ಪ್ರಿಯಸಖಿಯಾದ ವಾಸಂತಿಯು ಬಂದಳು" ಎಂದು ಪೇಳಿದನು. ವಾಸಂತಿಯು–"ಎಲೈ ಸ್ವಾಮಿಯೇ, ತ್ವರೆಮಾಡಬೇಕು, ತ್ವರೆಮಾಡಬೇಕು. ಇತ್ತಲು ಜಟಾಯುವಿನ ಶಿಖರಕ್ಕೆ ದಕ್ಷಿಣದಿಕ್ಕಿನಲ್ಲಿ ಸೀತಾಘಟ್ಟದಿಂ ಗೋದಾವರಿಯಲ್ಲಿ ಇಳಿದು ಸೀತೆಗೆ ಪುತ್ರನಾದ ಬಾಲಗಜವಂ ಸ್ವಾಮಿಯು ನೋಡಬೇಕು" ಎಂದು ಪೇಳಿದಳು.

ಅದಂ ಕೇಳಿ ಸೀತೆಯು—“ ಎಲೈ ತಂದೆಯಾದ ಜಟಾಯುವೇ, ಈ ಜನಸ್ಥಾನವು ನಿನ್ನಿಂದ ರಹಿತವಾದುದರಿಂ ನನಗೆ ಶೂನ್ಯವಾಗಿರುವಂತೆ ತೋಱುತ್ತಲಿದೆ, ಕಟ ಕಟಾ ! ” ಎಂದಳು.

ಶ್ರೀರಾಮನು ವಾಸಂತಿಯ ವಚನವಂ ಕೇಳಿ, “ ಕಟಕಟಾ ! ಈ ಪೂರ್ವಪ್ರಸ್ತಾಪದ ಸಂಗತಿಗಳು ಹೃದಯದ ಮರ್ಮಸ್ಥಾನಗಳಂ ಅತ್ಯಂತವಾಗಿ ಭೇದಿಸುತ್ತಲಿವೆಯಲ್ಲವೆ ? ” ಎಂದನು. ವಾಸಂತಿಯು ಶ್ರೀ ರಾಮನಂ ಕುಱಿತು—“ ಸ್ವಾಮಿಯು ಇತ್ತಿತ್ತ ದಯೆಮಾಡಿಸಬೇಕು ” ಎಂದು ಗೋದಾವರಿಯ ಮಾರ್ಗವಂ ತೋಱಿಸಿದಳು.

ಸೀತೆಯು. ತಮಸೆಯಂ ಕುಱಿತು—“ ಎಲೌ ಪೂಜ್ಯಳೇ, ಗಂಗಾದೇವಿಯ ವಚನವು ಸತ್ಯವೇ ಸರಿ. ವನದೇವತೆಯಾದ ವಾಸಂತಿಯು ಕೂಡ ನನ್ನಂ ನೋಡುವುದಿಲ್ಲ ” ಎಂಬ ಸೀತೆಯ ವಚನವಂ ಕೇಳಿ ತಮಸೆಯು—“ ಎಲೌ ಮಗಳೇ, ಕೇಳು. ಸಮಸ್ತ ದೇವತೆಗಳಿಗಿಂತಲು ಭಗವತಿಯಾದ ಗಂಗಾದೇವಿಯ ಪ್ರಭಾವವು ಉತ್ಕೃಷ್ಟವಾದುದಲ್ಲವೆ ? ಈ ವಿಷಯದಲ್ಲಿ ನೀನು ಏನೆಂದು ಸಂದೇಹಪಡುತ್ತೀಯೆ ? ” ಎಂದು ಪೇಳಲು ; ಸೀತೆಯು—“ ಎಲೌ ಪೂಜ್ಯಳೇ, ಆದುದಱಿಂ ನಾವು ಈ ಸ್ವಾಮಿಯ ವಚನವಂ ಕೇಳಿ ಅನುಸರಿಸಿಕೊಂಡು ಪೋಗೋಣ ” ಎಂದು ಪೇಳಿ ಇಬ್ಬರೂ ಗೋದಾವರೀಮಾರ್ಗವನ್ನನುಸರಿಸಿ ಹೊಱಟರು.

ಶ್ರೀರಾಮನು ಗೋದಾವರೀಸಮೀಪವನ್ನು ಹೊಂದಿ, “ ಎಲೌ ಗೋದಾವರಿಯೇ, ನಿನಗೆ ನಮಸ್ಕರಿಸುವೆನು ” ಎಂದನು. ವಾಸಂತಿಯು—“ ಎಲೈ ಸ್ವಾಮಿಯೇ, ಸೊಸೆಯಾದ ಸ್ತ್ರೀಗಜದೊಡಗೂಡಿ ಕ್ರೀಡಿಸುವ ಸೀತಾಪುತ್ರನಾದ ಬಾಲಗಜವು ಶತ್ರುವಾದ ಮಹಾಗಜವಂ ಜಯಿಸಿತಾದಕಾರಣ ಸಂತೋಷಪಡುವನಾಗು ” ಎನಲು ; ಶ್ರೀರಾಮನು ನೋಡಿ, “ ಅಯುಷ್ಮಂತನು ಜಯಶೀಲನಾಗಿರಲಿ ! ” ಎಂದು ಅಶೀರ್ವಾದವಂ ಮಾಡಿದನು.

ಆಗ ಸೀತೆಯು ತನ್ನ ಪುತ್ರನಾದ ಗಜವಂ ನೋಡಿ ಆ ಗಜವು ಈಗ ಈರೀತಿ ಯೌವನಶಾಲಿಯಾಯಿತೆಂದು ಅಶ್ಚರ್ಯಪಟ್ಟಳು.

ಶ್ರೀರಾಮನು—“ ಎಲೌ ಸೀತೆಯೇ, ದೈವಬಲದಿಂ ನಿನ್ನ ಪುತ್ರನಾದ ಗಜವು ಮಹಾಗಜವಂ ಜಯಿಸಿದುದಱಿಂ ನೀನು ವೃದ್ಧಿಯನ್ನೈದುತ್ತೀಯೆ. ಎಲೌ ಪ್ರಿಯಳೆ, ಪೂರ್ವದಲ್ಲಿ ಎಳದಾವರೆಯ ದಂಟಿನಂತೆ ಕೋಮಲಗಳಾದ ದಂತಗಳ ಮೊಳೆಗಳುಳ್ಳ ಯಾವ ಬಾಲಗಜವು ಕುತೂಹಲದಿಂದ ಅಲಂಕಾರಾರ್ಥವಾಗಿ ನಿನ್ನ ಕರ್ಣಮೂಲದಲ್ಲಿ ಧರಿಸಲ್ಪಟ್ಟಿರುವ ಲವಲಿಯೆಂಬ ಬಳ್ಳಿಯ ಚಿಗುರನ್ನು ತನ್ನ ಸೊಂಡಲಿಂ ಲೀಲೆಯಿಂದ ಸೆಳೆದಂಥದಾಯಿತೊ ಅಂಥ ನಿನ್ನ ಪುತ್ರನಾದ ಆ ಬಾಲಗಜವು ಈಗ ಮದ್ದಾನೆಗಳಂ ಜಯಿಸುವುದಾದಕಾರಣ ಗಜಕ್ಕೆ ಯೌವನಕಾಲದಲ್ಲಿ ಯಾವ ಗುಣಸಂಪತ್ತು ಇರತಕ್ಕದೊ ಆ ಗುಣಸಂಪತ್ತಿಗೆ ಪಾತ್ರವಾಯಿತು” ಎಂಬ ಸ್ವಾಮಿಯ ವಚನವಂ ಕೇಳಿ, ಸೀತೆಯು ನೋಡಿ—“ ಈಗ ಈ ಪುತ್ರನಾದ ಗಜವು ದೀರ್ಘಾಯುಸ್ಸನುಳ್ಳುದಾಗಿ ಸೌಂದರ್ಯಶಾಲಿಯಾದ ಸ್ತ್ರೀಗಜದೊಡನೆ ವಿರಹಯುಕ್ತವಲ್ಲದೆ ಸುಖದಿಂ ಇರಲಿ ” ಎಂದಳು.

ಶ್ರೀರಾಮನು—“ ಎಲೌ ಸಖಿಯಾದ ವಾಸಂತಿಯೇ, ಈ ಬಾಲಗಜವು ಈಗ ತನಗೆ ಪ್ರಿಯಳಾದ ಹೆಣ್ಣಾನೆಯನ್ನನುಸರಿಸುವುದಱಲ್ಲಿ ಚಾತುರ್ಯವನ್ನು ಕೂಡ ಅಭ್ಯಾಸವನ್ನು ಮಾಡಿ ಇದೆ, ನೋಡು. ಅದೆಂತೆನೆ:—ಈ ಗಜವು ಈ ಗೋದಾವರಿಯ ಜಲಮಧ್ಯದಲ್ಲಿ ತನ್ನ ಸ್ತ್ರೀಗಜಕ್ಕೆ ವಿಳಾಸದಿಂ ಕೀಳಲ್ಪಟ್ಟ ತಾವರೆದಂಟುಗಳ ಕಬಳಗಳಂ ಕೊಟ್ಟು ಅವುಗಳಂ ಭಕ್ಷಿಸುವ ಮಧ್ಯದಲ್ಲಿ ಬಾಯಾಱಿಕೆಯಂ ಪರಿಹರಿಸಲೋಸುಗ ಪುಷ್ಪಿಯುಕ್ತವಾಗಿರುವ ತನ್ನ ಸೊಂಡಲಿನ ಅಗ್ರಭಾಗದಲ್ಲಿ ತುಂಬಿರುವ ಜಲವಂ ಆಗಾಗ ಈ ಹೆಣ್ಣಾನೆಯ ಮುಖದಲ್ಲಿ ಬಿಡುತ್ತಲಿದೆ; ಮತ್ತು ಜಲಬಿಂದುಗಳೊಡಗೂಡಿರುವ ತನ್ನ ಸೊಂಡಲಿಂದ ಈ ಸ್ತ್ರೀಗಜವಂ ತಾಪಪರಿಹಾರಾರ್ಥವಾಗಿ ನನೆಯಿಸುತ್ತಲಿದೆ; ಮತ್ತು ಈರೀತಿ ಉಪಚಾರವಂ ಮಾಡೋಣದಱಿಂದ ಬಹುತರವಾಗಿ ಶ್ರಮಪರಿಹಾರವಾಗಲು ಪುನಃ ಸ್ನೇಹದಿಂ ನೀಟಾಗಿರುವ ನಾಳವುಳ್ಳ ತಾವರೆಯೆಲೆಯೆಂಬ ಛತ್ರವ ಸ್ತ್ರೀಗಜದ ಶಿರಸ್ಸಿನಲ್ಲಿ ಪಿಡಿಯುತ್ತಲಿದೆಯಾದಕಾರಣ ಈ ಸ್ತ್ರೀಯನುಸರಣಚಾತುರ್ಯವಂ ಕೂಡ ಈ ಗಜವು ಅಭ್ಯಾಸವಂ ಮಾಡಿ ಇದೆ ” ಎಂದು ಪೇಳಲು;

ಸೀತೆಯು—“ ಪೂಜ್ಯಳಾದ ತಮಸೆಯೆ, ಆ ಬಾಲಗಜವು ಈಗ ಈರೀತಿ ಯೌವನಶಾಲಿಯಾಗಿ ಇದೆ. ನನ್ನ ಪುತ್ರರಾದ ಆ ಕುಶಲವರಿರ್ವರು ಇಷ್ಟುಮಾತ್ರವಾದ ಕಾಲಕ್ಕೆ ಎಂಥವರಾಗಿರುವರೋ ಎಂದು ನಾನು ತಿಳಿಯುವೆನು ” ಎಂದು ಪೇಳಿದಳು. ಅದಂ ಕೇಳಿ ತಮಸೆಯು—“ ಎಲೌ ಮಗಳೇ, ಈ ಗಜವು ಹೇಗೆ ಇರುವುದೊ ಅದೇರೀತಿ ನಿನ್ನ ಪುತ್ರರಾದ ಆ ಕುಶಲವರು ಕೂಡ ಇರುವರು ” ಎಂದು ಪೇಳಿದಳು. ಸೀತೆ—“ ನನಗೆ ಪತಿವಿರಹಮಾತ್ರವೆ ಅತ್ಯಂತವಾಗಿ ಸಹಿಸತಕ್ಕುದಲ್ಲ, ಪುತ್ರವಿರಹವು ಕೂಡ ಅತ್ಯಂತವಾಗಿ ಸಹಿಸತಕ್ಕುದಾಗಿ ಇದೆಯಾದಕಾರಣ ನಾನು ಎಂಥ ಭಾಗ್ಯಹೀನಳಾದೆ, ನೋಡಿದೆಯಾ! ” ಎನಲು; ತಮಸೆಯು—“ ಎಲೌ ಮಗಳೇ, ದೈವಗತಿಯಿಂಥದಾಗಿರಲು ನಾವು ವ್ಯಸನಪಟ್ಟು ಫಲವೇನು? ” ಎಂದಳು. ಸೀತೆಯು—“ ಎಲೌ ಪೂಜ್ಯಳೇ, ಯಾವ ನನ್ನ ಪುತ್ರರಾದ ಕುಶಲವರ ಸ್ವಲ್ಪವಿರಳವಾಗಿ ಸಣ್ಣಮಲ್ಲಿಗೆಮೊಗ್ಗುಗಳಂತೆ ಶುಭ್ರಗಳಾಗಿ ಇರುವ ದಂತಗಳಿಂ ಪ್ರಕಾಶಿಸುವುದಾಗಿ ಲಕ್ಷಣಯುಕ್ತಂಗಳಾದ ನೇತ್ರಗಳುಳ್ಳುದಾಗಿ ಮನೋಹರವಾದ ಮುಗುಳುನಗೆಯೊಡಗೂಡಿ ನಿರಂತರದಲ್ಲೂ ಶೋಭಿಸುವ ಅಂಥ ಸುಂದರವಾದ ಮುಖಕಮಲಯುಗ್ಮವಂ ಪ್ರಿಯನಾದ ಸ್ವಾಮಿಯು ಮೋಹದಿಂದ ಚುಂಬನವಂ ಮಾಡಲಿಲ್ಲವಾದಕಾರಣ ಅಂಥ ಪುಣ್ಯಹೀನಳಾದ ನಾನು ಪುತ್ರರಂ ಪಡೆದು ಪ್ರಯೋಜನವೇನು? ” ಎಂದು ಪೇಳಲು; ತಮಸೆಯು—“ ಎಲೌ ಪುತ್ರಿಯೇ, ದೇವತಾಪ್ರಸಾದದಿಂ ಅದೇರೀತಿ ನಿನ್ನ ಮನೋರಥಪೂರ್ತಿಯಾದೀತು! ” ಎಂದು ಪೇಳಿದಳು. ಸೀತೆಯು—“ ಎಲೌ ಪೂಜ್ಯಳೇ, ಈಗ ಈ ಪುತ್ರರಂ ಸ್ಮರಿಸೋಣದಱಿಂ ಉಬ್ಬಿ ಕ್ಷೀರವಂ ಸ್ರವಿಸುತ್ತಲಿರುವ ಕುಚಗಳುಳ್ಳ ನಾನು ಆ ಪುತ್ರರಿಗೆ ತಂದೆಯಾದ ಈ ಸ್ವಾಮಿಯ ಸನ್ನಿಧಾನದಿಂದಲೂ ಕ್ಷಣಮಾತ್ರವು ಸಂಸಾರಿಣಿಯಾಗಿ ಇರುವೆನಲ್ಲವೆ? ” ಎನಲು; ತಮಸೆಯು,—“ ಎಲೌ ಮಗಳೇ, ನೀನು ಸಂಸಾರಿಣಿಯಾದೆನು ಎಂದು ಪೇಳತಕ್ಕುದೇನು ಇದೆ? ಲೋಕದಲ್ಲಿ ಪುತ್ರರಂ ಪಡೆಯುವುದು ದಂಪತಿಗಳ ಪರಸ್ಪರ ಸ್ನೇಹವೃದ್ಧಿಗೆ ಎಲ್ಲೆ

ಯಾಗಿರುವುದಲ್ಲವೆ ? ಮಾತಾಪಿತೃಗಳ ಪರಸ್ಪರಾಲಿಂಗನವು ಸುಮ್ಮನೆ ಮೋಹವ್ಯಾಪಾರವೇ ಹೊರತು ಆ ಪುತ್ರಲಾಭದಂತೆ ಸ್ನೇಹವೃದ್ಧಿಗೆ ವಿಶ್ರಾಂತಿಸ್ಥಾನವಲ್ಲ. ಅದೆಂತೆನೆ :—ಸಂಸಾರದಲ್ಲಿ ದಂಪತಿಗಳಿಬ್ಬರಿಗೂ ಪುತ್ರನು ಪ್ರೇಮಪಾತ್ರನಾಗಿರುವನಾದಕಾರಣ ಈ ಪುತ್ರನೊಬ್ಬನಲ್ಲಿ ಇಬ್ಬರ ಅಂತಃಕರಣಗಳು ಕೂಡುವುದರಿಂ ಆ ಪುತ್ರನೊಬ್ಬನೇ ಆ ದಂಪತಿಗಳ ಅಂತಃಕರಣಂಗಳಿಗೆ ಆನಂದರೂಪವಾದ ಗ್ರಂಥಿಯೆಂದು ಮಹಾತ್ಮರು ಪೇಳುವರು. ಆದುದರಿಂ ನೀನು ಸಂಸಾರಿಣಿಯು ಎಂಬುವುದರಲ್ಲಿ ಸಂಶಯವೇನು ? '' ಎಂದು ಪೇಳಿದಳು.

ಇತ್ತಲು ವಾಸಂತಿಯು ಶ್ರೀರಾಮನಂ ಕುರಿತು—'' ಸ್ವಾಮಿಯು ಇತ್ತಲು ನೋಡಬೇಕು '' ಎಂದಳು. '' ಪೂರ್ವದಲ್ಲಿ ನಿನ್ನ ಪ್ರಿಯಳಾದ ಸೀತೆಯು ನೂತನವಾಗಿ ಪುಟ್ಟಿರುವ ರಮಣೀಯವಾದ ಚಲಿಸುತ್ತಲಿರುವ ಪಿಂಛವುಳ್ಳ ಯಾವ ಬಾಲಕವಾದ ಮಯೂರವಂ ಪ್ರತಿದಿನದಲ್ಲಿಯೂ ಪೋಷಿಸಿದವಳಾದಳೊ, ಆ ಮಯೂರಪಕ್ಷಿಯು ರತ್ನ ಖಚಿತವಾದ ಕಿರೀಟದಂತೆ ಉನ್ನತವಾದ ಶಿಖೆಯುಳ್ಳುದಾಗಿ ಈಗ ಈ ಕದಂಬವೃಕ್ಷದಲ್ಲಿ ಹೆಣ್ಣುನವಿಲಿನೊಡಗೂಡಿ ಧ್ವನಿಗೈಯುತ್ತಲಿದೆ '' ಎಂದು ಸ್ವಾಮಿಗೆ ನವಿಲಂ ತೋರಿಸಿದಳು.

ಸೀತೆಯು ಕುತೂಹಲದಿಂ ಅದಂ ನೋಡಿ, '' ಈ ನವಿಲು ಅದೇ ಹೌದು '' ಎಂದಳು.

ಶ್ರೀರಾಮನು ಆ ನವಿಲಂ ನೋಡಿ—'' ಎಲೈ ಮಗುವೆ, ಸ್ತ್ರೀಸಮ್ಮತನಾಗಿ ಸಂತೋಷಪಡು, ಸಂತೋಷಪಡು. ನಾವೂ ಇಲ್ಲಿ ವೃದ್ಧಿಯನ್ನೈದುತ್ತೇವೆ. ಎಲೈ ಮಯೂರಪಕ್ಷಿಯೇ, ಪೂರ್ವದಲ್ಲಿ ಸುಂದರಳಾದ ಸೀತೆಯು ಮಂಡಲಾಕಾರಗಳಾದ ಭ್ರಮಣಗತಿಗಳಲ್ಲಿ ಒಳಗೆ ಮಂಡಲಾಕಾರವಾಗಿ ತಿರಿಗಿಸಲ್ಪಟ್ಟ ನೇತ್ರಂಗಳಂ ವಿಶೇಷವಾಗಿ ಚಲಿಸುವುದಾದಕಾರಣ ಚಂಚಲಗಳಾದ ಹುಬ್ಬುಗಳಂ ಕುಣಿಸುವುದರಿಂದ ಚಿಗುರಿನಂತೆ ಕೋಮಲಂಗಳಾದ ಹಸ್ತಂಗಳಿಂ ರಚಿಸಲ್ಪಟ್ಟ ತಾಳಂಗಳಿಂದಲೂ ನಿನ್ನಂ ನರ್ತನಂಗೈಸಿದಳಾದಕಾರಣ ಈಗ ಅಂಥ ಸೀತೆಯಿಂ ಆ ರೀತಿ ನರ್ತನಂಗೈಸಲ್ಪಡುವ ನಿನ್ನಂ ಪುತ್ರನಂತೆ ವಾತ್ಸಲ್ಯ ಪೂರ್ವಕವಾಗಿ ಮನಸ್ಸಿನಿಂದ ಸ್ಮರಿಸುತ್ತೇನೆ. ಎಲೌ, ಪಕ್ಷಿಗಳು ಕೂಡ ಪೂರ್ವಪರಿಚಯುವನ್ನನುಸರಿಸುತ್ತಲಿವೆ. ಅದೇನೆಂದರೆ :—ಪೂರ್ವದಲ್ಲಿ ಪ್ರಿಯಳಾದ ಸೀತೆಯು ಸ್ವಲ್ಪವಾಗಿ ಪುಷ್ಪಂಗಳಂ ಬಿಡುತ್ತಲಿರುವ ಯಾವ ಕದಂಬವೃಕ್ಷವಂ ವೃದ್ಧಿಯನ್ನೈದಿಸಿದಳೊ—'' ಎಂಬದಾಗಿ ಸ್ವಾಮಿಯು ಪೇಳಲು ;

ಅಷ್ಟರೊಳಗೆ ಅದಂ ಕೇಳಿ ಸೀತೆಯು ವ್ಯಸನದಿಂ ನಿಟ್ಟುಸಿರಂಬಿಟ್ಟು, ಕಣ್ಣೀರೊಡಗೂಡಿ, '' ಪತಿಯಾದ ಸ್ವಾಮಿಯು ಈ ಕದಂಬವೃಕ್ಷವಂ ಚೆನ್ನಾಗಿ ಜ್ಞಾಪಿಸಿಕೊಳ್ಳುತ್ತಾನೆ '' ಎನಲು ;

ಶ್ರೀರಾಮನು—'' ಎಲೌ ವನದೇವತೆಯೇ, ಈ ಬಾಲಕವಾದ ಮಯೂರಪಕ್ಷಿಯು ಯಾವ ಕಾರಣದಿಂ ಸೀತೆಯಿಂದ ಪೋಷಿತವಾದ ಈ ಕದಂಬವೃಕ್ಷದಲ್ಲಿ ಕುಳಿತು ಸ್ವಜನದಲ್ಲಿರುವಂತೆ ಪರಮಸಂತೋಷವನ್ನೈದುತ್ತಲಿದೆಯೊ, ಅದುಕಾರಣ ಈ ಮಯೂರಪಕ್ಷಿಯು ತನ್ನ ತಾಯಾದ ಸೀತೆಯಂ ಸ್ಮರಿಸುತ್ತಲಿದೆ '' ಎಂದು ಪೇಳಲು ; ವಾಸಂತಿಯು—'' ಎಲೈ

ಸ್ವಾಮಿಯೇ, ಪೂರ್ವದಲ್ಲಿ ಇದೇ ನಿಮ್ಮ ಆಶ್ರಮಸ್ಥಾನವು. ಇಲ್ಲಿ ಸ್ವಾಮಿಯು ಆಸನ ವಂ ಪರಿಗ್ರಹಿಸಬೇಕು '' ಎಂಬ ವನದೇವತಾವಚನವಂ ಕೇಳಿ ಶ್ರೀರಾಮನು ಕುಳಿತವ ನಾಗಲು ; ಆಗ ವಾಸಂತಿಯು ಸ್ವಾಮಿಯಂ ಕುರಿತು–'' ಎಲೈ ಮಹಾರಾಜನೇ, ಕುಮಾರನಾದ ಲಕ್ಷ್ಮಣಸ್ವಾಮಿಗೆ ಕ್ಷೇಮವೇ ಏನು ? '' ಎಂದು ಪ್ರಶ್ನೆಗೈಯಲು ; ಶ್ರೀರಾ ಮನು ಆ ವಚನವಂ ಕೇಳದಂತೆ ನಟಿಸಿ ಇಂತೆಂದನು :–'' ಪೂರ್ವದಲ್ಲಿ ಸೀತೆಯು ತನ್ನ ಹಸ್ತದಿಂ ಕೊಡಲ್ಪಟ್ಟ ಜಲದಿಂದಲೂ ತೃಣಧಾನ್ಯಗಳಿಂದಲೂ ಎಳೆಯ ಹುಲ್ಲುಗಳಿಂದಲೂ ಯಾವ ವೃಕ್ಷಗಳಂ ಯಾವ ಪಕ್ಷಿಗಳಂ ಯಾವ ಹುಲ್ಲೆಗಳಂ ಸಹ ಪೋಷಿಸಿದಳೋ ಈಗ ಆ ವೃಕ್ಷಾದಿಗಳು ದೃಷ್ಟಿವಿಷಯಗಳಾಗಲು, ಶೋಕದಿಂ ಹೃದಯವೇ ದ್ರವಿಸಿತೋ ಎಂಬಂತೆ, ನಾನಾ ಮುಖವಾಗಿ ಪ್ರಸರಿಸುವುದಕ್ಕೆ ಯೋಗ್ಯವಾಗಿ ಒಂದಾನೊಂದು ವಿಕಾರವು ನನಗೆ ಉಂಟಾಗುತ್ತಲಿದೆ '' ಎಂದು ಸ್ವಾಮಿಯು ಪೇಳಿದನು. ವಾಸಂತಿಯು ಶ್ರೀರಾ ಮನಂ ಕುರಿತು–'' ಎಲೈ ಮಹಾರಾಜನೆ, ನಾನು ಕುಮಾರನಾದ ಲಕ್ಷ್ಮಣನ ಕುಶಲವಂ ಕೇಳುವೆನಲ್ಲವೆ ? '' ಎಂದು ಪುನಃ ಪೇಳಲು ; ಶ್ರೀರಾಮನು ತನ್ನ ಮನಸ್ಸಿನಲ್ಲಿ ಇಂತೆಂದು ಚಿಂತಿಸಿದನು :–'' ಎಲೈ, ಈ ವನದೇವತೆಯು ಈಗ ಮಹಾರಾಜನೆ ಎಂದು ಈ ಮಾತನ್ನಾ ಡಿಸುವುದು ಸ್ನೇಹರಹಿತವಾದುದು. ಲಕ್ಷ್ಮಣನ ವಿಷಯದಲ್ಲಿ ಮಾತ್ರವೇ ಪ್ರೇಮದಿಂ ಕುಶ ಲವಂ ಪ್ರಶ್ನೆಗೈಯುವ ವಚನವು ಕಂಠದಲ್ಲಿ ತುಂಬಿರುವ ಬಾಷ್ಪಜಲದಿಂ ತೊದಲುತ್ತಿ ರುವ ಅಕ್ಷರಗಳುಳ್ಳುದಾಗಿ ಇದೆಯಾದಕಾರಣ ಈ ವಾಸಂತಿಯು ಆ ರೀತಿಯ ಸೀತಾವೃ ತ್ತಾಂತವಂ ತಿಳಿದಿರುವಳೆಂದು ನಾನು ತಿಳಿಯುತ್ತೇನೆ '' ಎಂದು ಮನಸ್ಸಿನಲ್ಲಿ ಚಿಂತಿಸಿ, ಪ್ರಕಟವಾಗಿ, '' ಕುಮಾರನಾದ ಲಕ್ಷ್ಮಣನು ಕ್ಷೇಮಯುಕ್ತನಾಗಿ ಇದ್ದಾನೆ '' ಎಂದು ಸ್ವಾಮಿಯು ಪೇಳಲು ; ಅದಂ ಕೇಳಿ ವಾಸಂತಿಯು ದುಃಖಿಸುತ, '' ಎಲೈ ದೊರೆಯೇ, ಇನ್ನು ನಾನು ಕೇಳತಕ್ಕುದೇನು ಇದೆ ? ನೀನು ಕಠಿನಚಿತ್ತನಾದೆಯಲ್ಲಾ ! '' ಎಂದು ಪೇಳಲು ;

ಅಷ್ಟರೊಳಗೆ ಅದಂ ಕೇಳಿ ಸೀತೆಯು–'' ಎಲೌ ಸಖಿಯಾದ ವಾಸಂತಿಯೇ, ನೀನು ಏನುಕಾರಣ ಈ ರೀತಿ ಕಠಿನವಾಗಿ ಮಾತನಾಡುವೆ; ಗುರುಪುತ್ರನಾದ ಸ್ವಾಮಿಯು ಸಮಸ್ತರಿಗೂ ಪೂಜ್ಯನಲ್ಲವೆ ? ಅದರಲ್ಲೂ ನನಗೆ ಪ್ರಿಯಸಖಿಯಾದ ನಿನಗಾದರೂ ವಿಶೇ ಷವಾಗಿ ಪೂಜ್ಯನಲ್ಲವೆ ? '' ಎಂದಳು.

ವಾಸಂತಿಯು ಸ್ವಾಮಿಯಂ ಕುರಿತು–'' ಎಲೈ ಅರಸೆ, ನೀನು ಕಠಿನಚಿತ್ತನು. ಹೇಗೆಂದರೆ :–ನೀನು ಸೀತೆಯಂ ಕುರಿತು, ನೀನೇ ನನ್ನ ಜೀವವು, ನೀನೇ ಎರಡನೆಯ ಹೃದಯವು, ನೀನೇ ನನ್ನ ನೇತ್ರಗಳಿಗೆ ಚಂದ್ರಿಕೆಯು, ಮತ್ತು ನೀನೇ ನನ್ನ ಶರೀರಕ್ಕೆ ಅಮೃತಸ್ವರೂಪಳು, ಎಂದು ಇವು ಮೊದಲಾದ ಅಪರಿಮಿತಂಗಳಾದ ಪ್ರಿಯವಚನಂಗ ಳಿಂದ ಮೂಢಳಾದ ಸೀತೆಯನನುಸರಿಸಿ ಅಂಥವಳನ್ನೇ–'' ಎಂದು ಪೇಳಿ, ಮುಂದೆ ಪೇಳುವಷ್ಟರೊಳಗೆ ಶೋಕದಿಂ ಮೂರ್ಛೆಯನ್ನೈದಿದಳು.

ಇತ್ತಲು ತಮಸೆಯು ನೋಡಿ–'' ಈ ವಾಸಂತಿಗೆ ಅಂಥವಳನ್ನೇ ಎಂಬಲ್ಲಿಗೆ ವಾಕ್ಯವು ಮುಗಿದುದೂ ಮೂರ್ಛೆಯುಂಟಾದುದೂ ಸಹ ಯುಕ್ತವೇ ಸರಿ '' ಎಂದಳು.

ಶ್ರೀರಾಮನು-" ಎಲೌ ವಾಸಂತಿಯೇ, ದೋಷವಿಲ್ಲ. ಅಥವಾ ಮುಂದೆ ಪೇಳಿ ಫಲವೇನು? ಚಿತ್ತವಂ ಸಂತೈಸು, ಸಂತೈಸು," ಎಂದು ಉಪಚಾರಂಗೈಯಲು ; ವಾಸಂತಿಯು ಸಮಾಧಾನಪಟ್ಟುವಳಾಗಿ-" ಎಲೈ ಅರಸೇ, ನೀನು ಏನುಕಾರಣ ಇಂಥ ಅಕಾರ್ಯವಂ ಮಾಡಿದೆ?" ಎನಲು ;

ಇತ್ತಲು ಸೀತೆಯು-" ಎಲೌ ಸಖಿಯಾದ ವಾಸಂತಿಯೇ, ಇನ್ನು ಸಾಕು, ಸಾಕು" ಎಂದಳು.

ಶ್ರೀರಾಮನು-"ಎಲೌ ವಾಸಂತಿಯೇ, ಏನು ಮಾಡಲಿ? ಲೋಕವು ಸಹಿಸುವುದಿಲ್ಲ" ಎನಲು ; ವಾಸಂತಿಯು-ಏನು ನಿಮಿತ್ತವೆಂದು ಪ್ರಶ್ನೆಗೈದಳು. " ಅದೇನೋ ಆ ಲೋಕವೇ ತಿಳಿಯುವುದು" ಎನಲು ;

ಇತ್ತಲು ತಮಸೆಯು-" ಬಹುಕಾಲಕ್ಕೆ ರಾಮನು ಲೋಕವಂ ನಿಂದಿಸಿದನು" ಎನಲು ;

ವಾಸಂತಿಯು ಶ್ರೀ ರಾಮನಂ ಕುಱಿತು-" ಎಲೈ ಕಠೋರನೇ, ಲೋಕದಲ್ಲಿ ನಿನಗೆ ಕೀರ್ತಿಯು ಇಷ್ಟವಾದುದಲ್ಲವೆ? ಹೀಗಿರುವಲ್ಲಿ ದೋಷರಹಿತಳಾಗಿ ಪೂರ್ಣಗರ್ಭಿಣಿಯಾಗಿಯೂ ಇರುವ ಸೀತೆಯಂ ತ್ಯಾಗಂಗೈದೆ ಎಂಬುದು ಯಾವುದುಂಟೊ ಇನ್ನು ಇದಕ್ಕಿಂತಲು ಘೋರವಾದ ಅಪಕೀರ್ತಿಯುಂಟೆ? ಎಲೈ ದೊರೆಯೇ, ಆದರೂ ಚಿಂತೆಯಿಲ್ಲ, ಹೆಣ್ಣು ಹುಲ್ಲೆಯ ನೇತ್ರಗಳಂತೆ ವಿಶಾಲಗಳಾದ ಚಂಚಲಗಳಾದ ನೇತ್ರಗಳುಳ್ಳ ಆ ಸೀತೆಗೆ ಆ ಅರಣ್ಯದಲ್ಲಿ ಏನು ದಶೆಯಾಯಿತು ಪೇಳುವನಾಗು. ಕಟಕಟಾ! ನೀನು ಯಾವ ಪ್ರಕಾರದಿಂ ತಿಳಿಯುತ್ತಲಿದ್ದೀಯೆ?" ಎಂಬ ವಾಸಂತಿಯ ವಚನವಂ ಕೇಳಿ,

ಇತ್ತಲು ಸೀತೆಯು-" ಎಲೌ ಸಖಿಯಾದ ವಾಸಂತಿಯೇ, ಯಾವ ನೀನು ನನ್ನ ನಿಮಿತ್ತ ಈರೀತಿ ದುಃಖಿಸುವಳಾಗಿ ಗುರುಜನರಿಗೆ ಪುತ್ರನಾದ ಸ್ವಾಮಿಯಂ ಕೂಡ ಅತ್ಯಂತವಾಗಿ ದುಃಖಪಡಿಸುವೆಯೊ, ಅಂಥ ನೀನೇ ಭಯಂಕರಳು, ಕಠೋರಳು ಸಹ ಆಗುತ್ತೀಯೆ" ಎಂದು ನಿಂದಿಸಲು ; ತಮಸೆಯು ಸೀತೆಯಂ ಕುಱಿತು-" ಎಲೌ ಮಗಳೇ, ಈ ವಾಸಂತಿಯು ಸ್ವಾಮಿಯಂ ಭಯಂಕರನೆಂದು, ಕಠೋರನೆಂದು ಸಹ ಪೇಳುವುದಿಲ್ಲ, ಮತ್ತೇನೆಂದರೆ : ಈ ವಾಸಂತಿಗೆ ನಿನ್ನಲ್ಲಿರುವ ಸ್ನೇಹವು ಶೋಕವು ಸಹ ಈರೀತಿ ಪೇಳಿಸುವುದೆ ಹೊಱತು ಮತ್ತೊಂದಲ್ಲ" ಎಂದು ಪೇಳಿದಳು.

ಶ್ರೀರಾಮನು :-" ಎಲೌ ಸಖಿಯಾದ ವಾಸಂತಿಯೇ, ನೀನು ಅರಣ್ಯದಲ್ಲಿ ಸೀತೆಗೆ ಏನು ದೆಸೆಯಾಯಿತೆಂದು ಮಾಡಿದ ಪ್ರಶ್ನೆಗೆ ನಾನು ಏನು ಉತ್ತರವಂ ಪೇಳಲಿ? ಭಯಯುಕ್ತವಾಗಿ ಒಂದು ವರ್ಷವಯಸ್ಸುಳ್ಳುದಾಗಿಯು ಇರುವ ಹುಲ್ಲೆಮಱಿಯಂತೆ ಅತಿ ಚಂಚಲಗಳಾದ ದೃಷ್ಟಿಗಳುಳ್ಳವಳಾಗಿ, ಪೂರ್ಣಗರ್ಭಿಣಿಯಾದಕಾರಣ ಉದರದಲ್ಲಿ ಸುತ್ತಲು ಚಲಿಸುವ ಗರ್ಭದ ಭಾರದಿಂ ಆಲಸ್ಯಯುಕ್ತಳಾಗಿಯೂ ಇರುವ ಆ ಸೀತೆಯ ಬೆಳುದಿಂಗಳಂತೆ ನೇತ್ರಾನಂದಕರವಾಗಿ ಸಂತಾಪಹರವಾಗಿಯೂ ಮೃದುವಾದ ಎಳೆಯ ತಾವರೆದಂಟಿನಂತೆ ಅತಿಕೋಮಲವಾಗಿಯೂ ಬಳ್ಳಿಯಂತೆ ಬಳುಕುವ ದೇಹವು ಮಾಂಸಭಕ್ಷಕಂಗಳಾದ ವ್ಯಾಘ್ರಾದಿದುಷ್ಟಮೃಗಗಳಿಂ ಭಕ್ಷಿಸಲ್ಪಟ್ಟಿತು. ಈ ಅರ್ಥವು ನಿಶ್ಚಯವೇ

ಸರಿ'' ಎಂದು ಪೇಳಿದನು. ಆ ಬಳಿಕ ವಾಸಂತಿಯು–'' ಎಲೈ ಸ್ವಾಮಿಯೇ, ಪೂರ್ವದಲ್ಲಿ ನಿಬಿಡವಾಗಿರುವ ಬಾಲಕದಳೀವೃಕ್ಷಗಳ ವನಮಧ್ಯದಲ್ಲಿರುವ ವಿಶಾಲವಾದ ಈ ಶಿಲೆಯು ಸೀತಾಸಮೇತನಾದ ನಿನಗೆ ಮಂಚವಾಗಿ ಇದ್ದಿತಲ್ಲವೆ ನೋಡು. ಪೂರ್ವದಲ್ಲಿ ಸೀತೆಯು ಈ ಶಿಲೆಯಲ್ಲಿ ಕುಳಿತಿರುವಳಾಗಿ ಹುಲ್ಲೆಗಳಿಗೋಸುಗ ತೃಣಗಳಂ ಕೊಟ್ಟಿಳಾದಕಾರಣ ಈಗಲೂ ಆ ಹುಲ್ಲೆಗಳು ಈ ಶಿಲೆಯಂ ಬಿಡುವುವಾಗಲಿಲ್ಲ!'' ಎಂದು ಪೇಳಿದಳು. ಶ್ರೀ ರಾಮನು–ಇದು ನೋಡಲು ಶಕ್ಯವಲ್ಲವೆಂದು ದುಃಖಿಸುತ್ತ ಮತ್ತೊಂದು ಕಡೆಯಲ್ಲಿ ಕುಳಿತವನಾಗಲು;

ಇತ್ತಲು ಸೀತೆಯು–ಎಲೌ ಸಖಿಯಾದ ವಾಸಂತಿಯೇ, ನೀನು ಪತಿಯಾದ ಸ್ವಾಮಿಗೂ ನನಗೂ ಈ ಶಿಲೆಯಂ ತೋಱುಸುವಳಾಗಿ ಏನು ಏನು ಉಪಕಾರವಂ– ಕಟಾಕಟಾ! ನನ್ನ ಜನ್ಮವಂ ನಿಂದಿಸು ನಿಂದಿಸು, ಈಗಲೂ ಅದೇ ಪ್ರಿಯನಾದ ಸ್ವಾಮಿಯು, ಅದೇ ಪಂಚವಟೀವನವು, ಅವಳೇ ಪ್ರಿಯಸಖಿಯಾದ ವಾಸಂತಿಯು, ಅವೇ ನಾನಾಪ್ರಕಾರಂಗಳಾದ ವಿಲಾಸಗಳಿಗೆ ಸಾಕ್ಷಿಗಳಾದ ಗೋದಾವರೀತೀರದಲ್ಲಿರುವ ವನಪ್ರದೇಶಗಳು, ಅವೇ ಮಕ್ಕಳಿಗಿಂತಲು ಅತಿಪ್ರೇಮಪಾತ್ರಂಗಳಾದ ಮೃಗಗಳು, ಪಕ್ಷಿಗಳು ವೃಕ್ಷಗಳು ಸಹ ಅವೇ: ಭಾಗ್ಯಹೀನಳಾದ ನನಗಾದರೊ ಈ ಸಮಸ್ತವೂ ಪ್ರತ್ಯಕ್ಷವಾಗಿ ಇದ್ದರೂ ಒಂದೂ ಇಲ್ಲ. ಇನ್ನು ನಾನು ವ್ಯಸನಪಟ್ಟು ಫಲವೇನು? ಲೋಕದಲ್ಲಿ ಪ್ರಾಣಿಗಳ ಗತಿಯು ಇಂಥದು–ಎಂದು ವ್ಯಸನಪಟ್ಟಳು.

ವಾಸಂತಿಯು ಸ್ವಾಮಿಯ ದುಃಖವಂ ನೋಡಿ,–'' ಎಲೌ ಸಖಿಯಾದ ಸೀತೆಯೇ, ಈ ರಾಮನ ದುಃಖಾವಸ್ಥೆಯಂ ನೀನು ನೋಡುವುದಿಲ್ಲವೆ ಏನು? ನೂತನವಾದ ಕನ್ನೈದಿಲೆಯಂತೆ ಶ್ಯಾಮಲವರ್ಣಗಳಾಗಿ ಮಿಂಚುತ್ತಲಿರುವ ತನ್ನ ಅಂಗಗಳಿಂದ ನಮಗೆ ನೇತ್ರೋತ್ಸವವನ್ನುಂಟುಮಾಡುವ ಯಾವ ಶ್ರೀ ರಾಮನು ನಿರಂತರದಲ್ಲಿಯೂ ಮನಸ್ಸು ಬಂದಂತೆ ನೋಡಲು ಶಕ್ಯನಾದರೂ ನೂತನ ನೂತನವಾಗಿಯೇ ತೋಱುತ್ತಲಿದ್ದನೊ, ಅದೇ ಶ್ರೀರಾಮನು ಈಗ ದೀನಗಳಾದ ಇಂದ್ರಿಯಂಗಳುಳ್ಳವನಾಗಿ, ಶುಭ್ರವಾದ ಶರೀರ ವರ್ಣವುಳ್ಳವನಾಗಿ, ದುಃಖದಿಂ ಅತಿದುರ್ಬಲನಾಗಿ, ಅತಿಪ್ರಯಾಸದಿಂ ಶ್ರೀ ರಾಮನೆಂದು ಊಹಿಸಲು ಯೋಗ್ಯನಾಗಿ ಸಹ ಇದ್ದರೂ ನಮ್ಮ ನೇತ್ರಗಳಿಗೆ ಇಷ್ಟನಾಗಿ ಇದ್ದಾನೆ'' ಎಂಬ ವಾಸಂತಿಯ ವಚನವಂ ಕೇಳಿ,

ಇತ್ತಲು ಸೀತೆಯು,–'' ನೋಡುತ್ತೇನೆ, ಸಖಿಯೇ ನೋಡುತ್ತೇನೆ'' ಎನಲು; ತಮಸೆಯು ಸೀತೆಯಂ ಕುಱಿತು–'' ಎಲೌ ಮಗಳೆ, ಪ್ರಿಯನಂ ಚೆನ್ನಾಗಿ ನೋಡು.'' ಎಂದಳು. ಸೀತೆಯು ಶ್ರೀರಾಮನಂ ಚೆನ್ನಾಗಿ ನೋಡಿ–'' ಹಾ ದೈವವೇ! ಪ್ರಿಯನು ನನ್ನಿಂದ ವಿರಹಿತನಾಗಿ ನಾನು ಈ ಪ್ರಿಯನಿಂದ ವಿರಹಿತಳಾಗಿ ಇರಬೇಕೆಂಬುದು ಏನೋ ಕರ್ಮವಿಶೇಷದಿಂ ಸಂಭವಿಸಿತಾದಕಾರಣ ಒಂದು ಮುಹೂರ್ತವಾದರೂ ಕಾಂತನಂ ನೇತ್ರಗಳಲ್ಲಿ ತುಂಬಿರುವ ಬಾಷ್ಪಜಲವು ಕೆಳಕ್ಕೆ ಸ್ರವಿಸಿ ಪುನಃ ತುಂಬುವಷ್ಟಱೊಳಗೆ ನೋಡುತ್ತೇನೆ'' ಎಂದು ಸೀತೆಯು ಸ್ವಾಮಿಯಂ ನೋಡುತ್ತಲಿರಲು; ತಮಸೆಯು ಸೀತೆಯಂ ನೋಡಿ ಸ್ನೇಹದೊಡನೆಯು ಕಣ್ಣೀರೊಡನೆಯೂ ಕೂಡಿದವಳಾಗಿ,–'' ಎಲೌ

ಮಗಳೆ, ನೇತ್ರಗಳಲ್ಲಿ ಉಕ್ಕಿ ಅತ್ಯಂತವಾಗಿ ಪ್ರವಹಿಸುವುದಱಿಂ ಹೊರಳುತ್ತಲಿರುವ ಆನಂದದಿಂ ಶೋಕದಿಂದಲೂ ಜನಿಸಿದ ಬಾಷ್ಪಜಲವಂ ಸ್ರವಿಸುವುದಾಗಿ, ನಿಬಿಡಂಗಳಾದ ರೆಪ್ಪೆಗಳುಳ್ಳುದಾದಕಾರಣ ಉನ್ನತವಾಗಿ ದೀರ್ಘವಾಗಿ ಸ್ನೇಹರಸವಂ ಸ್ರವಿಸುತ್ತಲಿರುವ ನಿನ್ನ ದೃಷ್ಟಿಯು ಸ್ವಚ್ಛವಾಗಿ ಮಧುರವಾಗಿ ಸುಂದರವಾಗಿಯೂ ಇರುವುದಾದ ಕಾರಣ ಸ್ವಲ್ಪವಾದ ಕ್ಷೀರನದಿಯಂತೆ ಸರ್ವಕಾಲದಲ್ಲೂ ಹೃದಯದಲ್ಲಿ ವಾಸಂಗೈಯುವ ಪ್ರಾಣಕಾಂತನಂ ಅಭಿಷೇಕವಂ ಮಾಡುತ್ತಲಿದೆ '' ಎಂದು ಪೇಳಿದಳು.

ಅತ್ತಲು ವನದೇವತೆಯಾದ ವಾಸಂತಿಯು ಏನೋ ಒಂದು ಕಾರಣದಿಂದ ಪುನಃ ಜನಸ್ಥಾನಕ್ಕೆ ಬಂದಿರುವ ಶ್ರೀರಾಮನಂ ಉಪಚಾರಂಗೈಯಲೋಸುಗ ವೃಕ್ಷಾದಿಗಳ ನ್ನಾಜ್ಞಾಪಿಸಿದಳು. ಅದೆಂತೆನೆ :-'' ಎಲೆ, ಭೂಪತಿಯಾದ ಶ್ರೀರಾಮನು ಏನೋ ನಿಮಿತ್ತದಿಂ ಪುನಃ ತಾನೇ ಈ ವನಕ್ಕೆ ಬಂದವನಾದಕಾರಣ ಮಕರಂದರಸವಂ ಸ್ರವಿಸುತ್ತಲಿರುವ ವೃಕ್ಷಗಳು ಪುಷ್ಪಗಳಿಂದಲೂ ಫಲಗಳಿಂದಲೂ ಸ್ವಾಮಿಗೆ ಅರ್ಘ್ಯವಂ ಕೊಡುವುವಾಗಲಿ ! ಈ ವನವಾಯುಗಳು ವಿಕಸಿತಂಗಳಾದ ಕಮಲಗಳ ಪರಿಮಳಗಳಿಂ ಪರಿಪೂರ್ಣಗಳಾಗಿ ಮೆಲ್ಲಮೆಲ್ಲನೆ ಬೀಸುವುವಾಗಲಿ ! ಮತ್ತು ಸರಳವಾದ ಕಂಠಸ್ವರವುಳ್ಳ ಕೋಕಿಲಪಕ್ಷಿಗಳು ಮಧುರವಾಗಿ ಅವಿಚ್ಛಿನ್ನವಾಗಿಯೂ ಧ್ವನಿಗೈಯುವುವಾಗಲಿ ! '' ಎಂದು ಆಜ್ಞಾಪಿಸಲು ;

ಶ್ರೀರಾಮನು- '' ಎಲೌ ಸಖಿಯಾದ ವಾಸಂತಿಯೆ, ಇತ್ತ ಬಾ, ಇಲ್ಲಿ ಕುಳಿತುಕೊ '' ಎಂದು ಪೇಳಿದನು. ವಾಸಂತಿಯು ಸಮೀಪದಲ್ಲಿ ಕುಳಿತವಳಾಗಲು ; ಶ್ರೀರಾಮನು- '' ಎಲೌ ಸಖಿಯೇ, ಅರಣ್ಯದಲ್ಲಿ ಸೀತೆಗೆ ಏನು ದೆಸೆ ಆಯಿತೆಂದು ನೀನು ಮಾಡಿದ ಪ್ರಶ್ನೆಗೆ ಏನು ಉತ್ತರವಂ ಕೊಡಲಿ ! ಪೂರ್ಣಗರ್ಭಿಣಿಯಾದ ಸೀತೆಯ ಅಂಥ ನೇತ್ರಾನಂದಕರವಾದ ಸುಂದರವಾದ ದೇಹವಂ ಮಾಂಸಭಕ್ಷಕಂಗಳಾದ ವ್ಯಾಘ್ರಾದಿಗಳು ಭಕ್ಷಿಸಿದಂಥವಾದುವೆಂದು ನಾನು ನಿಶ್ಚೈಸಿಕೊಂಡು ಇದ್ದೇನೆ '' ಎಂದು ಪೇಳಲು ;

ಇತ್ತಲು ಸೀತೆಯು ಅದಂ ಕೇಳಿ-'' ಎಲೈ ಕಾಂತನೆ, ಈ ನಾನು ಈ ದೇಹವಂ ಧರಿಸುತ್ತಲಿದ್ದೇನೆ '' ಎಂದು ವ್ಯಸನದಿಂ ಪೇಳಿದಳು.

ಶ್ರೀರಾಮನು-'' ಹಾ ! ಪ್ರಿಯಳಾದ ಸೀತೆಯೇ ! ಎಲ್ಲಿ ಇರುವೆ ? ಕಟಕಟಾ ! '' ಎನಲು ;

ಸೀತೆಯು-'' ಕಟಕಟ ! ನನ್ನ ಜನ್ಮವ ನಿಂದಿಸು ; ಅನ್ಯನಂತೆ ಕಾಂತನಾದ ಸ್ವಾಮಿಯು ಪುನಃ ಚೆನ್ನಾಗಿ ಕಂಠಸ್ವರವಂ ಬಿಡುತ್ತ ದುಃಖಿಸುತ್ತಲಿದ್ದಾನೆ, '' ಎನಲು ; ತಮಸೆಯು ಸೀತೆಯಂ ಕುಱಿತು-'' ಎಲೌ ಮಗಳೇ, ನಿನ್ನ ನಿಮಿತ್ತವಾಗಿ ಸ್ವಾಮಿಯು ಈ ರೀತಿದುಃಖಿಸುವುದುಚಿತವೇ ಸರಿ. ದುಃಖಯುಕ್ತರಾಗಿರುವ ಜನರು ಯಾವ ತೆಱದಿಂದಲಾದರೂ ದುಃಖ ಶಾಂತಿಯಂ ಮಾಡಿಕೊಂಬುದು ಆಗ ಬೇಕಲ್ಲ. ಯಾವ ರೀತಿ ಲೋಕದಲ್ಲಿ ಜನರು ಮಹಾವೃಷ್ಟಿಜಲದಿಂ ತಟಾಕಕ್ಕೆ ಉಪದ್ರವವುಂಟಾದಲ್ಲಿ ಕೋಡಿಯಂ ವಿಸ್ತರಿಸಿ ಅಲ್ಲಿಂದ ಜಲವು ಪ್ರವಹಿಸುವಂತೆ ಮಾಡಿ ಆ ತಟಾಕದ ಉಪದ್ರವವಂ ಪರಿಹರಿಸಿಕೊಳ್ಳುವರೊ, ಅದೇ ರೀತಿ ದುಃಖಿತರಾದ ಜನರು ಶೋಕವೇಗದಿಂ ಹೃದಯಕ್ಕೆ ಉಪದ್ರವವುಂಟಾದಲ್ಲಿ

ಬಹುಪ್ರಕಾರವಾಗಿ ದುಃಖಿಸೋಣದಱಿಂದಲೇ ಹೃದಯುವಂ ಧರಿಸುತ್ತಾರೆ. ಅದಱಲ್ಲಿಯೂ ಈ ರಾಮಭದ್ರನ ಹೃದಯವು ವಿಶೇಷದಿಂ ದುಃಖಯುಕ್ತವಾಗಿರುವುದು. ಈ ರಾಮನಿಗೆ ಈಜೀವಲೋಕವು ಬಹುಪ್ರಕಾರಂಗಳಿಂದಲು ಕಷ್ಟಕ್ಕೆ ಕಾರಣವಾಗಿ ಇದೆ, ಅದೆಂತೆನೆ :— ಎಲೌ ಮಗಳೆ, ಶ್ರೀರಾಮನು ಈರೀತಿ ನಿನ್ನ ವಿರಹಾಗ್ನಿಯಿಂ ಅತಿತಪ್ತನಾಗಿದ್ದರೂ ಈ ಜಗತ್ತನ್ನು ನೀತಿಶಾಸ್ತ್ರಯುಕ್ತವಾಗಿ ಏಕಾಗ್ರವಾದ ಚಿತ್ತದಿಂ ಪಾಲಿಸುವನಾಗಬೇಕು. ಒಂದುಕಡೆಯಲ್ಲಿ ಪ್ರಿಯಳಾದ ನಿನ್ನ ವಿಷಯದಲ್ಲಿರುವ ಶೋಕವು ಈ ರಾಮನ ಜೀವವಂ ಗ್ರೀಷ್ಮಕಾಲವು ಪುಷ್ಪವಂ ಬಾಡಿಸುವಂತೆ ಬಾಡಿಸುತ್ತಲಿದೆ. ಇದಲ್ಲದೆ ಲೋಕನಿಮಿತ್ತವಾಗಿ ತಾನೇ ನಿನ್ನ ತ್ಯಾಗಂಗೈದವನಾದುದಱಿಂ ದುಃಖಿಸೋಣದಱಿಂದಲೂ ಕೂಡ ಕಾಲಹರಣವಂ ಮಾಡುವುದು ಸಹ ದುರ್ಲಭವಾಗಿ ಇರುವುದಾದಕಾರಣ ಈಗಲಾದರೂ ಈ ರಾಮನಿಗೆ ಚಿತ್ತಸಮಾಧಾನವುಂಟಾಗಲಿ, ಈ ಅರಣ್ಯದಲ್ಲಿ ಈರೀತಿ ದುಃಖಿಸೋಣವೇ ಈ ಸ್ವಾಮಿಗೆ ಪರಮ ಪ್ರಯೋಜನವಲ್ಲವೆ ?'' ಎಂದು ತಮಸೆಯು ಪೇಳಲು ;

ಅತ್ತಲು ಶ್ರೀರಾಮನು ವ್ಯಸನಪಡುವನದೆಂತೆನೆ :—ಎಲೈ ಕಷ್ಟವು, ಕಷ್ಟವು ! ನನ್ನ ಹೃದಯವು ದೃಢವಾದ ವಿರಹವೇದನೆಯುಳ್ಳುದಾದಕಾರಣ ಸೀಳುತ್ತಲಿದೆಯೆ ಹೊಱತು ಎರಡು ಭಾಗಗಳಾಗುವುದಿಲ್ಲ. ದುಃಖಾನುಭವದಿಂ ದುರ್ಬಲವಾದ ಈ ನನ್ನ ದೇಹವು ಬಾರಿಬಾರಿಗೂ ಮೂರ್ಛೆಹೊಂದುವುದೇ ಹೊಱತು ಚೈತನ್ಯವಂ ಬಿಡುವುದಿಲ್ಲ. ಮತ್ತು ಒಂದಾನೊಂದು ಸಂತಾಪವು ದೇಹವಂ ಒಳಗೆ ಮಾತ್ರವೆ ಜ್ವಲಿಸುವಂತೆ ಮಾಡುತ್ತಲಿದೆಯೇ ಹೊಱತು ಈ ದೇಹವಂ ಭಸ್ಮವನ್ನಾಗಿ ಮಾಡುವುದಿಲ್ಲ. ದೈವವೂ ಕೂಡ ಮರ್ಮಸ್ಥಾನಗಳಂ ಭೇದಿಸುತ್ತ ಕೊಲ್ಲುವುದೆ ಹೊಱತು ಜೀವವಂ ಕತ್ತರಿಸುವುದಿಲ್ಲ—ಎಂದು ಸಂತಾಪಪಡುತ ಸ್ವಾಮಿಯು ತಾನು ಜನರ ನಿಮಿತ್ತವಾಗಿ ಸೀತೆಯಂ ತ್ಯಾಗಂಗೈದುದಱಿಂದ ಅರಣ್ಯದಲ್ಲಿಯೂ ಆ ಜನವಂ ಕುಱಿತು ಈರೀತಿ ಬೇಡಿಕೊಂಬನದೆಂತೆನೆ :— ಎಲೈ, ಪೂಜ್ಯರಾದ ಅಯೋಧ್ಯಾಪುರದಲ್ಲಿರುವ ಜನರುಗಳಿರಾ, ಎಲೈ ದೇಶದಲ್ಲಿರುವ ಜನರುಗಳಿರಾ, ಪ್ರಿಯಳಾದ ಸೀತೆಯು ನಮ್ಮ ಗೃಹದಲ್ಲಿ ವಾಸಮಾಡುವುದು ನಿಮಗೆ ಸಮ್ಮತವಲ್ಲವಾದುದಱಿಂ ನಾನು ಸೀತೆಯಂ ತೃಣದಂತೆ ತ್ಯಾಗಂಗೈದೆನು. ಇಂಥ ಪ್ರಿಯಳಂ ತ್ಯಜಿಸಿದೆನಲ್ಲ ಎಂದು ನಾನು ಆ ಪ್ರಿಯಳಂ ಕುಱಿತು ಪಶ್ಚಾತ್ತಾಪದಿಂ ದುಃಖಿಸಿದವನು ಸಹ ಆಗಲಿಲ್ಲ. ಈಗ ಒಂದು ಕಾರಣಾಂತರದಿಂ ಪುನಃ ಈ ಜನಸ್ಥಾನಕ್ಕೆ ನಾನು ಬಂದೆನಾದಕಾರಣ ಇಲ್ಲಿ ಸೀತಾಸಮೇತನಾಗಿ ಇದ್ದ ನನ್ನಿಂದ ಬಹುಪರಿಚಯ ಮಾಡಲ್ಪಟ್ಟುವಾಗಿ, ದಂಪತಿಗಳಾದ ನಮ್ಮ ವಿಹಾರಂಗಳಿಗೆ ಸಾಕ್ಷಿಗಳಾದುದಱಿಂ ಆ ಪೂರ್ವಸುಖಾತಿಶಯವಂ ಸ್ಮರಿಸುವಂತೆ ಮಾಡುತ್ತಲಿರುವ ಆಯಾ ಮೃಗಪಕ್ಷಿವೃಕ್ಷಗಳು ಮೊದಲಾದ ದೀಪನಭಾವಂಗಳು ನನ್ನ ಹೃದಯವಂ ದ್ರವಿಸುವಂತೆ ಮಾಡುತ್ತಲವೆಯಾದ ಕಾರಣ ರಕ್ಷಕರಹಿತನಾಗಿರುವ ನಾನು ಈಗ ದುಃಖಿಸುತ್ತೇನೆ. ಈ ಅರ್ಥದಲ್ಲಿ ನೀವು ಕೋಪವಂ ಮಾಡದೆ ಪ್ರಸನ್ನರಾಗಬೇಕು—ಎಂದು ಜನರಂ ಕುಱಿತು ಪ್ರಾರ್ಥಿಸಲು ;

ಇತ್ತಲು ತಮಸೆಯು ಅದಂ ಕೇಳಿ, ಸ್ವಾಮಿಯು ಜನರಲ್ಲಿ ತನಗೆ ಇರುವ ಕೋಪಾತಿಶಯವಂ ಅತಿಗಂಭೀರವಾಗಿ ತೋಱಿಸಿದನೆಂದಳು.

ವಾಸಂತಿಯು–" ಎಲೈ ರಾಮನೇ, ಅತಿಕ್ರಮಿಸಿಪೋಗಿರುವ ವಿಷಯದಲ್ಲಿ ನೀನು ಧೈರ್ಯವಂ ಮಾಡತಕ್ಕುದೆ ಹೊಱತು ವ್ಯಸನಪಡುವುದು ಯುಕ್ತವಲ್ಲವು" ಎಂದಳು. ಅದಂ ಕೇಳಿ ಶ್ರೀರಾಮನು–" ಎಲೌ ಸಖಿಯಾದ ವಾಸಂತಿಯೇ, ನೀನು ನನ್ನಂ ಕುಱಿತು ಧೈರ್ಯವಂ ಮಾಡಬೇಕೆಂದು ಪೇಳುವೆಯ ಏನು ? ಸೀತೆಯಿಂದ ಶೂನ್ಯವಾದ ಈ ಜಗತ್ತಿಗೆ ಹನ್ನೆರಡನೆಯ ಸಂವತ್ಸರವು ನಡೆಯುತ್ತಲಿದೆ. ಆ ಪ್ರಿಯಳ ವೃತ್ತಾಂತವಂತಿರಲಿ. ಆ ಸೀತೆಯ ನಾಮಧೇಯವೂ ಕೂಡ ನಷ್ಟವಾದಂತೆ ತೋಱುತ್ತಲಿದೆ. ಹೀಗೆ ಆದರೂ ರಾಮನು ಜೀವಿಸುವುದಿಲ್ಲವೆಂಬ ಅರ್ಥವು ಇಲ್ಲವಲ್ಲ! ಅದುಕಾರಣ ಲೋಕದಲ್ಲಿ ನಾನೇ ಧೈರ್ಯವಂತನು" ಎಂದು ಪೇಳಲು ;

ಇತ್ತಲು ಸೀತೆಯು ಅದಂ ಕೇಳಿ–" ಈ ಪ್ರಿಯನ ಈ ವಚನಗಳಿಂ ನಾನು ಮೋಹಯುಕ್ತಳಾದೆನು" ಎಂದಳು. ತಮಸೆಯು–" ಎಲೌ ಮಗಳೆ, ಈ ಸ್ವಾಮಿಯ ವಚನಂಗಳು ಸ್ನೇಹದಿಂ ಸರಸಗಳಾಗಿ ಶೋಕದಿಂ ತೀಕ್ಷ್ಣಗಳಾಗಿಯೂ ಇರುವುವಾದ ಕಾರಣ ಇವು ಅತ್ಯಂತ ಇಷ್ಟಗಳಲ್ಲದೆ ವಿಷಮಿಶ್ರಗಳಾದ ಅಮೃತಧಾರೆಗಳಾಗಿ ನಿನ್ನಲ್ಲಿ ಸ್ರವಿಸುತ್ತಲಿವೆ" ಎಂದಳು.

ಇತ್ತಲು ಶ್ರೀರಾಮನು ವಾಸಂತಿಯಂ ಕುಱಿತು–" ಎಲೌ ಸಖಿಯೇ, ಇಷ್ಟುಮಾತ್ರವಲ್ಲ, ಮತ್ತೂ ದೇಹದಲ್ಲಿ ಅಡ್ಡಲಾಗಿ ತಗಲಿರುವ ಕೋಲ ತುಂಡಿನಂತೆ ವಿಷಯುಕ್ತವಾಗಿ, ಒಳಗೆ ತಗಲಿಕೊಂಡಿರುವ ದಂತದಂತೆಯೂ ಅತಿತೀಕ್ಷ್ಣವಾಗಿ, ಹೃದಯದಲ್ಲಿ ತಗಲಿಕೊಂಡು ಮರ್ಮಸ್ಥಾನಂಗಳಂ ಕತ್ತರಿಸುತ್ತಲಿದ್ದರೂ ಅಂಥ ಶೋಕವೆಂಬ ಶಲ್ಯವಂ ನಾನು ಸಹಿಸಲಿಲ್ಲವೆ ಏನು ? " ಎನಲು ;

ಅದಂ ಕೇಳಿ ಸೀತೆಯು–" ಎಲೌ ತಾಯೇ, ಅಲ್ಪಭಾಗ್ಯಳಾದ ನಾನು ಈ ರೀತಿ ಪ್ರಿಯನಾದ ಸ್ವಾಮಿಯು ಬಾರಿಬಾರಿಗೂ ವಿರಹತಾಪದಿಂ ಆಯಾಸಪಡುವುದಕ್ಕೆ ಕಾರಣವಾದೆನು" ಎಂದಳು.

ಇತ್ತಲು ಶ್ರೀರಾಮನು–" ಎಲೌ ವಾಸಂತಿಯೇ, ಈ ರೀತಿ ಅತಿಗೂಢವಾಗಿ ತಪಿಸಲ್ಪಟ್ಟ ಅಂತಃಕರಣವುಳ್ಳವನಾದರೂ ನನಗೀಗ ಪೂರ್ವದಲ್ಲಿ ಪರಿಚಯಮಾಡಲ್ಪಟ್ಟ ಮೃಗ ಪಕ್ಷಿ ವೃಕ್ಷ ಮೊದಲಾಗಿರುವ ವಸ್ತುಗಳ ಸಮೂಹಗಳಂ ನೋಡುವುದಱಿಂ ಈಗ ಈ ಮಹತ್ತಾದ ಶೋಕವೇಗವು ಉಂಟಾಗುತ್ತಲಿದೆ. ಅದೆಂತೆನೆ :–ಶೋಕವೇಗ ವಿಲಾಸಂಗಳ ಮಹಾತರಂಗಗಳಿಂ ಅತಿವ್ಯಾಕುಲವಾಗಿರುವ ಅಂತಃಕರಣದ ಪ್ರಕೋಪಾವಸ್ಥೆಯಂ ಸ್ತಂಭಿಸುವುದಕ್ಕೋಸ್ಕರ ನಾನು ಮನಸ್ಸಿನಲ್ಲಿ ಯಾವ ಯಾವ ಪ್ರಯತ್ನವಂ ಊಹಿಸುವೆನೊ ಆಯಾ ಪ್ರಯತ್ನವೊಂದಾನೊಂದು ಮನೋವಿಕಾರವಂ, ತಡೆಯಲು ಶಕ್ಯವಲ್ಲದೆ ಇರುವ ವೇಗವುಳ್ಳ ಜಲಪ್ರವಾಹವು ಮಳಲಿನ ಕಟ್ಟೆಯಂತೆ, ಬಲಾತ್ಕಾರದಿಂ ಭೇದಿಸಿ ಭೇದಿಸಿ ಹೊಱಕ್ಕೆ ಪ್ರಸರಿಸುತ್ತಲಿದೆ."

ಎಂಬ ಶ್ರೀರಾಮನ ವಚನವಂ ಕೇಳಿ ಇತ್ತಲು ಸೀತೆಯು–" ಈ ಪ್ರಿಯನಾದ ಸ್ವಾಮಿಯ ತಡೆಯಲಶಕ್ಯವಾದ ಭಯಂಕರವಾದ ಪ್ರಾರಂಭವುಳ್ಳ ದುಃಖವೇಗದಿಂ ಅಪಹರಿಸಲ್ಪಟ್ಟ ತನ್ನ ದುಃಖವುಳ್ಳುದಾಗಿ ನನ್ನ ಹೃದಯವು ಒಡೆಯುತ್ತಲಿದೆ" ಎಂದು ಹೇಳಿದಳು

ವಾಸಂತಿಯು ಸ್ವಾಮಿಯ ದುಃಖವಂ ನೋಡಿ ತನ್ನ ಮನಸ್ಸಿನಲ್ಲಿ–"ಶ್ರೀರಾಮನು ಅತ್ಯಂತವಾಗಿ ದುಃಖದಲ್ಲಿ ಆಸಕ್ತನಾದನು. ಅದುಕಾರಣ ನಾನು ಮತ್ತೊಂದು ಪ್ರಸ್ತಾಪದಿಂದ ಈ ದುಃಖವೇಗವಂ ತಪ್ಪಿಸುತ್ತೇನೆ." ಎಂದು ಚಿಂತಿಸಿ, ಸ್ವಾಮಿಯಂ ಕುಱಿತು–"ಎಲೈ ಅರಸೆ, ಬಹುಕಾಲ ಪರಿಚಯಮಾಡಲ್ಪಟ್ಟ ಈ ಜನಸ್ಥಾನದ ಪ್ರದೇಶಗಳಂ ನೀನು ನೋಡಿ ಬಹುಮಾನಂಗೈಯುವನಾಗು." ಎಂದು ಪೇಳಲು ; ಶ್ರೀರಾಮನು "ಹಾಗೆ ಆಗಲಿ" ಎಂದನು.

ಆ ಬಳಿಕ ಅವರಿರ್ವರು ಜನಸ್ಥಾನಗಳಲ್ಲಿ ಆಯಾ ಪ್ರದೇಶಗಳಂ ನೋಡುವವರಾಗಿ ಸಂಚರಿಸುತ್ತಲಿರಲು ; ಅದಂ ನೋಡಿ ಸೀತೆಯು–"ಈ ಪ್ರಿಯಸಖಿಯಾದ ವಾಸಂತಿಯು ಸ್ವಾಮಿಗೆ ದುಃಖೋಪಶಮನಾರ್ಥವಾಗಿ ಮಾಡುವುಪಾಯವು ಮತ್ತೂ ದುಃಖಕ್ಕೆ ವೃದ್ಧಿಕರವಾಗುತ್ತಿದೆ ಎಂದು ನಾನು ಊಹಿಸುತ್ತಲಿದ್ದೇನೆ" ಎಂದಳು.

ವಾಸಂತಿಯು ಶೋಕದಿಂದೊಡಗೂಡಿ–"ಎಲೈ ಸ್ವಾಮಿಯೇ, ಪೂರ್ವದಲ್ಲಿ ನೀನು ಈ ಲತಾಗೃಹದಲ್ಲಿಯೇ ಸೀತೆಯನ್ನೆದುರುನೋಡುತ್ತ ಆ ಸೀತೆಯ ಮಾರ್ಗದಲ್ಲಿಯೇ ದೃಷ್ಟಿಯನ್ನಿರಿಸಿಕೊಂಡವನಾಗಿ ಇದ್ದೆ. ಆ ಸೀತೆಯು ಗೋದಾವರೀನದಿಯ ಮಳಲಿನಿಂದ ಎತ್ತರವಾದಂಥ ದಿಣ್ಣೆಗಳಲ್ಲಿ ಹಂಸಪಕ್ಷಿಗಳೊಡನೆ ವಿಲಾಸಯುಕ್ತಳಾಗಿ ಕಾಲವಿಲಂಬನವಂ ಮಾಡಿದಳು. ಆ ಬಳಿಕ ಆ ಸೀತೆಯು ಗೋದಾವರಿಯಿಂದ ಬರುವಳಾಗಿ ವ್ಯಸನಯುಕ್ತನಾದಂತೆ ಇರುವ ನಿನ್ನಂ ನೋಡಿ ಭಯದಿಂ ತಾವರೆಮೊಗ್ಗಿನಂತೆ ಮನೋಹರವಾದ ಅಂಜಲಿಬಂಧವಂ ಮಾಡಿಕೊಂಡು ನಿನಗೆ ನಮಿಸಿದಳು" ಎಂದು ಪೇಳಲು ;

ಇತ್ತಲು ಸೀತೆಯು–"ಎಲೌ ವಾಸಂತಿಯೇ, ನೀನು ಕಠಿನಚಿತ್ತೆಯು, ಕಠಿನಚಿತ್ತೆಯು, ಅದೆಂತೆನೆ:–ನೀನು ಹೃದಯದ ಮರ್ಮಸ್ಥಾನದಲ್ಲಿ ತಗಲಿಕೊಂಡಿರುವ ದುಃಖವೆಂಬ ಶಲ್ಯವಂ ಪುನಃ ಘಟ್ಟನೆಯಂ ಮಾಡುವ ಈ ನಿನ್ನ ವಚನಗಳಿಂ ಬಾರಿಬಾರಿಗೂ ಸ್ವಾಮಿಯು ಭಾಗ್ಯಹೀನಳಾದ ನನ್ನಂ ಸ್ಮರಿಸುವಂತೆ ನೀನು ಮಾಡುವೆಯಲ್ಲವೆ?" ಎಂದಳು.

ಶ್ರೀರಾಮನು ವಾಸಂತಿಯ ವಚನವಂ ಕೇಳಿ ವ್ಯಸನದಿಂ–"ಎಲೌ ಅತಿಕೋಪಯುಕ್ತಳಾದ ಸೀತೆಯೇ, ನೀನು ಇತ್ತಇತ್ತಲು ಕಾಣಲ್ಪಡುವೆಯು ಹೊಱತು ನನ್ನಲ್ಲಿ ದಯಾಯುಕ್ತಳಾಗುವುದಿಲ್ಲ. ಹಾ! ಕಟಕಟಾ! ಎಲೌ ಪ್ರಿಯಳೇ, ನನ್ನ ಹೃದಯವು ಒಡೆಯುತ್ತಲಿದೆ. ದೇಹದ ಸಂಧಿಬಂಧವು ಶಿಥಿಲವಾಗುತ್ತಲಿದೆ. ನಾನು ಈ ಜಗತ್ತನೆಲ್ಲವಂ ಶೂನ್ಯವನ್ನಾಗಿ ತಿಳಿಯುತ್ತೇನೆ. ಮತ್ತು ನಾನು ಒಳಗೆ ಮಹತ್ತುಗಳಾದ ವಿರಹಾಗ್ನಿಜ್ವಾಲೆಗಳೊಡಗೂಡಿ ಜ್ವಲಿಸುತ್ತಲಿದ್ದೇನೆ. ನನ್ನ ಅಂತರಾತ್ಮವು ದುಃಖಿಸುತ್ತ ಶೂನ್ಯವಾಗಿ ದೃಢವಾದ ಅಂಧಕಾರದಲ್ಲಿ ಮಗ್ನವಾಗುವಂತೆ ಇದೆ. ಮತ್ತು ಮೂರ್ಛೆಯು ನನ್ನ ಸುತ್ತಲೂ ಆಚ್ಛಾದನವಂ ಮಾಡುತ್ತಲಿದೆ. ಈಗ ಅಲ್ಪಭಾಗ್ಯನಾದ ನಾನು ಹೇಗೆ ಮಾಡಲಿ!" ಎಂದು ಪೇಳುತ ಶ್ರೀರಾಮನು ಮೂರ್ಛೆಯನ್ನೈದಲು ;

ಆಗ ಸೀತೆಯು–"ಹಾ! ಕಟಕಟಾ! ಪ್ರಿಯನು ಮೂರ್ಛಿತನಾದನು" ಎಂದು ದುಃಖಿಸಿದಳು.

ವಾಸಂತಿಯು–" ಎಲೈ ಸ್ವಾಮಿಯೇ, ಚಿತ್ತವಂ ಸಂತೈಸು ಸಂತೈಸು " ಎಂದು ಪೇಳಿದಳು.

ಸೀತೆಯು–" ಎಲೈ ಪ್ರಿಯನೇ, ಸಮಸ್ತ ಲೋಕಗಳ ಯೋಗಕ್ಷೇಮಗಳಿಗೆ ಆಧಾರವಾಗಿರುವ ಈ ನಿನ್ನ ದಿವ್ಯದೇಹವು ಭಾಗ್ಯರಹಿತಳಾದ ನನ್ನ ನಿಮಿತ್ತವಾಗಿ ಬಾರಿ ಬಾರಿಗೂ ಸಂಶಯವಿಷಯವಾದ ಜೀವವುಳ್ಳುದಾದಕಾರಣ ಈ ದುರ್ದಶೆಯ ಪರಿಣಾಮವು ದುಸ್ಸಹವಾಯಿತು " ಎಂದು, " ಕಟಕಟಾ ! ನಾನು ಭಗ್ನಳಾದೆನು " ಎನುತ ಮೂರ್ಛೆಯನ್ನೈದಲು ; ತಮಸೆಯು–" ಎಲೌ ಮಗಳೆ, ಸಮಾಧಾನಪಡುವಳಾಗು, ಸಮಾಧಾನಪಡುವಳಾಗು. ಈಗ ಪುನಃ ನಿನ್ನ ಹಸ್ತಸ್ಪರ್ಶವು ಈ ರಾಮನಿಗೆ ಸಂಜೀವನೋಪಾಯವು " ಎಂದು ಪೇಳಿದಳು.

ವಾಸಂತಿಯು–" ಕಟಕಟಾ ! ಈಗಲೂ ಸ್ವಾಮಿಯು ಉಚ್ಛ್ವಾಸವಂ ಬಿಡುವುದಿಲ್ಲಾ ! ಎಲೌ ಪ್ರಿಯಸಖಿಯಾದ ಸೀತೆಯೇ, ನೀನು ಎಲ್ಲಿ ಇದ್ದೀಯೆ ? ನಿನ್ನ ಪ್ರಾಣೇಶ್ವರನಾದ ರಾಮನಂ ಚೆನ್ನಾಗಿ ಭಾವಿಸುವಳಾಗು " ಎಂದಳು.

ಆಗ ಸೀತೆಯು ತ್ವರೆಯೊಡಗೂಡಿ ಸ್ವಾಮಿಯ ಸಮೀಪವನ್ನೈದಿ ಹೃದಯದಲ್ಲಿ ಲಲಾಟಸ್ಥಾನದಲ್ಲಿಯೂ ಸ್ಪೃಶಿಸುತ್ತಲಿರಲು ;

ವಾಸಂತಿಯು–" ಪುಣ್ಯಬಲದಿಂ ಪುನಃ ರಾಮಭದ್ರನು ಪ್ರಜ್ಞಾಯುಕ್ತನಾದನು " ಎಂದಳು. ಶ್ರೀರಾಮನು ಪ್ರಜ್ಞೆಯನ್ನೈದಿ ಇಂತೆಂದನು :–" ಎಲೈ, ಒಂದಾನೊಂದು ಸ್ಪರ್ಶವು ಆಕಸ್ಮಿಕವಾಗಿ ಸಂಭವಿಸಿ ಒಳಗೆ ಹೊರಗೆ ಸಹ ಇರುವ ಶರೀರಧಾತುಗಳಂ ಅಮೃತಮಯಂಗಳಾದ ಲೇಪನಗಳಿಂ ಲೇಪನಂಗೆಯ್ಯುತ್ತಲಿರುವಂತೆ ಪುನಃ ಜೀವಯುಕ್ತಂಗಳನ್ನಾಗಿ ಮಾಡುತ್ತ ದುಃಖದಿಂದುಂಟಾದ ಮೂರ್ಛೆಯಂ ಪರಿಹರಿಸಿ ಆನಂದದಿಂ ಮತ್ತೊಂದು ಮೂರ್ಛೆಯನುಂಟುಮಾಡುತ್ತಲಿದೆ " ಎಂದು ಪೇಳುತ್ತ, ಆನಂದಯುಕ್ತನಾಗಿ ನೇತ್ರಂಗಳಂ ಮುಚ್ಚಿಕೊಂಡವನಾಗಿಯೇ, " ಎಲೌ ಸಖಿಯಾದ ವಾಸಂತಿಯೇ, ಪುಣ್ಯಬಲದಿಂ ನೀನು ವೃದ್ಧಿಯನ್ನೈದುತ್ತೀಯೆ " ಎಂದು ಪೇಳಲು ; ಅದಂ ಕೇಳಿ ವಾಸಂತಿಯು–" ಅದು ಹೇಗೆ ? " ಎಂದಳು. ಶ್ರೀರಾಮನು–" ಎಲೌ ಸಖಿಯೇ, ಇನ್ನೇನು ಸೀತೆಯು ಬಂದಳು " ಎನಲು ; ವಾಸಂತಿಯು–" ಎಲೈ ಅರಸಾದ ರಾಮಭದ್ರನೇ, ಆ ಸೀತೆ ಎಲ್ಲಿ ಇದ್ದಾಳೆ ? " ಎಂದಳು. ಶ್ರೀರಾಮನು ಸೀತಾಹಸ್ತಸ್ಪರ್ಶದಿಂದುಂಟಾದ ಆ ಸುಖವಂ ಅಭಿನಯಂಗೈದು–" ಎಲೌ ಸಖಿಯೇ, ಈ ಸೀತೆ ಮುಂದುಗಡೆಯಲ್ಲಿಯೇ ಇದ್ದಾಳೆ, ನೋಡು " ಎಂದು ಪೇಳಲು ; ವಾಸಂತಿಯು–" ಎಲೈ ಸ್ವಾಮಿಯೇ, ಮರ್ಮಭೇದಕಗಳಾದುದಱಿಂ ದುಸ್ಸಹಂಗಳಾದ ಈ ದುಃಖಪ್ರಲಾಪವಚನಗಳಿಂ ನೀನು, ಮೊದಲೆ ಪ್ರಿಯೆಯಾದ ಸೀತೆಯ ವಿಪತ್ತಿನಿಂ ದಹಿಸಲ್ಪಟ್ಟವಳಾಗಿ ಭಾಗ್ಯಹೀನಳಾಗಿಯೂ ಇರುವ ನನ್ನನ್ನು ಏನೆಂದು ದಹಿಸುತ್ತಲಿದ್ದೀಯೆ ! " ಎಂದಳು.

ಸೀತೆಯು–" ಎಲೌ ಪೂಜ್ಯಳೆ, ಇಲ್ಲಿಂದ ಹಿಂದಕ್ಕೆ ಹೋಗುವುದಕ್ಕೋಸ್ಕರ ನಾನು ಇಚ್ಛೈಸುವೆನು. ಅದೇಕೆಂದರೆ : ಪ್ರೇಮಾತಿಶಯದಿಂ ಶಾಂತವಾಗಿ ಶೀತಲವಾಗಿಯೂ ಇರುವುದಾದಕಾರಣ ದೀರ್ಘವಾಗಿ ದುಸ್ಸಹವಾಗಿ ಸಹ ಇದ್ದರೂ ನನ್ನ ಸಂತಾಪವಂ

ಶೀಘ್ರದಿಂ ನಿಶ್ಶೇಷವಾಗಿ ಪರಿಹರಿಸುತ್ತಲಿರುವ ಕಾಂತನ ಸ್ಪರ್ಶದಿಂ ಚಿಂತೆಯಿಲ್ಲದಿರುವ ದುಸ್ಸಹವಾದ ವಿರಹದಿಂ ಕಂಪಯುಕ್ತವಾದ ನನ್ನ ಹಸ್ತಾಗ್ರವು ವಜ್ರಲೇಪದಿಂ ಸಿಕ್ಕಿಸಲ್ಪಟ್ಟಂತೆ ತಗಲಿಸಲ್ಪಟ್ಟುದಾಯಿತು '' ಎನಲು ;

ಅತ್ತಲು ಶ್ರೀರಾಮನು–'' ಎಲೌ ಸಖಿಯಾದ ವಾಸಂತಿಯೇ, ನನ್ನ ವಚನವು ಎಂತು ನಿರರ್ಥಕವೆಂದು ನೀನು ಪೇಳುವೆ ? ಪೂರ್ವದಲ್ಲಿ ವಿವಾಹೋತ್ಸವದಲ್ಲಿ ಕಂಕಣವಂ ಧರಿಸಿರುವ ಸೀತೆಯ ಯಾವ ಹಸ್ತವು ಗ್ರಹಿಸಲ್ಪಟ್ಟಿತೊ ; ಮತ್ತು ಯಾವ ಹಸ್ತವು ಚಂದ್ರನ ಅಮೃತದಿಂ ಶೀತಳಂಗಳಾದ ಚಂದ್ರಕಿರಣಂಗಳಿಂ ಪರಿಚಯಮಾಡಲ್ಪಟ್ಟಿರುವುದೊ–– '' ಎನಲು ;

ಅಷ್ಟುಱೊಳಗೆ ಸೀತೆಯು–'' ಎಲೈ ಪ್ರಿಯನೇ, ನೀನು ಈಗ ಆ ಕಾಂತನಾಗಿಯೇ ಇದ್ದೀಯೆ : ಫಲವೇನು ? '' ಎಂದಳು.

ಶ್ರೀರಾಮನು ;–'' ಅದಕ್ಕೆ ಅನ್ಯವಾದ ವಾಮಹಸ್ತವೇ ಉಪಮಾನವಾಗುವುದೆ ಹೊಱತು ಮತ್ತೊಂದು ಉಪಮಾನವಿಲ್ಲದುದಱಿಂ ಅತಿಮನೋಹರವಾಗಿ ಕೋಮಲವಾದ ಲವಲಿಯೆಂಬ ಬಳ್ಳಿಯ ಚಿಗುರಿನಂತೆ ಇರುವ ಆ ಸೀತೆಯ ದಕ್ಷಿಣಹಸ್ತವು ಈಗ ನನ್ನಿಂದ ಪಿಡಿಯಲ್ಪಟ್ಟಿತು '' ಎಂದು ಪೇಳುತ, ಸೀತಾಹಸ್ತವಂ ಗ್ರಹಿಸುವನಾಗುತ್ತಿರಲು ;

ಸೀತೆಯು–'' ಎಲೈ ಕಾಂತನಾದ ಸ್ವಾಮಿಯ ಸ್ಪರ್ಶದಿಂ ಮೋಹಿತಳಾದ ನನಗೆ ಪ್ರಮಾದವುಂಟಾಯಿತಲ್ಲವೆ ? '' ಎಂದು ತನ್ನಂ ತಾನು ನಿಂದಿಸಿಕೊಂಡಳು.

ಶ್ರೀರಾಮನು–'' ಎಲೌ ಸಖಿಯಾದ ವಾಸಂತಿಯೇ, ಆನಂದಾತಿಶಯದಿಂ ನೇತ್ರಗಳಂ ಮುಚ್ಚಿಕೊಂಡವನಾಗಿ ಪ್ರಿಯಳಾದ ಸೀತೆಯ ಸ್ಪರ್ಶದಿಂದುಂಟಾದ ಭಯದಿಂ ನಾನು ಪರಾಧೀನನಾಗುತ್ತಲಿದ್ದೇನೆಯಾದಕಾರಣ ನೀನೂ ಕೂಡ ಸೀತೆಯ ಹಸ್ತವಂ ಧರಿಸುವಳಾಗು '' ಎಂದು ಪೇಳಲು ; ವಾಸಂತಿಯು ಆ ವಚನವಂ ಕೇಳಿ–'' ಕಟಕಟಾ ! ಸ್ವಾಮಿಗೆ ಉನ್ಮಾದವೇ ಸರಿ '' ಎಂದಳು.

ಆ ಸೀತೆಯು ತ್ವರೆಯೊಡಗೂಡಿ ತನ್ನ ಹಸ್ತವಂ ಸೆಳೆಕೊಂಡವಳಾಗಿ ಹಿಂದಕ್ಕೆ ಹೋಗುತ್ತಿರಲು ;

ಶ್ರೀರಾಮನು–'' ಎಲೌ ಸಖಿಯೆ, ಆನಂದದಿಂ ಜಡನಾಗಿರುವ ನನ್ನ ಅತಿಕಂಪಯುಕ್ತವಾಗಿ ಬೆವರುತ್ತಲಿರುವ ಹಸ್ತದಿಂ ಆ ಸೀತೆಯ ಅತಿಕಂಪಯುಕ್ತವಾಗಿ ಬೆವರುತ್ತಲಿರುವ ಚಿಗುರಿನಂತೆ ಕೋಮಲವಾದ ಹಸ್ತವು ತಪ್ಪಿಸಿಕೊಂಡು ಹೋಯಿತಲ್ಲಾ ! ಹಾ ! ಕಟಕಟಾ ! ಪ್ರಮಾದ ಬಂದಿತು ! '' ಎಂದು ತನ್ನಂ ತಾನು ನಿಂದಿಸಿಕೊಂಡನು.

ಸೀತೆಯು–'' ಎಲೌ ತಾಯೇ, ಈಗಲೂ ಕೂಡ ಸ್ತಿಮಿತವಾಗದೆ ಸುತ್ತುತ್ತಲಿರುವ ಪ್ರಜ್ಞೆಯುಳ್ಳ ನನ್ನ ಆತ್ಮನಂ ನಿಲ್ಲಿಸಲಾಱೆನು. ಹಾ ! ಬಿಡು '' ಎಂದು ತನ್ನಂ ತಾನೇ ನಿಂದಿಸಿಕೊಂಡಳು. ಆಗ ತಮಸೆಯು ಸ್ನೇಹದೊಡನೆ ಕುತೂಹಲದೊಡನೆಯೂ ಮುಗುಳುನಗೆಯೊಡನೆಯೂ ಕೂಡಿದವಳಾಗಿ ಚೆನ್ನಾಗಿ ನೋಡಿ, '' ಎಲೌ, ವಾಯುವಿನಿಂದ ಕಂಪಿತವಾಗಿ, ನೂತನಂಗಳಾದ ವರ್ಷಜಲಬಿಂದುಗಳಿಂ ವ್ಯಾಪಿಸಲ್ಪಟ್ಟುದಾಗಿ, ಪ್ರಕಾಶಿಸುವ ಮೊಗ್ಗುಗಳುಳ್ಳುದಾಗಿಯೂ ಇರುವ ಕದಂಬವೃಕ್ಷದ ಶಾಖೆಯಂತೆ ಈ ಸೀತೆಯು

ಪ್ರಿಯನಾದ ಸ್ವಾಮಿಯ ಸ್ಪರ್ಶಸುಖದಿಂ ಸ್ವೇದಬಿಂದುಗಳಿಂ ಶೋಭಿಸುತ್ತ ರೋಮಾಂಚಯುಕ್ತವಾಗಿ ಕಂಪಿಸುತ್ತಲಿರುವ ದೇಹವುಳ್ಳವಳಾದಳು " ಎಂದು ಪೇಳಲು, ಅದಂ ಕೇಳಿ ಸೀತೆಯು ತನ್ನ ಮನಸ್ಸಿನಲ್ಲಿ—ಎಲೌ ಪೂಜ್ಯಳಾದ ತಮಸೆಯು ಪರವಶವಾದ ನನ್ನ ವಚನದಿಂದ ನನ್ನಂ ಲಜ್ಜಾಯುಕ್ತಳನ್ನಾಗಿ ಮಾಡಿದಳು. ಈ ತಮಸೆಯು ನನ್ನಂ, —ಇದೇಕೋ ಪರಿತ್ಯಾಗವು, ಇದೇಕೋ ಪುನಃ ಸಂಗವೆಂದು ನಿಂದಿಸುವಳೋ ಏನು? ಎಂದು ಸಂಕೋಚಪಟ್ಟಳು.

ಶ್ರೀರಾಮನು ನಾಲ್ಕು ಕಡೆಯಲ್ಲೂ ನೋಡಿದವನಾಗಿ " ಹಾ! ಇದೇನು ಸೀತೆಯು ಇಲ್ಲವೇ ಇಲ್ಲ! ಎಲೌ ನಿರ್ದಯಳಾದ ಸೀತೆಯೇ," ಎನಲು;

ಅದಂ ಕೇಳಿ ಸೀತೆಯು—" ಎಲೈ ಪ್ರಿಯನೆ, ನಾನು ನಿರ್ದಯಳೇ ಸರಿ. ಈ ರೀತಿ ಸಂತಾಪಯುಕ್ತನಾಗಿರುವ ನಿನ್ನಂ ನೋಡುತ್ತ ನಾನು ಜೀವವಂ ತಾಳಿಯೇ ಇದ್ದೇನೆಯಲ್ಲವೆ?" ಎಂದಳು.

ಶ್ರೀರಾಮನು—" ಎಲೌ ಪ್ರಿಯಳೆ, ಎಲ್ಲಿ ಇದ್ದೀಯೆ? ಪ್ರಸನ್ನಳಾಗು. ಈ ರೀತಿ ಸಂತಾಪಯುಕ್ತನಾಗಿರುವ ನನ್ನಂ ಪರಿತ್ಯಾಗಮಾಡುವುದಕ್ಕೆ ಯೋಗ್ಯಳಲ್ಲ" ಎನಲು;

ಸೀತೆಯು—" ಎಲೈ ಕಾಂತನೆ, ಈಗಿರುವ ದಶೆಯಲ್ಲಿ ಈ ನಿನ್ನ ವಚನವು ವಿರುದ್ಧವಲ್ಲವೆ?" ಎಂದಳು.

ವಾಸಂತಿಯು—" ಎಲೈ ಸ್ವಾಮಿಯೇ, ಪ್ರಸನ್ನನಾಗು, ಲೋಕೋತ್ತರವಾದ ನಿನ್ನ ಧೈರ್ಯದಿಂದಲೇ ನೀನು ಅತಿಶೋಕವನ್ನೈದಿರುವ ಆತ್ಮನಂ ಸಮಾಧಾನಪಡಿಸುವನಾಗು. ನನಗೆ ಪ್ರಿಯಸಖಿಯಾದ ಸೀತೆಯು ಇಲ್ಲಿ ಏನು ಕಾರಣ ಇದ್ದಾಳು?" ಎಂದು ಪೇಳಲು; ಶ್ರೀರಾಮನು ಚೆನ್ನಾಗಿ ನೋಡಿ—" ವ್ಯಕ್ತವಾಯಿತು. ಸೀತೆಯು ಇಲ್ಲವೇ ಇಲ್ಲ. ಇಲ್ಲಿ ಸೀತೆಯಿದ್ದರೆ ವನದೇವತೆಯಾದ ವಾಸಂತಿಯು ಕೂಡ ಎಂತು ನೋಡದೆ ಪೋಗುವಳು? ಅಲ್ಲದೆ, ಇದೇನು ಸ್ವಪ್ನವಾಗಿರುವುದೊ ಎಂದರೆ—ನಾನು ನಿದ್ರೆಗೈದವನಾಗಲಿಲ್ಲ. ರಾಮನಿಗೆ ನಿದ್ರೆಯೆಂತು ಬರುವುದು? ಸರ್ವಪ್ರಕಾರದಿಂದಲೂ ಅನೇಕಾವೃತ್ತಿ ಕಲ್ಪಿತಮಾದ ಅಪಾರಮಹಿಮೆಯುಳ್ಳ ವಿರಹವಿಕಾರವೇ. ಇದು ಬಾರಿಬಾರಿಗೂ ನನ್ನಂ ಅನುಸರಿಸುತ್ತಲಿದೆಯೇ ಹೊರತು ಮತ್ತೊಂದಲ್ಲ" ಎಂದನು.

ಸೀತೆಯು ಕಠಿನಚಿತ್ತಳಾದ ನನ್ನಿಂದಲೇ ಪ್ರಿಯನಾದ ಸ್ವಾಮಿಯು ವಿರಹವೇದನಾಯುಕ್ತನಾದನೆಂದು ವ್ಯಥೆಪಟ್ಟಳು.

ವಾಸಂತಿಯು—" ಎಲೈ ಸ್ವಾಮಿಯೇ, ಇಲ್ಲ ನೋಡು, ಇಲ್ಲಿ ನೋಡು. ಉಕ್ಕಿನಿಂದ ನಿರ್ಮಿಸಲ್ಪಟ್ಟ ಈ ರಾವಣನ ರಥವು ಜಟಾಯುವಿನಿಂದ ಮುರಿಯಲ್ಪಟ್ಟುದಾಗಿ ಬಿದ್ದು ಇದೆ; ಪಿಶಾಚಮುಖಗಳುಳ್ಳವಾಗಿ, ಆ ರಥವಂ ವಹಿಸುವ ಹೇಸರಗತ್ತೆಗಳು ಈ ಮುಂದುಗಡೆಯಲ್ಲಿ ಅಸ್ಥಿಮಾತ್ರದಿಂ ಅವಶಿಷ್ಟಗಳಾಗಿ ಬಿದ್ದಿವೆ; ಇಲ್ಲಿ ರಾವಣನ ಖಡ್ಗದಿಂ ಛೇದಿಸಲ್ಪಟ್ಟ ಜಟಾಯುವಿನ ಪಕ್ಷಮೂಲವು ಬಿದ್ದು ಇದೆ; ನೋಡು. ಆ ಕಾಲದಲ್ಲಿ ಇಲ್ಲಿಂದ ಚಲಿಸುತ್ತಲಿರುವ ಸೀತೆಯಂ ವಹಿಸುತ್ತಲಿರುವನಾಗಿ ರಾವಣನು ಗರ್ಭದಲ್ಲಿ ಹೊಳೆಯುತ್ತಲಿರುವ ಮಿಂಚಿನೊಡಗೂಡಿದ ಮೇಘದಂತೆ ಅಂತರಿಕ್ಷವಂ ಕುರಿತು ಹಾರಿ ನಡೆದನು" ಎನಲು;

ಸೀತೆಯು ಭಯಯುಕ್ತಳಾಗಿ–" ಎಲೈ ಕಾಂತನೇ, ತಂದೆಯಾದ ಜಟಾಯುವು ರಾವಣನಿಂದ ಸಂಹರಿಸಲ್ಪಡುತ್ತಾನೆಯಾದುದಱಿಂದ ನೀನು ಅವನಂ ರಕ್ಷಿಸುವನಾಗು, ನಾನು ಅಪಹರಿಸಲ್ಪಡುತ್ತೇನೆ" ಎಂದಳು.

ಶ್ರೀರಾಮನು ಅತಿವೇಗದಿಂ ಮೇಲಕ್ಕೆ ಎದ್ದವನಾಗಿ,–" ಎಲೈ ಪಾಪಿಷ್ಠನೇ, ತಂದೆಯಾದ ಜಟಾಯುವಿನ ಪ್ರಾಣವನ್ನಪಹರಿಸಿದವನೇ, ಎಲೈ ರಾವಣನೇ, ಎಲೈ ಸೀತೆಯನ್ನಪಹರಿಸಿದವನೇ, ಎಲ್ಲಿ ಹೋಗುವೆ ?" ಎಂದು ಪೇಳಲು ; ಅದಂ ಕೇಳಿ ವಾಸಂತಿಯು–" ರಾಕ್ಷಸಕುಲಕ್ಕೆ ಪ್ರಳಯಕಾಲಾಗ್ನಿಯಾದ ಸ್ವಾಮಿಯೇ, ಆ ರಾವಣನು ಈಗಲೂ ನಿನ್ನ ಕೋಪಕ್ಕೆ ವಿಷಯನಾಗಿರುವನೋ ಏನು ?" ಎಂದಳು.

ಇತ್ತಲು ಸೀತೆಯು–" ಹಾ ! ಎಲೌ ತಾಯೇ, ನಾನು ಭ್ರಾಂತಿಯುಕ್ತಳಾಗುತ್ತೇನೆ" ಎಂದಳು.

ಶ್ರೀರಾಮನು–" ಈಗ ಈ ದಶಾಪರಿಣಾಮವು ಮತ್ತೊಂದಾಗಿದೆಯಲ್ಲ ! ಅದೇನೆಂದರೆ :–ಪೂರ್ವದಲ್ಲಿ ರಾವಣನ ನಿಮಿತ್ತವಾಗಿ ನನಗೆ ಉಂಟಾದ ಆ ಸೀತಾವಿರಹವು ಶತ್ರುಸಂಹಾರಕ್ಕೆ ಅನೇಕಂಗಳಾದ ಉಪಾಯಗಳಿರುವುದಱಿಂದ ಎಡೆಯಿಲ್ಲದಿರುವ ಮಹಾವೀರರ ಯುದ್ಧರಸಗಳಿಂ ಜಗತ್ತಿಗೆ ಅತ್ಯಾಶ್ಚರ್ಯವನ್ನುಂಟುಮಾಡಿ ರಾವಣನ ಸಂಹಾರಪರ್ಯಂತವೂ ಅನುಭವಿಸತಕ್ಕುದಾಗಿ ಇದ್ದಿತು. ಈಗ ಸಂಭವಿಸಿದ ಈ ವಿರಹತಾಪವಾದರೊ ಎಂದಿಗೂ ಅವಧಿಯಿಲ್ಲದುದಱಿಂ ಅತಿತೀಕ್ಷ್ಣವಾಗಿ ಸುಮ್ಮನೆ ಸಹಿಸತಕ್ಕುದಾಗಿ ಇದೆಯಲ್ಲವೆ ?" ಎಂದು ಉಬ್ಬಿಸಿದನು.

ಅದಂ ಕೇಳಿ ಸೀತೆಯು–" ಪೂರ್ವವಿರಹದಿಂ ನಾನು ಬಹುಮಾನಂಗೈಯಲ್ಪಟ್ಟವಳಾಗುತ್ತೇನೆ. ಈಗ ಉಂಟಾದ ಈ ವಿರಹವು ಎಂದಿಗೂ ಅವಧಿಯಿಲ್ಲವಾದುದೆಂದು ಪೇಳಿದುದಱಿಂದ ನಾನು ಭಗ್ನಮನೋರಥಳಾಗುತ್ತೇನೆ. ಕಟಕಟಾ !" ಎಂದಳು.

ಶ್ರೀರಾಮನು–" ಎಲೈ, ಇದು ಮಹಾಕಷ್ಟವು ! ಈಗ ಆ ಸೀತೆಯು ಎಲ್ಲಿರುವಳೆಂದರೆ :–ಯಾವ ಸ್ಥಾನದಲ್ಲಿ ಕಪಿರಾಜನಾದ ಸುಗ್ರೀವನ ಸ್ನೇಹವು ಕೂಡ ವ್ಯರ್ಥವಾಗುವುದೊ, ನೀಲ ಮೊದಲಾದ ಕಪಿಗಳ ಸಾಮರ್ಥ್ಯವು ನಿಷ್ಫಲವಾಗುವುದೊ, ಮತ್ತು ಜಾಂಬವಂತನ ಪ್ರಜ್ಞೆಯು ಕೂಡ ಎಲ್ಲಿ ಪ್ರಸರಿಸುವುದಿಲ್ಲವೊ, ಎಲ್ಲಿ ವಾಯುಪುತ್ರನಾದ ಹನುಮಂತನಿಗೂ ಗಮನವುಂಟಾಗಲಾಱದೊ, ಮತ್ತು ವಿಶ್ವಕರ್ಮನಿಗೆ ಪುತ್ರನಾದ ನಳನು ಸಹ ಎಲ್ಲಿಗೆ ಮಾರ್ಗವಂ ಕಲ್ಪಿಸುವುದಕ್ಕೆ ಸಮರ್ಥನಲ್ಲವೊ, ಇನ್ನು ಯಾವ ಸ್ಥಾನವು ಅಮೋಘಗಳಾದ ಲಕ್ಷ್ಮಣನ ಬಾಣಗಳಿಗೂ ಗೋಚರವಲ್ಲವೊ, ಅಂಥ ದುರ್ಘಟವಾದ ಒಂದಾನೊಂದು ಸ್ಥಾನದಲ್ಲಿ ನನ್ನ ಪ್ರಿಯಳಾದ ಸೀತೆಯು ಇರುವಳಲ್ಲವೆ !" ಎಂದು ಸಂತಾಪಿಸಲು ;

ಅದಂ ಕೇಳಿ ಸೀತೆಯು–" ನಾನು ಸ್ವಾಮಿಯಿಂದ ಬಹುಮಾನಿತಳಾದೆನು" ಎಂದಳು.

ಶ್ರೀರಾಮನು–" ಎಲೌ ಸಖಿಯಾದ ವಾಸಂತಿಯೇ, ಇಂಥ ದಶೆಯಲ್ಲಿ ನನ್ನ ನೋಡುವುದು ಇಷ್ಟರಾದ ಜನರಿಗೆ ದುಃಖಕಾರಣವೇ ಹೊಱತು ಮತ್ತೊಂದಲ್ಲವಾದುದ

ಙಿಂದ ಇನ್ನು ಎಷ್ಟುಪರ್ಯಂತ್ರವು ನಾನು ನಿನ್ನಂ ದುಃಖಪಡಿಸುವನಾದೇನು? ಅದುಕಾರಣ ಅಯೋಧ್ಯಾಪುರವಂ ಕುಱಿತು ಪೋಗುವುದಕ್ಕೋಸ್ಕರ ನನಗೆ ಅಪ್ಪಣೆಯಂ ಕೊಡುವಳಾಗು '' ಎನಲು ;

ಸೀತೆಯು–'' ಎಲೌ ಪೂಜ್ಯಳಾದ ತಮಸೆಯೆ, ಪ್ರಿಯನಾದ ಸ್ವಾಮಿಯು ಈಗ ಅಯೋಧ್ಯಾಪುರವಂ ಕುಱಿತು ಪೋಗುತ್ತಾನೆ '' ಎಂದು ಪರಿತಾಪಯುಕ್ತಳಾದಳು. ತಮಸೆಯು–'' ಎಲೌ ಮಗಳೆ, ಚಿತ್ತವಂ ಸಮಾಧಾನಪಡಿಸುವಳಾಗು, ಆಯುಷ್ಮಂತರಾದ ಕುಶಲವರಿಗೆ ವರ್ಷವರ್ಧಂತೀನಿಮಿತ್ತಗಳಾದ ಶುಭವ್ಯಾಪಾರಂಗಳಂ ಬಳೆಯಿಸುವುದಕ್ಕೋಸ್ಕರ ನಾವು ಭಾಗೀರಥೀದೇವಿಯ ಚರಣಸಮೀಪವಂ ಕುಱಿತು ಪೋಗೋಣ '' ಎಂದು ಪೇಳಲು ; ಸೀತೆಯು–'' ಎಲೌ ಪೂಜ್ಯಳೇ ಪ್ರಸನ್ನಳಾಗು, ಪ್ರಸನ್ನಳಾಗು. ಒಂದು ಕ್ಷಣಮಾತ್ರವಾದರೂ ದುರ್ಲಭವಾದ ದರ್ಶನವುಳ್ಳ ಪ್ರಿಯನಂ ನೋಡು '' ಎಂದಳು.

ಶ್ರೀರಾಮನು–'' ಎಲೌ ವಾಸಂತಿಯೇ, ಈಗ ನನಗೆ ಅಶ್ವಮೇಧವೆಂಬ ಮಹಾಯಜ್ಞವಂ ಪೂರ್ತಿಗೈಯಲೋಸುಗ ಒಬ್ಬಳು ಧರ್ಮಪತ್ನಿಯು ಇದ್ದಾಳೆ '' ಎಂದು ಪೇಳಲು ;

ಇತ್ತಲು ಸೀತೆಯು ಅದಂ ಕೇಳಿ ಆಕ್ಷೇಪದೊಡಗೂಡಿ–'' ಎಲೈ ಕಾಂತನೇ, ಅವಳು ಯಾರು ? '' ಎಂದಳು.

ವಾಸಂತಿಯು–'' ಎಲೈ ಸ್ವಾಮಿಯೇ, ನೀನು ಪುನಃ ವಿವಾಹವಂ ಮಾಡಿಕೊಂಡೆಯೊ ಏನು ? '' ಎಂದು ಪ್ರಶ್ನೆಗೈಯಲು ; ಶ್ರೀರಾಮನು–'' ವಿವಾಹವಿಲ್ಲ, ವಿವಾಹವಿಲ್ಲ. ಸುವರ್ಣಮಯವಾದ ಸೀತಾಪ್ರತಿಕೃತಿಯೇ ನನಗೆ ಧರ್ಮಪತ್ನಿಯಾಗಿ ಇದೆ '' ಎಂದನು.

ಅದಂ ಕೇಳಿ ಸೀತೆಯು ನಿಟ್ಟುಸಿರಂ ಬಿಟ್ಟು ಕಣ್ಣೀರೊಡಗೂಡಿ–'' ಎಲೈ ಸ್ವಾಮಿಯೆ, ಈಗ ನನಗೆ ಪ್ರಿಯನಾಗುತ್ತೀಯೆ. ಎಲೌ ತಾಯೆ, ಈಗ ಪ್ರಿಯನಾದ ಸ್ವಾಮಿಯು ನನ್ನ ಪರಿತ್ಯಾಗದಿಂದ ಪುಟ್ಟಿದ ಲಜ್ಜೆಯೆಂಬ ಶಲ್ಯವಂ ಕಿತ್ತು ಪರಿಹರಿಸಿದನು '' ಎನಲು ;

ಶ್ರೀರಾಮನು–'' ಎಲೌ ವಾಸಂತಿಯೇ, ಸುವರ್ಣಮಯವಾದ ಆ ಸೀತಾಪ್ರತಿಮೆಯಲ್ಲಿಯೂ ಬಾಷ್ಪಜಲಯುಕ್ತವಾದ ನೇತ್ರವನ್ನಿಟ್ಟು ಸಮಾಧಾನಪಡಿಸುತ್ತಾ ಇದ್ದೇನೆ '' ಎಂದನು.

ಸೀತೆಯು ಪ್ರಿಯವಚನವಂ ಕೇಳಿ,–'' ಯಾವ ಪ್ರತಿಮೆಯಂ ಸ್ವಾಮಿಯು ಈ ರೀತಿ ಬಹುಮಾನಂಗೈಯುತ್ತಾನೊ, ಮತ್ತು ಯಾವ ಪ್ರತಿಮೆಯು ಸಂತಾಪಯುಕ್ತನಾದ ಪ್ರಿಯನಂ ಈರೀತಿ ಸಮಾಧಾನಪಡಿಸುವುದಾಗಿ ಪ್ರಪಂಚಕ್ಕೆ ಇನ್ನು ಸ್ವಾಮಿಯು ಜೀವಿಸಾನೆಂಬ ಆಸೆಗೆ ಕಾರಣವಾಗಿ ಇದೆಯೊ : ಅಂಥ ಸುವರ್ಣಪ್ರತಿಮೆಯು ಮಹಾಧನ್ಯವಾದುದಲ್ಲವೆ ! '' ಎನಲು ; ಅದಂ ಕೇಳಿ ತಮಸೆಯು ಸ್ನೇಹದೊಡನೆ ಮುಗುಳುನಗೆಯೊಡನೆ ಕಣ್ಣೀರೊಡನೆಯೂ ಕೂಡಿ ಸೀತೆಯನ್ನಾಲಿಂಗನಂಗೈದು–'' ಎಲೌ ಮಗಳೇ, ಈರೀತಿ ನಿನ್ನಂ ನೀನೇ ಸ್ತೋತ್ರವಂ ಮಾಡುತ್ತೀಯೆ ! '' ಎಂದಳು. ಅದಂ ಕೇಳಿ ಸೀತೆಯು ಲಜ್ಜಾಯುಕ್ತಳಾಗಿ,–'' ಪೂಜ್ಯಳು ನನ್ನಂ ಪರಿಹಾಸವಂ ಮಾಡುತ್ತಾಳೆ '' ಎನಲು ;

ಅತ್ತಲು ವಾಸಂತಿಯು–" ಎಲೈ ಸ್ವಾಮಿಯೆ, ಈಗ ಪುನಃ ಈ ನಿನ್ನ ದರ್ಶನ ಸಂಭಾಷಣಾದಿಸಂಬಂಧವುಂಟಾದುದೇ ನಮಗೆ ಮಹಾಪ್ರಸಾದವು. ಅದುಕಾರಣ ನಿನ್ನ ಗಮನಕ್ಕೆ ಯಾವ ರೀತಿ ಕಾರ್ಯವಿಘ್ನವುಂಟಾಗದೊ ಆರೀತಿ ಮಾಡತಕ್ಕುದು" ಎಂದು ಪೇಳಿದಳು. ಶ್ರೀರಾಮನು–" ಹಾಗೆ ಆಗಲಿ" ಎಂದು ಪೇಳಿದನು.

ಸೀತೆಯು ಅದಂ ಕೇಳಿ–" ಸಖಿಯಾದ ವಾಸಂತಿಯು ಈಗ ನನಗೆ ಪ್ರತಿಕೂಲಳಾದಳು" ಎಂದಳು. ತಮಸೆಯು–" ಎಲೌ ಮಗಳೆ, ಬಾ, ಹೋಗೋಣ" ಎನಲು; ಸೀತೆಯು–" ಹಾಗೆಯೇ ಮಾಡೋಣ" ಎಂದಳು. ತಮಸೆಯು–" ಎಲೌ ಮಗಳೆ, ಹೇಗೆ ನೀನು ಇಲ್ಲಿಂದ ಪೋಗುವಳಾಗುತ್ತೀಯೆ? ಅದೇನೆಂದರೆ–ನಿನ್ನ ನೇತ್ರವು ಪ್ರಿಯನಂ ನೋಡುವುದರಲ್ಲಿ ಅತ್ಯಂತವಾದ ಅಭಿಲಾಷೆಯೊಡಗೂಡಿರುವುದಾದಕಾರಣ ಕಾಂತನಲ್ಲಿ ಚೆನ್ನಾಗಿ ನೆಡಲ್ಪಟ್ಟಂತೆ ಇರುವ ನಿನ್ನ ನೇತ್ರಕ್ಕೂ ಸ್ವಾಮಿಗೂ ಇರುವ ಸಂಬಂಧವು ಮರ್ಮಚ್ಛೇದಕ್ಕೆ ಸಮಾನಗಳಾಗಿರುವ ಪ್ರಯತ್ನಗಳಿಂದ ಅಡ್ಡಿಗೈಸಲ್ಪಡುತ್ತಲಿದೆಯಲ್ಲಾ!" ಎನಲು; ಸೀತೆಯು–" ವಿಶೇಷವಾಗಿ ಪುಣ್ಯವಂ ಮಾಡಿರುವ ಜನರಿಂ ದರ್ಶನವಂ ಮಾಡಲು ಯೋಗ್ಯಗಳಾಗಿರುವ ಪತಿಯ ಪಾದಪದ್ಮಗಳಿಗೆ ನಮಿಸುವೆನು" ಎಂದು ಪೇಳಿ, ಮೂರ್ಛೆಯನ್ನೈದಲು; ತಮಸೆಯು–" ಎಲೌ ಮಗಳೆ, ಚಿತ್ತವಂ ಸಂತೈಸಬೇಕು" ಎಂದಳು. ಸೀತೆಯು ಸಮಾಧಾನಪಟ್ಟವಳಾಗಿ–" ಎಷ್ಟು ಪರ್ಯಂತ ನನಗೆ ಬಾಷ್ಪಜಲಮಧ್ಯದಲ್ಲಿ ಪೂರ್ಣಚಂದ್ರನ ದರ್ಶನವುಂಟಾದೀತು!" ಎಂದು ಸಂತಾಪಪಟ್ಟಳು. ತಮಸೆಯು ನೋಡಿ–" ಈ ಸಂವಿಧಾನವು ಆಶ್ಚರ್ಯಕರವಾದುದು. ಅದು ಹೇಗೆಂದರೆ:–ಯಾವ ರೀತಿ ಒಂದು ಜಲವು ಸುಳಿಗಳೆಂದೂ ನೊರೆಗಳೆನುತಲೂ ನಾನಾವಿಕಾರಗಳನ್ನೈದಿದರೂ ಅದೆಲ್ಲವೂ ಜಲವೇ ಹೊರತು ಮತ್ತೊಂದಲ್ಲವೊ, ಅದೇ ರೀತಿ ಒಂದು ಶೋಕವೆಂಬ ರಸವೇ ಒಂದೊಂದು ನಿಮಿತ್ತವಿಶೇಷದಿಂ ಭಿನ್ನಿಸಿ ನಾನಾಪ್ರಕಾರಂಗಳಾಗಿರುವ ರೂಪಾಂತರಂಗಳಂ ವಹಿಸುತ್ತಲಿದೆಯಲ್ಲವೆ?" ಎಂದಳು.

ಶ್ರೀರಾಮನು ಪ್ರಯಾಣೋದ್ಯುಕ್ತನಾಗಿ–" ಎಲೈ ವಿಮಾನರಾಜನೇ, ಇತ್ತಿತ್ತ ಬಾರೈ" ಎನಲು;

ಅದಂ ಕೇಳಿ ಸಮಸ್ತರೂ ಮೇಲಕ್ಕೆ ಎದ್ದರು.

ಆಗ ತಮಸೆಯು ವಾಸಂತಿಯು ಸಹ ಇವರಿಬ್ಬರೂ ಸೀತಾರಾಮರಂ ಕುರಿತು–" ಭೂಮಿದೇವಿಯೂ ಗಂಗಾದೇವಿಯೂ ನಮ್ಮಂಥವರೊಡನೆಯೂ ಕೂಡಿದವರಾಗಿ ನಿನಗೆ ಶುಭವನ್ನುಂಟುಮಾಡಲಿ! ಅದೇ ರೀತಿ ವೇದಂಗಳಂ ತನ್ನ ಕಿರಣರೂಪದಿಂದ ಲೋಕದಲ್ಲಿ ಪ್ರಯೋಗಿಸುವವನಾಗಿ ರಘುವಂಶಕ್ಕೆ ಮೂಲಪುರುಷನಾಗಿಯೂ ಇರುವ ಸೂರ್ಯನೂ ಕುಲಕ್ಕೆ ಗುರುವಾಗಿ ಅರುಂಧತೀ ಸಮೇತನಾಗಿರುವ ವಸಿಷ್ಠಮುನಿಯೂ ಸಹ ಮಹತ್ತಾದ ಶ್ರೇಯಸ್ಸಿಗೋಸ್ಕರ ನಿನಗೆ ಶುಭವಂ ಕೊಡಲಿ!" ಎಂದು ಶ್ರೇಯಃ ಪ್ರಾರ್ಥನೆಯಂ ಮಾಡಿ, ಇಲ್ಲಿಂದ ಎಲ್ಲರೂ ತೆರಳಿದರು.

ತೃತೀಯಾಂಕ ತಾತ್ಪರ್ಯಂ ಸಮಾಪ್ತಂ.

# ॥ ಚತುರ್ಥಾಂಕಂ ॥

ಆಬಳಿಕ ನಾಲ್ಕನೆಯ ದಿನದಲ್ಲಿ ಅಧೇರೀತಿ ಪುನಃ ವಿದ್ವಾಂಸರು ಎಲ್ಲರು ಸಭಾ ಸ್ಥಾನದಲ್ಲಿ ಕೂಡಿದವರಾಗಲು ; ಸೂತ್ರಧಾರನು ನಟನು ಇವರು ಮೊದಲಾದ ನಾಟಕ ಸಂವಿಧಾನಕರ್ತೃಗಳು ರಂಗಸ್ಥಾನವನ್ನೈದಿ ಗಾನಪೂರ್ವಕವಾಗಿ ಸಭಾಪ್ರಾರ್ಥನೆ ಮುಂತಾದ ಪೂರ್ವರಂಗವನ್ನಾಚರಿಸಿ ತಮ್ಮ ತಮ್ಮ ವ್ಯಾಪಾರದಲ್ಲಿ ಸನ್ನದ್ಧರಾಗಲು ;

ರಂಗಸ್ಥಾನಕ್ಕೆ ಪಶ್ಚಿಮವಾಗಿ ವೇಷಧಾರಿಗಳಿಗೆ ಸ್ಥಾನವಾಗಿ ತೆಱೆಯಿಂ ಮಱೆ ಯಾಗಿರುವ ನೇಪಥ್ಯವೆಂಬ ಸ್ಥಾನದಿಂ ಇಬ್ಬರು ಋಷಿಗಳು ರಂಗಸ್ಥಾನವಂ ಪ್ರವೇಶಂ ಗೈಯಲು ;

ಅವರಲ್ಲಿ ಒಬ್ಬ ಋಷಿಯು ಮತ್ತೊಬ್ಬನಂ ಕುಱಿತು ಇಂತೆಂದನು :–" ಎಲೈ ಸೌಧಾತಕಿಯೆ, ಈಗ ಅತ್ಯಂತವಾಗಿ ಸನ್ನಿಹಿತರಾಗಿರುವ ಅತಿಥಿಜನರುಳ್ಳುದಾದಕಾರಣ, ಪೂಜ್ಯನಾದ ವಾಲ್ಮೀಕಿಮುನಿಯ ಆಶ್ರಮದಲ್ಲಿ ಈ ಅತಿಥಿಗಳಾಗಿ ಬಂದಿರುವ ಜನರಿಗೆ ಆತಿಥ್ಯವಂ ಮಾಡಲೋಸುಗ ಅತ್ಯಂತ ಸನ್ನಾಹವುಂಟಾಗಿರುವುದಱಿಂ ಈ ಆಶ್ರಮದ ರಮಣೀಯತ್ವವಂ ನೋಡುವನಾಗು. ಅದೇನೆಂದರೆ :–ಈ ತಪೋವನದಲ್ಲಿ ಇರುವ ಗಂಡುಹುಲ್ಲೆಯು ತತ್ಕಾಲದಲ್ಲಿ ಪ್ರಸವಿಸಿರುವ ಹೆಣ್ಣುಹುಲ್ಲೆಯು ಪಾನವಂ ಮಾಡಿ ಮಿಕ್ಕ ದುದಾಗಿ ಉಷ್ಣವಾಗಿ ಮಧುರವಾಗಿಯೂ ಇರುವ ನೀವಾರವೆಂಬ ತೃಣಧಾನ್ಯದಿಂ ರಚಿಸ್ಪಟ್ಟ ಅನ್ನದ ಕೆನೆಯಾಗಿರುವ ಗಂಜಿಯಂ ಪಾನವಂ ಮಾಡಿ ಅಷ್ಟುಮಾತ್ರದಿಂದಲೇ ತೃಪ್ತಿಯನ್ನೈದುತ್ತಲಿದೆ. ಮತ್ತು ಬಱಿಯ ಫಲಗಳೊಡನೆ ಮಿಶ್ರಗಳಾಗಿ ಶಾಕಂಗಳಂ ಪಾಕಂಗೈಯುವರಾದಕಾರಣ ಆ ಶಾಕಪಾಕದ ವಾಸನೆಯು ಆಜ್ಯಯುಕ್ತವಾಗಿರುವ ಅನ್ನದ ವ್ಯಾಪಿಸುತ್ತಲಿರುವ ವಾಸನೆಯಿಂದ ಸ್ವಲ್ಪ ಕೂಡಿರುವುದಾಗಿ ಈ ಆಶ್ರಮದ ಸುತ್ತಲೂ ವ್ಯಾಪಿಸುತ್ತಲಿದೆ, ನೋಡು " ಎಂದು ಪೇಳಲು ; ಆಗ ಬಾಲಬ್ರಹ್ಮಚಾರಿ ಯಾದ ಸೌಧಾತಕಿಯೆಂಬ ಋಷಿಯು ಕುತೂಹಲದಿಂ ನೋಡಿ–" ನಾನಾಪ್ರಕಾರಂಗಳಾದ ರೂಪುಗಳು ವೇಷಗಳು ಸಹ ಉಳ್ಳವರಾಗಿ ನಮಗೆ ವೇದಾಧ್ಯಯನವಿಲ್ಲದೆ ಇರುವುದಕ್ಕೆ ಕಾರಣಭೂತರಾಗಿ ವೃದ್ಧರಾಗಿಯೂ ಇರುವ ಈ ಋಷಿಗಳಿಗೆ ಕುಶಲವೆ ?" ಎಂದನು. ಅದಂ ಕೇಳಿ ಜ್ಯೇಷ್ಠನಾದ ಮತ್ತೊಬ್ಬ ಋಷಿಯು ನಕ್ಕವನಾಗಿ–" ಎಲೈ ಈ ಬಾಲಕ ನಾದ ಸೌಧಾತಕಿಗೆ ಈಗ ಬಂದಿರುವ ಈ ಗುರುಗಳ ವಿಷಯದಲ್ಲಿ ಎಂದೂ ಇಲ್ಲದಿರುವ ಒಂದಾನೊಂದು ಸಂತೋಷಕಾರಣವುಂಟಾಗಿದೆ " ಎನಲು ; ಸೌಧಾತಕಿಯು–" ಎಲೈ ದಾಂಡ್ಯಾಯನನೇ, ಮಹತ್ತಾದ ಸ್ತ್ರೀಸಮೂಹಕ್ಕೆ ಅಧ್ಯಕ್ಷನಾಗಿ ಬಂದಿರುವ ಈ ಅತಿ ಥಿಯು ಏನೆಂಬ ನಾಮಧೇಯವುಳ್ಳವನು ?" ಎಂದು ಪ್ರಶ್ನೆಗೈಯಲು ; ಅದಂ ಕೇಳಿ ಜ್ಯೇಷ್ಠನಾದ ದಾಂಡ್ಯಾಯನನು–" ಎಲೈ ಬಾಲಕನೇ, ಪರಿಹಾಸವಂ ಬಿಡು ಬಿಡು. ಋಷ್ಯಶೃಂಗಮುನಿಯ ಆಶ್ರಮದಿಂ ಅರುಂಧತೀದೇವಿಯ ಮುಂದಿಟ್ಟುಕೊಂಡು ಮಹಾರಾ

ಜನಾದ ದಶರಥರಾಯನ ಪತ್ನಿಯರುಗಳಾದ ಕೌಸಲ್ಯಾದೇವಿ ಮೊದಲಾಗಿರುವ ಸ್ತ್ರೀಜನರಿಗೆ ಪರಿಪಾಲಕನಾಗಿ ಪೂಜ್ಯನಾಗಿರುವ ವಸಿಷ್ಠಮಹಾಮುನಿಯು ಈ ವಾಲ್ಮೀಕಿಮುನಿಯ ಆಶ್ರಮಕ್ಕೆ ಬಂದು ಇದ್ದಾನೆಯಲ್ಲವೆ ? ನೀನು ಅದೇನುಕಾರಣ ಮನಸ್ಸು ಬಂದಂತೆ ನಿರರ್ಥಕವಾದ ವಚನವಂ ಪೇಳುವೆ ? '' ಎಂದನು ; ಸೌಧಾತಕಿಯು–'' ಹುಂ ! ಈತನು ವಸಿಷ್ಠನೆ ? '' ಎಂದು ಪ್ರಶ್ನೆಗೈಯಲು ; ದಾಂಡ್ಯಾಯನನು–'' ಹೌದು, ಈತನೇ ವಸಿಷ್ಠಮುನಿಯು '' ಎಂದು ಉತ್ತರವನ್ನಿತ್ತನು. ಸೌಧಾತಕಿಯು–'' ಎಲೈ ದಾಂಡ್ಯಾಯನನೇ, ನಾನು ಇವನು ಯಾವನೋ ರಾಕ್ಷಸನೆಂದು ತಿಳಿದೆನು '' ಎನಲು ; ಅದಂ ಕೇಳಿ ದಾಂಡ್ಯಾಯನನು–'' ಆಃ ! ಎಲೈ ಮೂರ್ಖನೇ, ಏನೆಂದು ಪೇಳುವೆ ? '' ಎಂದನು. ಸೌಧಾತಕಿಯು–'' ಎಲೈ ದಾಂಡ್ಯಾಯನನೆ, ಆತನು ಬರುವನಾದ ಮಾತ್ರಕ್ಕೆ ಮಾತೃಹೀನವಾದ ಕಪಿಲೆಯಾಗಿರುವ ಕಡಸು ಬಲಾತ್ಕಾರದಿಂ ಹೀಗೆ ಮಾಡಲ್ಪಟ್ಟಿತು ! '' ಎನಲು ; ದಾಂಡ್ಯಾಯನನು–'' ಎಲೈ ಬಾಲಕನೆ, ಕೇಳು. ಮಹಾತ್ಮರಾದ ಋಷಿಗಳು ಆಶ್ರಮಕ್ಕೆ ಬಂದರೆ ಆಕ್ಷಣದಲ್ಲೇ ಅವರಿಗೆ ಅರ್ಘ್ಯಾದಿಗಳಿಂ ಉಪಚಾರಂಗೈದು ಮಾಂಸಯುಕ್ತವಾಗಿ ಮಧುಪರ್ಕವಂ ಸಮರ್ಪಿಸಬೇಕೆಂದು ಪೇಳುವ ವೇದವಂ ಬಹುಮಾನಂಗೈಯುವರಾಗಿ, ಗೃಹಸ್ಥರಾದ ಋಷಿಗಳು ವೇದಶಾಸ್ತ್ರಸಂಪನ್ನನಾಗಿ ಬಂದಿರುವ ಅತಿಥಿಗೋಸ್ಕರ ಕಡಸನ್ನಾದರೂ ವೃಷಭವನ್ನಾದರೂ ಹಿಂಸೆಯಂ ಮಾಡಿ ಪಾಕಂಗೈಯುತ್ತಲಿದ್ದಾರೆ. ಆ ವೇದೋಕ್ತವಾದ ಧರ್ಮವನ್ನೇ ಸೂತ್ರಕಾರರಾದ ಋಷಿಗಳು ಸಹ ಪೇಳುತ್ತಾರೆ'' ಎಂದನು. ಸೌಧಾತಕಿಯು–'' ಎಲೈ ದಾಂಡ್ಯಾಯನನೆ, ನೀನು ನನ್ನ ಆಕ್ಷೇಪಕ್ಕೆ ಒಳಗಾದೆಯಲ್ಲವೆ ? '' ಎನಲು ; ದಾಂಡ್ಯಾಯನನು–ಅದು ಹೇಗೆ ? ಎಂದನು. ಸೌಧಾತಕಿಯು–'' ಎಲೈ ದಾಂಡ್ಯಾಯನನೆ, ಅದೇನೆಂದರೆ–ಪೂಜ್ಯರಾದ ವಸಿಷ್ಠರು ಬಂದಮೇಲೆ ಈಗಲೇ ಹಿಂದೆ ಬಂದಿರುವ ರಾಜರ್ಷಿಯಾದ ಜನಕರಾಯನಿಗೆ ಪೂಜ್ಯನಾದ ವಾಲ್ಮೀಕಿಮುನಿಯು ದಧಿಮಧುಗಳಿಂದಲೇ ಮಧುಪರ್ಕವನ್ನಾಚರಿಸಿದನು, ಕಡಸಂ ಬಿಟ್ಟನಲ್ಲವೆ?'' ಎನಲು; ದಾಂಡ್ಯಾಯನನು–'' ಎಲೈ ಸೌಧಾತಕಿಯೆ, ಕೆಲವು ಋಷಿಗಳು ಮಾಂಸವಂ ವರ್ಜಿಸಿರುವ ಪುರುಷರಿಗೆ ದಧಿಮಧುಗಳಿಂದಲೇ ಮಧುಪರ್ಕವಂ ಮಾಡಬೇಕೆಂದು ವಿಧಿಸುತ್ತಲಿದ್ದಾರೆ. ಪೂಜ್ಯನಾದ ಜನಕರಾಯನು ಮಾಂಸವಂ ವರ್ಜಿಸಿದವನಾದಕಾರಣ ಆತನ ನಿಮಿತ್ತವಾಗಿ ದಧಿಮಧುಗಳಿಂದಲೇ ಮಧುಪರ್ಕವನ್ನಾಚರಿಸಿದನು'' ಎಂದನು. ಅದಂ ಕೇಳಿ ಸೌಧಾತಕಿಯು–''ಜನಕರಾಯನು ಏನು ನಿಮಿತ್ತ ಮಾಂಸವಂ ವರ್ಜಿಸಿದನು?'' ಎನಲು ; ದಾಂಡ್ಯಾಯನನು–'' ಎಲೈ ಕೇಳು, ಜನಕರಾಯನು ಯಾವಾಗ ಸೀತಾದೇವಿಗೆ ದೈವಗತಿಯಿಂದ ಪ್ರಾಪ್ತವಾದ ದುರ್ದಶೆಯಂ ಕೇಳಿ ರಾಜ್ಯವಂ ಪರಿತ್ಯಾಗಂಗೈದು ವನದಲ್ಲಿ ವಾಸಂಗೈಯಲು ಯೋಗ್ಯವಾದ ವೈಖಾನಸಾಶ್ರಮವಂ ಅಂಗೀಕರಿಸಿ ವನವಾಸಂಗೈಯುವನಾದನೋ ಆಗಲೇ ಚನ್ದ್ರದ್ವೀಪದ ತಪೋವನವನ್ನೈದಿ ಅಲ್ಲಿ ತಪಸ್ಸಂ ಮಾಡುವ ಆ ಜನಕರಾಯನಿಗೆ ಕೆಲವು ಸಂವತ್ಸರಂಗಳು ಕಳೆದಂಥವಾದುವು '' ಎಂದನು. ಸೌಧಾತಕಿಯು–'' ಜನಕರಾಯನು ಏನು ನಿಮಿತ್ತವಾಗಿ ಆ ಚಂದ್ರದ್ವೀಪದಿಂದ ಇಲ್ಲಿಗೆ ಬಂದನು? '' ಎಂದು ಪ್ರಶ್ನೆಗೈಯಲು ; ದಾಂಡ್ಯಾಯನನು–'' ಎಲೈ ಕೇಳು, ಈಗ ಆತನು ಪ್ರಿಯಮಿತ್ರನಾದ

ವಾಲ್ಮೀಕಿಯಂ ನೋಡಲೋಸುಗ ಬಂದನು '' ಎಂದು ಪೇಳಿದನು. ಸೌಧಾತಕಿಯು–'' ಎಲೈ, ಆದರೆ ಈಗ ಬಂಧುಜನವಾದ ಕೌಸಲ್ಯಾದೇವಿಗೂ ಈ ಜನಕರಾಯನಿಗೂ ಸಹ ಪರಸ್ಪರವಾಗಿ ದರ್ಶನವುಂಟಾಯಿತೊ ಇಲ್ಲವೊ ನಾನು ಅಱಿಯೆ '' ಎನಲು ; ದಾಂಡ್ಯಾಯನನು–'' ಎಲೈ ಸೌಧಾತಕಿಯೆ, ಈಗತಾನೇ ಪೂಜ್ಯನಾದ ವಸಿಷ್ಠಮಹಾಮುನಿಯು ಆಲೋಚಿಸಿ ಕೌಸಲ್ಯಾದೇವಿಯು ಸ್ನೇಹದಿಂ ತಾನೇ ಜನಕರಾಯನ ಸಮೀಪವನ್ನೆಯ್ದಿ ಆತನಂ ನೋಡುವಂತೆ ಬೋಧಿಸುವುದಕ್ಕೋಸ್ಕರ ತನ್ನ ಪತ್ನಿಯಾದ ಅರುಂಧತೀದೇವಿಯಂ ಕೌಸಲ್ಯಾದೇವಿಯ ಸಮೀಪಕ್ಕೆ ಕಳುಹಿಸಿದನು '' ಎನಲು ; ಸೌಧಾತಕಿಯು–'' ಎಲೈ ದಾಂಡ್ಯಾಯನನೆ, ಯಾವ ರೀತಿ ವೃದ್ಧರಾದ ಆ ವಸಿಷ್ಠಾದಿಗಳೆಲ್ಲರೂ ಅನ್ಯೋನ್ಯವಾಗಿ ಕೂಡಿದರೊ ಅದೇರೀತಿ ನಾವೆಲ್ಲರೂ ಬ್ರಹ್ಮಚಾರಿಗಳೊಡಗೂಡಿ ಬಾಲಕ್ರೀಡೆಗಳಿಂದ ಅನಧ್ಯಯನವೆಂಬ ಮಹೋತ್ಸವವಂ ಬಹುಮಾನಂಗೆಯ್ಯೋಣ. ಈಗ ಜನಕರಾಯನು ಎಲ್ಲಿ ಇದ್ದಾನೆ ? '' ಎಂದು ಕೇಳಲು ; ದಾಂಡ್ಯಾಯನನು–'' ಎಲೈ ಸೌಧಾತಕಿಯೇ, ಜನಕರಾಯನು ವಾಲ್ಮೀಕಿಮುನಿಯಂ ವಸಿಷ್ಠಮುನಿಯಂ ಸಹ ಚೆನ್ನಾಗಿ ಸೇವಿಸಿದವನಾಗಿ ಈಗ ಈ ಆಶ್ರಮಕ್ಕೆ ಹೊಱಗಿರುವ ಒಂದು ವೃಕ್ಷಮೂಲದಲ್ಲಿ ಕುಳಿತಿದ್ದಾನೆ. ಇತ್ತ ನೋಡು. ಈತನೇ ಜನಕರಾಯನು. ಗರ್ಭಪ್ರದೇಶದಲ್ಲಿ ಪ್ರಬಲವಾಗಿ ಜ್ವಲಿಸುವ ಅಗ್ನಿಯುಳ್ಳ ಜೀರ್ಣವಾದ ವೃಕ್ಷದಂತೆ ಹೃದಯದಲ್ಲಿ ನಿರಂತರವೂ ಸೇರಿಕೊಂಡಿರುವ ಸೀತಾವಿಷಯವಾದ ಶೋಕದಿಂ ದಹಿಸಲ್ಪಡುತ್ತಲಿದ್ದಾನೆ '' ಎಂದು ತೋಱಿಸಿದನು.

ಈರೀತಿ ಈ ಋಷಿಪುತ್ರರಿರ್ವರು ತಮ್ಮ ಪ್ರಶ್ನೋತ್ತರಗಳಿಂದ ಪೂರ್ವೋತ್ತರವಾದ ನಾಟಕದ ಕಥಾಭಾಗವಂ ಸೂಚನಂಗೆಯ್ದು ತೆರಳಿದವರಾಗಲು ;

ಆ ಬಳಿಕ ನೇಪಥ್ಯದಿಂ ಜನಕರಾಯನು ರಂಗಸ್ಥಾನವಂ ಪ್ರವೇಶಂಗೆಯ್ದು ಇಂತೆಂದನು :–'' ಎಲೈ, ನನ್ನ ಪುತ್ರಿಯಾದ ಸೀತೆಯ ವಿಷಯದಲ್ಲಿ ಯಾವ ಅಂಥ ದೋಷವಂ ಕಲ್ಪಿಸಿ ತ್ಯಾಗಂಗೆಯ್ದರೊ, ಮಹತ್ತಾದ ಆ ದೋಷಕಲ್ಪನೆಯು ಅತಿದುಸ್ಸಹವಾಗಿ ನನ್ನ ಹೃದಯವಂ ವ್ರಣಯುಕ್ತವನ್ನಾಗಿ ಮಾಡುತ್ತ ವ್ಯಥೆಪಡಿಸುವುದಾದ ಕಾರಣ ಅದಱಿಂದ ಪ್ರಸಕ್ತವಾದ ಕೋಪವು ಬಲವಾಗಿ ದೀರ್ಘವಾಗಿ ಬಹುಕಾಲವಾದರೂ ನೂತನವಾದಂತೆ ನನ್ನ ಮರ್ಮಸ್ಥಾನಗಳಂ ಗರಗಸದಂತೆ ಕೊಯ್ಯುತ್ತಲಿರುವುದಾಗಿ ಈಗಲೂ ಉಪಶಾಂತಿಯನ್ನೆಯ್ದುವುದಿಲ್ಲವಲ್ಲ ! ಈರೀತಿ ವಾರ್ಧಿಕ್ಯದಿಂ ದುಸ್ತರವಾದ ದುಃಖದಿಂದಲೂ ಮತ್ತು ದ್ವಾದಶದಿನೋಪವಾಸರೂಪವಾದ ಪರಾಕಸಾಂತಪನ ಇವು ಮೊದಲಾದ ತಪಸ್ಸುಗಳಿಂದಲೂ ಶೋಷಿಸಲ್ಪಟ್ಟು ನಷ್ಟಶರೀರಧಾತುಗಳುಳ್ಳ ನನ್ನ ಈ ದುಷ್ಟವಾದ ದೇಹವು ನಿರವಲಂಬವಾಗಿದ್ದರೂ ಹೇಗೆ ಈಗಲೂ ಕೂಡ ಬಿದ್ದುಹೋಗುವುದಿಲ್ಲ ? ನಾನು ಬುದ್ಧಿಪೂರ್ವಕವಾಗಿ ಈ ದುಷ್ಟವಾದ ದೇಹವಂ ತ್ಯಜಿಸುವೆನೆಂದರೆ, ಆತ್ಮಘಾತಕವಂ ಮಾಡಿದ ಪುರುಷರು ಗಾಢಾಂಧಕಾರದಿಂ ವ್ಯಾಪ್ತಗಳಾದ ಅಸೂರ್ಯಗಳೆಂಬ ಲೋಕಗಳನ್ನೆಯ್ದುವರೆಂದು ವೇದಶಾಸ್ತ್ರಜ್ಞರಾದ ಋಷಿಗಳು ಪೇಳುತ್ತಾರೆ. ಮತ್ತು ಈ ಸೀತಾವಿಷಯಕವಾದ ದುಃಖವು ಪ್ರಾಪ್ತವಾಗಿ ಅನೇಕ ಸಂವತ್ಸರಗಳು ಕಳೆದಂಥವಾದರೂ ಪ್ರತಿಕ್ಷಣದಲ್ಲೂ ಅದನ್ನೇ ಚಿಂತಿಸೋಣದಱಿಂ ಸ್ಫುಟವಾಗಿ ತೋಱುತ್ತಲಿರುವುದಾದ ಕಾರಣ ನೂತನವಾದಂತೆ ಅತಿದುಸ್ತರವಾಗಿರುವ ನನ್ನ ಈ ಅತ್ಯಂತವಾದ ದುಃಖ

ವೇಗವು ಶಾಂತಿಯನ್ನೈದುವುದಿಲ್ಲ! ಎಲೌ ತಾಯೆ, ಯಜ್ಞಭೂಮಿಯಲ್ಲಿ ಜನಿಸಿದವಳೇ, ಎಲೌ ಸೀತೆಯೇ, ಕಟಕಟಾ! ನಿನ್ನ ನಿರ್ಮಾಣವು ಈ ರೀತಿಯಾಗಿ ಪರಿಣಮಿಸಿತಲ್ಲ! ನಿನ್ನ ಆ ದುಃಖನಿಮಿತ್ತವಾಗಿ ನನಗೆ ಲಜ್ಜೆಯಿಂ ಮನಸ್ಸು ಬಂದಂತೆ ರೋದನವ ಮಾಡುವುದು ಕೂಡ ಶಕ್ಯವಲ್ಲ. ಕಟಕಟಾ! ಎಲೌ ಪುತ್ರಿಯಾದ ಸೀತೆಯೇ, ಪೂರ್ವದಲ್ಲಿ ಬಾಲ್ಯದಲ್ಲಿ ನಿಯಮವಿಲ್ಲದೆ ಒಂದು ಸಮಯದಲ್ಲಿ ದುಃಖಿಸುತ್ತ ಒಂದು ಸಮಯದಲ್ಲಿ ನಗುತ್ತಲೂ ಇರುವುದಾಗಿ ಮತ್ತು ಪ್ರಕಾಶಿಸುತ್ತ ಕೋಮಲವಾಗಿ ಮೊಗ್ಗುಗಳಂತೆ ಇರುವ ಕೆಲವು ದಂತಗಳ ತುದಿಗಳುಳ್ಳುದಾಗಿ, ಮತ್ತು ತೊದಲುಗೊಂಡು ಅಕ್ಷರಂಗಳು ಚೆನ್ನಾಗಿ ಹೊರಡದೆ ಇದ್ದರೂ ಮನೋಹರಗಳಾದ ನುಡಿಗಳುಳ್ಳ ಶಿಶುವಾಗಿರುವ ನಿನ್ನ ಮುಖವಂ ಈಗ ನಾನು ಸ್ಮರಿಸುತ್ತೇನೆ. ಎಲೌ ಪೂಜ್ಯಳಾದ ಭೂದೇವಿಯೇ, ನೀನು ಸತ್ಯವಾಗಿ ಅತಿದೃಢವಾದ ಹೃದಯವುಳ್ಳವಳಾಗಿ ಇದ್ದೀಯೆ. ಅದೇನೆಂದರೆ–ಎಲೌ ಭೂಮಿಯೇ, ನೀನು ಅಗ್ನಿಯು ಋಷಿಗಳು ವಸಿಷ್ಠಪತ್ನಿಯಾದ ಅರುಂಧತೀದೇವಿಯು ಗಂಗೆಯು ಮತ್ತು ರಘುವಂಶಕ್ಕೆ ಗುರುವಾದ ವಸಿಷ್ಠಮುನಿಯು ದೇವತೆಯಾದ ಸೂರ್ಯನು ಸಹ ಯಾವ ಸೀತೆಯ ಪ್ರಭಾವವಂ ಬಲ್ಲರೋ, ಮತ್ತು ವಾಗ್ದೇವತೆಯು ಪರಿಶುದ್ಧವಾದ ಬ್ರಹ್ಮವಿದ್ಯೆಯಂ ಪೆತ್ತಂತೆ ನೀನು ಯಾವ ಪುತ್ರಿಯಂ ಪೆತ್ತವಳಾದೆಯೊ, ಅಂಥ ಪರಿಶುದ್ಧಳಾಗಿದ್ದರೂ ಪುನಃ ಅಗ್ನಿಮುಖದಿಂದಲೂ ಶುದ್ಧಿಯನ್ನೈದಿರುವ ನಿನ್ನ ಪುತ್ರಿಯಾದ ಸೀತೆಗೆ ಬಂದಿರುವಂಥ ಕಷ್ಟವಂ, ಎಲೌ ಕಠಿನಚಿತ್ತಳೆ, ಏಕೆ ಸಹಿಸುತ್ತಲಿದ್ದೀಯೆ?'' ಎಂಬದಾಗಿ ಜನಕರಾಯನು ವೃಕ್ಷಮೂಲದಲ್ಲಿ ಕುಳಿತು ದುಃಖಿಸುತ್ತಿರಲು;

ಅಷ್ಟರೊಳಗೆ ನೇಪಥ್ಯದೊಳಗೆ ಒಬ್ಬ ಪುರುಷನು–''ಸಾವಧಾನವಾಗಿ ಪೂಜ್ಯರಾದ ಮಹಾದೇವಿಗಳು ಇತ್ತಿತ್ತ ಚಿತ್ತವಿಸಬೇಕು'' ಎಂದು ನುಡಿಯಲು;

ಅದಂ ಕೇಳಿ ಜನಕರಾಯನು–''ಎಲೈ, ಸೃಷ್ಟಿಯೆಂಬ ಮಂತ್ರಿಯಿಂದ ತೋರಿಸಲ್ಪಟ್ಟ ಮಾರ್ಗವುಳ್ಳವಳಾಗಿ ಪೂಜ್ಯಳಾದ ಅರುಂಧತೀದೇವಿಯು ಬಂದಳು'' ಎಂದು ಮೇಲಕ್ಕೆ ಎದ್ದವನಾಗಿ, ಇದೇನು ಮಹಾದೇವಿಯು ಬಂದವಳಾದಳು ಎಂದು ಚೆನ್ನಾಗಿ ನೋಡಿ, ''ಹಾ! ಇದೇನು ದಶರಥರಾಯನಿಗೆ ಧರ್ಮಪತ್ನಿಯಾದ ನನಗೆ ಪ್ರಿಯಸಖಿಯಾದ ಈ ಕೌಸಲ್ಯಾದೇವಿಯು ಬಂದಳು!'' ಎಂದು ಪೇಳಿ, ಚೆನ್ನಾಗಿ ನೋಡಿ– ''ಎಲೈ, ಯಾವನು ಈ ದೇವಿಯಂ ಆ ಕೌಸಲ್ಯಾದೇವಿಯೇ ಇವಳೆಂದು ಜ್ಞಾಪಿಸಿಕೊಳ್ಳಲು ಸಮರ್ಥನಾದಾನು? ಈ ದೇವಿಯಲ್ಲವೆ ದಶರಥಮಹಾರಾಯನ ಗೃಹದಲ್ಲಿ ಲಕ್ಷ್ಮೀದೇವಿಯಂತೆ ಇದ್ದವಳು? ಈಕೆಯು ಲಕ್ಷ್ಮಿಯಂತೆ ಇದ್ದಳೆಂದು ಉಪಮಾನವು ಹೇಳತಕ್ಕುದು ಏನು ಇದೆ? ಸಾಕ್ಷಾತ್ ಲಕ್ಷ್ಮಿಯಾಗಿಯೇ ಇದ್ದಳು. ಅಂಥ ಈ ಕೌಸಲ್ಯಾದೇವಿಯು ದೈವವಶದಿಂ ಈಗ ಇವಳು ಯಾರೋ ಎಂಬಂತೆ ಆದಳಲ್ಲ! ಕಟಕಟ! ಏನೋ ಚಿಂತಾಮಯವಾಗಿ ಒಂದಾನೊಂದು ದುಸ್ತರವಾದ ಕಷ್ಟವು ಸಂಭವಿಸಿತು! ಅಹೋ! ಕಾಲಗತಿಯು ಎಂಥದು ನೋಡಿದೆಯಾ? ಪೂರ್ವದಲ್ಲಿ ಯಾವ ಕೌಸಲ್ಯಾದೇವಿಯು ನನಗೆ ಆಕೃತಿಯಂ ತಾಳಿರುವ ಮಹೋತ್ಸವರೂಪವಾಗಿ ಇದ್ದಳೊ ಅಂಥ ಕೌಸಲ್ಯಾದೇವಿಯಂ ಈಗ ನೋಡುವುದು ವ್ರಣದಲ್ಲಿ ಕ್ಷಾರವಂ ಇಟ್ಟಂತೆ ದುಸ್ತರವಾಯಿತಲ್ಲಾ!'' ಎಂಬದಾಗಿ ಜನಕರಾಯನು ಚಿಂತಿಸುತ್ತಿರಲು;

ಆ ಬಳಿಕ ಅರುಂಧತಿಯು ಕೌಸಲ್ಯೆಯು ಘೃಷ್ಟಿಯೆಂಬ ಮಂತ್ರಿಯು ಸಹ ರಂಗಸ್ಥಾನವಂ ಪ್ರವೇಶಂಗೈಯುವರಾಗಲು ;

ಅರುಂಧತಿಯು ಕೌಸಲ್ಯೆಯಂ ಕುಱಿತು ಇಂತೆಂದಳು :–" ಎಲೌ ಮಹಾರಾಜಪತ್ನಿಯೆ, ನೀನೇ ಸಮೀಪವನ್ನೈದಿ ಜನಕರಾಯನಂ ನೋಡಬೇಕೆಂದು ಕುಲಗುರುಗಳಾಜ್ಞೆಯುಂಟಾಗಿದೆಯಾದುದಱಿಂದಲೇ ನಿನ್ನೊಡನೆ ಕೂಡ ನನ್ನಂ ಕಳುಹಿದರು. ಅದುಕಾರಣ ಇದೇನು ಅಡಿಗಡಿಗೂ ಮಹತ್ತಾದ ಆಲೋಚನೆಯಂ ಮಾಡುವೆ ? " ಎಂದು ಅರುಂಧತಿಯು ಪೇಳಲು ; ಘೃಷ್ಟಿಯು–" ಎಲೌ ಮಹಾರಾಜಪತ್ನಿಯೇ, ನೀನು ಮನಸ್ಸಂಸ್ಥೈರ್ಯಯುಕ್ತವಂ ಮಾಡಿ ಪೂಜ್ಯನಾದ ವಸಿಷ್ಠಮುನಿಯ ಆಜ್ಞೆಯಂ ಅನುಸರಿಸುವಳಾಗೆಂದು ನಾನು ವಿಜ್ಞಾಪಿಸುವೆನು " ಎಂದನು. ಅದಂ ಕೇಳಿ ಕೌಸಲ್ಯಾದೇವಿಯು– " ಎಲೌ ತಾಯೆ, ಇಂಥ ವಿಪತ್ಕಾಲದಲ್ಲಿ ಜನಕರಾಯನಂ ನೋಡಬೇಕೆಂಬುದು ಏಕಕಾಲದಲ್ಲಿ ಸಮಸ್ತದುಃಖಂಗಳಂ ಕೂಡಿ ನನ್ನ ಹೃದಯವಂ ಸಮೂಲವನ್ನಾಗಿ ಕಿತ್ತುಹಾಕಿತಲ್ಲವೆ ? ಆದಕಾರಣ ಶಿಥಿಲವಾದ ಮೂಲಬಂಧನವುಳ್ಳ ನನ್ನ ಹೃದಯವಂ ಸಮಾಧಾನಪಡಿಸಲೋಸುಗ ನಾನು ಸಮರ್ಥಳಲ್ಲವು " ಎಂದು ಪೇಳಲು ; ಅದಂ ಕೇಳಿ ಅರುಂಧತಿಯು– " ಎಲೌ ಕೌಸಲ್ಯೆಯೇ, ಲೋಕದಲ್ಲಿ ಮನುಷ್ಯರಿಗೆ ಬಂಧುಜನವಿಯೋಗದಿಂ ಪುಟ್ಟಿರುವ ದುಃಖಗಳು ನಿರಂತರವೂ ಅನುಭವವಿಷಯಗಳಾಗಿದ್ದರೂ ಇಷ್ಟವಾದ ಜನವು ದೃಷ್ಟಿವಿಷಯವಾದರೆ ಮತ್ತೂ ದುಸ್ಸಹಂಗಳಾಗಿ ಸಹಸ್ರ ಪ್ರವಾಹಂಗಳೊಡನೆ ಕೂಡಿದಂತೆ ಮೇರೆದಪ್ಪಿ ಉಬ್ಬುತ್ತಲಿವೆಯಾದಕಾರಣ ನೀನು ಸ್ಥಿರಚಿತ್ತಳಾಗು " ಎಂದು ಸಮಾಧಾನಪಡಿಸಿದಳು. ಕೌಸಲ್ಯೆಯು–" ಎಲೌ ಪೂಜ್ಯಳೇ, ಈತನಿಗೆ ಮಗಳಾಗಿ ನನಗೆ ಸೊಸೆಯಾಗಿ ಅರಣ್ಯದಲ್ಲಿ ತ್ಯಾಗಂಗೈಯಲ್ಪಟ್ಟಿರುವ ಅಂಥ ಸೀತೆಗೆ ತಂದೆಯಾದ ಈ ಜನಕರಾಯನಿಗೆ ಈಗ ನಾವು ಹೇಗೆ ಮುಖವಂ ತೋಱಿಸೋಣವೆಂದು ಲಜ್ಜಾಯುಕ್ತಳಾಗುತ್ತೇನೆ " ಎನಲು ; ಅರುಂಧತಿಯು–" ಎಲೌ ರಾಜಪತ್ನಿಯೇ, ಈ ಜನಕರಾಯನು ನಿಮಗೆ ಪ್ರಶಸ್ತವಾದ ಬಂಧುವೇ ಹೊಱತು ಮತ್ತೊಬ್ಬನಲ್ಲ. ಮತ್ತು ಯಾಜ್ಞ್ಯವಲ್ಕ್ಯನೆಂಬ ಮಹಾಮುನಿಯು ಜನಕರಾಯನಿಗೋಸುಗ ಬ್ರಹ್ಮತತ್ವವಂ ಉಪದೇಶವಂ ಮಾಡಿ ಇದ್ದಾನೆಯಾದುದಱಿಂ ಈ ಜನಕರಾಯನು ಉಪಶಾಂತನಾಗಿ ಇದ್ದಾನೆಯಾದಕಾರಣ ನೀನು ಚಿಂತಿಸಬೇಡ " ಎಂದಳು. ಕೌಸಲ್ಯೆಯು–" ಎಲೌ ತಾಯೆ, ರಾಜರ್ಷಿಯಾದ ಈ ಜನಕರಾಯನು ನನ್ನ ಪತಿಯಾದ ಮಹಾರಾಜನಿಗೆ ಹೃದಯಕ್ಕಿಂತಲು ಭೇದವಿಲ್ಲದಿರುವ ಪರಮಾಪ್ತನಾದವನು, ಬಾಲಕಳಾದ ನನ್ನ ಸೊಸೆಯಾದ ಸೀತೆಗೆ ತಂದೆಯಾದವನು. ಹಾ ! ಕಟಕಟಾ ! ಈಗ ಈತನ ದರ್ಶನದಿಂ ದುಃಖಸಂಬಂಧವಿಲ್ಲದೆ ರಮಣೀಯವಾದ ಆ ಕಾಲದಲ್ಲಿರುವ ನನ್ನ ವಿಭವಂಗಳನೆಲ್ಲವಂ ನೆನೆಸಿಕೊಳ್ಳುವೆನು. ಹಾ ! ದೈವವೇ ! ಈಗ ನಾನು ಭಾಗ್ಯಹೀನಳಾದುದಱಿಂ ನನಗೆ ಸುಖಲೇಶವಾದರೂ ಇಲ್ಲವಲ್ಲ ! " ಎಂದು ತನ್ನಂ ತಾನೇ ನಿಂದಿಸಿಕೊಂಡಳು. ಜನಕರಾಯನು ಅರುಂಧತಿಯನ್ನು ನೋಡಿ ಸಮೀಪವನ್ನೈದಿ–" ಎಲೌ ಪೂಜ್ಯಳಾದ ಅರುಂಧತೀದೇವಿಯೆ, ಜನಕನಾಮಕನಾದ ನಾನು ನಿನಗೆ ಅಭಿವಾದನವಂ ಮಾಡುತ್ತೇನೆ. ಎಲೌ ಪೂಜ್ಯಳೆ, ಪರಮಪಾವನವಾದ ತಪಸ್ಸಿಗೆ ನಿಧಿಯಾಗಿ ಇದ್ದರೂ,

ಪೂರ್ವಿಕರಾದ ಗುರುಗಳಿಗೆ ಸಹ ಪರಮಗುರುವಾಗಿ ಇದ್ದರೂ ನಿನ್ನ ಪತಿಯಾದ ವಸಿಷ್ಠಮುನಿಯು ಯಾವ ನಿನ್ನಿಂದ ತಾನು ಪರಿಶುದ್ಧನೆಂದು ತಿಳಿಯುವನೋ ಮೂರು ಲೋಕಂಗಳಲ್ಲಿಯೂ ಮಂಗಳಕರಳಾಗಿ ಜಗತ್ತಿಗೆ ವಂದ್ಯಳಾಗಿಯೂ ಇರುವ ಅಂಥ ಪರಿಶುದ್ಧಳಾಗಿರುವ ನಿನ್ನಂ ನಾನು ಭಗವತಿಯಾದ ಸಂಧ್ಯಾದೇವಿಯನ್ನಂತೆ ಭೂಮಿಯನ್ನೈದಿರುವ ಶಿರಸ್ಸಿನಿಂದ ವಂದಿಸುತ್ತೇನೆ'' ಎಂಬದಾಗಿ ಜನಕರಾಯನು ವಂದಿಸಲು; ಅರುಂಧತಿಯು—'' ಎಲೈ ಜನಕರಾಯನೆ, ನಿನಗೆ ಎಂದಿಗೂ ಚ್ಯುತಿಯಿಲ್ಲದಿರುವ ಬ್ರಹ್ಮಜ್ಯೋತಿಸ್ಸು ಸಾಕ್ಷಾತ್ಕರಿಸಲಿ! ಮತ್ತು ಯಾವವನು ಅಂತರಿಕ್ಷದಲ್ಲಿ ಪ್ರಕಾಶಿಸುವನೊ, ರಜೋಗುಣಂಗಳಿಗಿಂತಲು ಪರನಾಗಿ ಪ್ರಕಾಶಿಸುವ ಆ ಸೂರ್ಯನು ನಿನ್ನಂ ಪರಿಶುದ್ಧನಂ ಮಾಡಲಿ!'' ಎಂದು ಅನುಗ್ರಹವಂ ಮಾಡಿದಳು. ಜನಕರಾಯನು ನೋಡಿ—'' ಎಲೈ ಪೂಜ್ಯನಾದ ಘೃಷ್ಟಿಯೇ, ಪ್ರಜಾಪಾಲಕನಾದ ಅರಸಿಗೆ ತಾಯಾದ ಈಕೆಗೆ ಆರೋಗ್ಯವೇ ಏನು?'' ಎನಲು; ಘೃಷ್ಟಿಯು ಆ ವಚನವಂ ಕೇಳಿ—'' ಎಲೈ, ನಾವು ಸಂಪೂರ್ಣವಾಗಿ ಅತಿನಿಷ್ಠುರವಾಗಿಯೂ ಈತನಿಂದ ನಿಂದಿಸಲ್ಪಟ್ಟೆವು'' ಎನುತ, '' ಎಲೈ ರಾಜರ್ಷಿಯಾದ ಜನಕರಾಯನೇ, ಈ ಕೋಪದಿಂದಲೇ, ಬಹುಕಾಲದಿಂ ಪರಿತ್ಯಾಗಮಾಡಲ್ಪಟ್ಟ ರಾಮನ ದರ್ಶನವುಳ್ಳವಳಾಗಿ ಅತಿದುಃಖಿತಳಾಗಿಯೂ ಇರುವ ಈ ಕೌಸಲ್ಯಾದೇವಿಯಂ ನೀನು ಪುನಃ ದುಃಖಪಡಿಸುವುದು ಯೋಗ್ಯವಲ್ಲ. ರಾಮಭದ್ರನಿಗೂ ದೈವಯೋಗದಿಂದ ಏನೋ ಒಂದಾನೊಂದು ದುರ್ಯೋಗವು ಸಂಭವಿಸಿತಲ್ಲ! ಅದೇನೆಂದರೆ—ಅತಿತುಚ್ಛರಾದ ಪುರಜನರು ಸೀತಾವಿಷಯವಾಗಿ ಸರ್ವತ್ರ ದುಸ್ಸಹವಾದ ಅಪವಾದವಂ ವ್ಯಾಪಿಸುವಂತೆ ಮಾಡುವರಾಗಿ ತಾವು ಅಜ್ಞರಾದಕಾರಣ ದ್ವೀಪಾಂತರದಲ್ಲಿ ಸೀತೆಗೆ ಉಂಟಾದ ಅಗ್ನಿಶುದ್ಧಿಯಂ ಯಥಾರ್ಥವನ್ನಾಗಿ ತಿಳಿಯುವುದಿಲ್ಲವೆಂದು ರಾಮಭದ್ರನು ಇಂಥ ಘೋರಕರ್ಮವಂ ಮಾಡಿದನಲ್ಲವೆ?'' ಎಂದನು. ಜನಕರಾಯನು ಅದಂ ಕೇಳಿ ಅತಿರೋಷದೊಡಗೂಡಿ—'' ಎಲೈ ಘೃಷ್ಟಿಯೆ, ನಮ್ಮ ಪುತ್ರಿಯಾದ ಸೀತೆಯಂ ಪರಿಶುದ್ಧಳನ್ನಾಗಿ ಮಾಡುವುದರಲ್ಲಿ ಅಗ್ನಿಯೆಂಬವನು ಯಾವ ಯೋಗ್ಯನೆಂದು ನೀನು ಹೇಳುವೆ? ಕಟಕಟಾ! ಈರೀತಿ ಪೇಳುವರಾಗಿ ಜನರು ಮೊದಲೇ ರಾಮನಿಂದ ಅವಮಾನಂಗೈಯಲ್ಪಟ್ಟಿರುವ ನಮ್ಮಂ ಅವಮಾನಂಗೈಯುತ್ತಲಿದ್ದಾರೆಯಲ್ಲವೆ?'' ಎಂದು ವ್ಯಸನಪಟ್ಟವನಾಗಲು; ಅರುಂಧತಿಯು ನಿಟ್ಟುಸಿರಂ ಬಿಟ್ಟು—'' ಎಲೈ ಆಜನ್ಮಪರಿಶುದ್ಧಳಾದ ಸೀತೆಯಂ ಶುದ್ಧಿಗೈಯುವುದರಲ್ಲಿ ಅಗ್ನಿಯು ಯಾವ ಯೋಗ್ಯನು, ಎಂದು ಪೇಳುವುದು ಸತ್ಯವೇ ಸರಿ. ಅದೆಂತೆನೆ:—ಮಗಳಾದ ಸೀತೆಯಂ ಕುರಿತು, ಅಗ್ನಿ ಅಗ್ನಿಯೆಂಬ ಅಕ್ಷರಂಗಳು ಲಘುಗಳಾದಂಥವು; ಸೀತೆಯೆಂಬ ಅಕ್ಷರಗಳೇ ಸಂಪೂರ್ಣವಾಗಿ ತೃಪ್ತಿಯನುಂಟುಮಾಡುವುವು. ಎಲೌ ಮಗಳಾದ ಸೀತೆಯೇ, ನೀನು ನನಗೆ ಶಿಶುವಾಗಿಯಾದರೂ ಶಿಷ್ಯಳಾಗಿಯಾದರೂ ಇರುವೆಯೆಂಬುದು ಯಾವುದುಂಟೊ ಆ ಶಿಶುಭಾವ ಶಿಷ್ಯಭಾವಂಗಳು, ಅದಂತಿರಲಿ, ನಿನ್ನ ಪರಿಶುದ್ಧತ್ವವು ನನಗೆ ನಿನ್ನಲ್ಲಿ ಭಕ್ತಿಯನ್ನುಂಟುಮಾಡುತ್ತಲಿದೆ. ನಿನ್ನಲ್ಲಿ ಶಿಶುತ್ವವಾದರೂ ಇರಲಿ, ಶಿಷ್ಯತ್ವವಾದರೂ ಇರಲಿ, ನೀನು ಲೋಕಗಳಿಗೆ ವಂದಿಸಲು ಯೋಗ್ಯಳಾಗಿದ್ದೀಯಲ್ಲಾ! ಗುಣವಂತರಲ್ಲಿ ಗುಣವೇ ಪೂಜಿಸುವುದಕ್ಕೆ ನಿಮಿತ್ತವಾಗುವುದೆ

ಹೋಯಿತು ಮಿಗಿಲಾದ ಲಕ್ಷಣವು ವಯಸ್ಸು ಸಹ ಪೂಜಾನಿಮಿತ್ತವಾಗುವುದಿಲ್ಲ'' ಎಂದಳು. ಕೌಸಲ್ಯೆಯು-''ಎಲೌ, ವೇದನೆಗಳು ದುಸ್ಸಹಗಳಾಗಿ ಹೃದಯವಂ ಸಮೂಲವನ್ನಾಗಿ ಕೀಳುತ್ತಲಿವೆ. ಕಟಕಟಾ!'' ಎಂದು ಮೂರ್ಛೆಯನ್ನೈದಿದಳು. ಜನಕರಾಯನು ನೋಡಿ-''ಹಾ! ಇದೇನು!'' ಎಂದು ಪೇಳಲು; ಅರುಂಧತಿಯು-''ಎಲೈ ರಾಜರ್ಷಿಯೆ, ಮತ್ತೊಂದೇನಿದೆ? ಈ ಘೋರವಾದ ವಿಪತ್ತಿನಲ್ಲಿ ಪರಮಮಿತ್ರನಾದ ನೀನು ದೃಷ್ಟಿವಿಷಯನಾಗಲು ನಿನ್ನ ಸಖಿಯಾದ ಈ ಕೌಸಲ್ಯಾದೇವಿಯು ಅಭಿನ್ನಳಾದ ಕಾರಣ ಪೂರ್ವದಲ್ಲಿ ಆ ದಶರಥಮಹಾರಾಯನು ಇದ್ದ ರೀತಿಯಂ ಆ ಸೌಖ್ಯಾತಿಶಯವಂ ಆ ಪುತ್ರಸಂಪತ್ತಂ ನಿತ್ಯೋತ್ಸವಯುಕ್ತಂಗಳಾದ ಆ ದಿವಸಗಳಂ ಸಹ ಸ್ಮರಿಸಿಕೊಂಡವಳಾದುದಱಿಂ ದುಃಖವಂ ಸಹಿಸಲಾಱದೆ ಮೂರ್ಛೆಯನ್ನೈದಿದಳು. ಲೋಕದಲ್ಲಿ ಉತ್ತಮರಾದ ಸ್ತ್ರೀಯರ ಚಿತ್ತವು ಪುಷ್ಪದಂತೆ ಅತಿಕೋಮಲವಾಗಿ ಇರುವುದಲ್ಲವೆ?'' ಎಂದು ಪೇಳಿದಳು. ಅದಂ ಕೇಳಿ ಜನಕರಾಯನು-''ಕಟಕಟಾ! ನಾನು ಸರ್ವಪ್ರಕಾರದಿಂದಲೂ ಪಾಪಿಯಾಗುತ್ತೇನೆ. ಅದೇನೆಂದರೆ:-ಬಹುಕಾಲಕ್ಕೆ ನೋಡಲ್ಪಟ್ಟವಳಾಗಿ ಪ್ರಿಯಮಿತ್ರನಾದ ದಶರಥಮಹಾರಾಯನಿಗೆ ಪ್ರಿಯಪತ್ನಿಯಾಗಿಯೂ ಇರುವ ಈ ಕೌಸಲ್ಯಾದೇವಿಯಂ ನಾನು ಶತ್ರುವಂತೆ ನೋಡುವೆನಾದಕಾರಣ ನನ್ನಂತೆ ಘಾತುಕನು ಎಲ್ಲೂ ಇಲ್ಲ! ನನಗೆ ಆ ದಶರಥಮಹಾರಾಯನೇ ಶ್ಲಾಘ್ಯನಾದ ಸಂಬಂಧಿಯಾಗಿ, ಅವನೇ ಪ್ರಿಯಮಿತ್ರನಾಗಿ, ಅವನೇ ನನ್ನ ಹೃದಯವಾಗಿ, ಮತ್ತು ಅವನೇ ಸಾಕ್ಷಾತ್ ಆನಂದಸ್ವರೂಪನಾಗಿ, ಅವನೇ ನಾನು ಜೀವಿಸುವುದಕ್ಕೆ ಸಮಸ್ತ ಫಲಸ್ವರೂಪನಾಗಿ ಮತ್ತು ಶರೀರವು ಜೀವವು ಇವಕ್ಕಿಂತಲೂ ಅತಿಪ್ರಿಯವಾದುದು ಯಾವುದುಂಟೊ ಅದುಸಹ ನನಗೆ ಅವನೇ ಆಗಿ ಇದ್ದನು. ಶ್ರೀಮಂತನಾದ ಆ ದಶರಥ ಮಹಾರಾಯನು ನನಗೆ ಸರ್ವಸ್ವವಾಗಿ ಇದ್ದನಲ್ಲ! ಕಟಕಟಾ! ಇವಳೇ ಕೌಸಲ್ಯಾದೇವಿಯಲ್ಲವೆ? ಯಾವಾಗ ಈ ಕೌಸಲ್ಯಾದೇವಿಗೂ ಪತಿಯಾದ ದಶರಥಮಹಾರಾಯನಿಗೂ ಏಕಾಂತದಲ್ಲಿ ಪರಸ್ಪರ ಸ್ವಾಧೀನತ್ವವಿಲ್ಲದೆ ಪೋಗುವುದೊ ಆಗ ಆ ದಂಪತಿಗಳಿರ್ವರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ನಾನು ನಿಂದೆಯೊಡಗೂಡಿರುವ ಆಗ್ರಹಕ್ಕೆ ಪಾತ್ರನಾದೆನು. ಆ ಬಳಿಕೆ ಈ ದಂಪತಿಗಳಿಗೆ ಇರ್ವರಿಗೂ ಪರಸ್ಪರವಾಗಿ ಪ್ರಸಾದವುಂಟಾಗುವ ವಿಧಾನವು ಕೋಪವುಂಟಾಗುವ ವಿಧಾನವು ಸಹ ನನ್ನ ಅಧೀನವಾಗಿಯೇ ಇದ್ದಂಥದಾಯಿತು ಅಥವಾ ಸಾಕು, ಅದೆಲ್ಲವಂ ಸ್ಮರಿಸಿಕೊಂಡು ಫಲವೇನು? ಈಗ ಅದೆಲ್ಲವೂ ಸ್ಮರಿಸಲ್ಪಟ್ಟರೆ ಬಲಾತ್ಕರಿಸಿ ಹೃದಯವಂ ದಹಿಸುತ್ತಲಿದೆ'' ಎಂಬದಾಗಿ ಜನಕರಾಯನು ವ್ಯಸನಪಡಲು; ಅರುಂಧತಿಯು-''ಈ ಕೌಸಲ್ಯೆಯ ಹೃದಯವು ಅತ್ಯಂತವಾಗಿ ನಿಶ್ವಾಸವಂ ತಡೆದಿರುವುದಱಿಂದ ನಿಶ್ಚಲವಾಗಿ ಇದೆ'' ಎಂದು ಹೃದಯವಂ ಸ್ಪರ್ಶಿಸಿ-''ಹಾ, ಕಷ್ಟ!'' ಎಂದಳು. ಜನಕರಾಯನು-''ಹಾ! ಪ್ರಿಯಸಖಿಯೇ!'' ಎಂದು ತನ್ನ ಕಮಂಡಲದಲ್ಲಿರುವ ಜಲದಿಂ ಕೌಸಲ್ಯೆಯಂ ಮಾರ್ಜನವಂ ಮಾಡಿ-''ಎಲೈ, ಲೋಕದಲ್ಲಿ ದೈವವು ಮಿತ್ರನಂತೆ ಮೊದಲು ಸುಖಪ್ರದವಾಗಿ ಏಕರೂಪವಾಗಿರುವ ತನ್ನ ಅನುಕೂಲತ್ವವಂ ಪ್ರಕಟಂಗೈದು, ಆ ಬಳಿಕ ಆಕಸ್ಮಿಕವಾಗಿ ಪ್ರತಿಕೂಲವಾಗುವುದಱಿಂ ಅತಿದುಸ್ಸಹ

ವಾಗಿ ಮನಸ್ಸಿಗೆ ಮಹಾವ್ಯಥೆಯಂ ಕಲ್ಪಿಸುತ್ತಲಿದೆ '' ಎಂದು ಜನಕರಾಯನು ಪೇಳಲು ; ಕೌಸಲ್ಯಾದೇವಿಯು ಸ್ವಲ್ಪ ಸಮಾಧಾನಪಟ್ಟವಳಾಗಿ,–'' ಹಾ ಮಗಳೇ ! ಹಾ ಸೀತೆಯೇ ! ಎಲ್ಲಿ ಇದ್ದೀಯೆ ? ವಿವಾಹಲಕ್ಷ್ಮಿಯ ಪರಿಗ್ರಹದಿಂ ಅತಿಶುಭಕರವಾಗಿ, ಉದಯಿಸುತ್ತಲಿರುವ ಚಂದ್ರಿಕೆಯಿಂ ಶೋಭಿಸುವ ಚಂದ್ರನಂತೆ ಅತಿಸುಂದರವಾಗಿ, ವಿಕಾಸಯುಕ್ತವಾಗಿಯು ಇರುವ ಮನೋಹರವಾದ ನಿನ್ನ ಮುಖಕಮಲವಂ ಸ್ಮರಿಸುತ್ತೇನೆ. ಎಲೌ ಮಗಳೆ, ಬಾ. ಪುನಃ ನನ್ನ ತೊಡೆಯಲ್ಲಿ ಕುಳಿತುಕೊಳ್ಳುವಳಾಗು. ನಾನಾಪ್ರಕಾರದಿಂ ಮಹಾರಾಜನಾದ ಈ ಜನಕರಾಯನು ಈ ರೀತಿ ಪೇಳುತ್ತಲಿದ್ದಾನೆ. ಈ ಜನಕರಾಯನ ಪುತ್ರಿಯಾದ ಸೀತೆಯು ರಘುವಂಶದಲ್ಲಿ ಅತಿವೃದ್ಧರಾದ ಅರಸುಗಳಿಗೆ ಸೊಸೆಯಾದಳು, ನಮಗಾದರೊ ಮಗಳೇ ಹೊಱತು ಮತ್ತೊಬ್ಬಳಲ್ಲ '' ಎಂದು ವ್ಯಸನಪಟ್ಟಳು. ಅರುಂಧತೀದೇವಿಯು–'' ಎಲೈ, ಈ ಕೌಸಲ್ಯಾದೇವಿಯು ಪೇಳಿದ ಅರ್ಥವು ಸತ್ಯವೇ ಸರಿ. ಅದೆಂತೆನೆ:–ಶಾಂತಾದೇವಿಯೊಡಗೂಡಿ ಐದು ಮಂದಿ ಮಕ್ಕಳುಳ್ಳವನಾದರೂ ಆ ದಶರಥ ಮಹಾರಾಯನಿಗೆ ಶ್ರೀರಾಮನೊಬ್ಬನೇ ವಿಶೇಷವಾಗಿ ಪ್ರೇಮಪಾತ್ರನಾದವನು. ಅದೇ ರೀತಿ ನಾಲ್ಕು ಮಂದಿ ಸೊಸೆಯರೊಳಗೆ ಈ ಜನಕರಾಯನ ಪುತ್ರಿಯಾದ ಸೀತೆಯೊಬ್ಬಳೇ ಪ್ರೀತಿಪಾತ್ರಳಾಗಿ ಇದ್ದಳೆ ಹೊಱತು ಮತ್ತೊಬ್ಬಳು ಆ ರೀತಿ ಪ್ರೀತಿವಿಷಯಳಲ್ಲ '' ಎಂದು ಪೇಳಲು ; ಅದಂ ಕೇಳಿ ಜನಕರಾಯನು–'' ಎಲ್ಮೆ ಪ್ರಿಯಮಿತ್ರನಾದ ಮಹಾರಾಜನಾದ ದಶರಥನೇ, ನನಗೆ ಇಂಥ ವ್ಯಸನವು ಪ್ರಾಪ್ತವಾದರೂ ಸರ್ವಪ್ರಕಾರಂಗಳಿಂದಲೂ ಹೃದಯಕ್ಕೆ ಹಿತಕರನಾದ ನಿನ್ನಂ ನಾನು ಹೇಗೆ ಮಱೆಯುವೆನು ? ಎಲೈ ಅರಸೆ, ಲೋಕದಲ್ಲಿ ಕನ್ಯೆಗೆ ತಂದೆಗಳಾದವರು ಅಳಿಯನಿಗೆ ಆಪ್ತರಾದ ಜನರಂ ವಿಶೇಷವಾಗಿ ಪೂಜಿಸುವರು. ಈ ನಮ್ಮ ಸಂಬಂಧದಲ್ಲಿ ನೀನೇ ನನ್ನಂ ಬಹುಪ್ರಕಾರದಿಂ ಪೂಜಿಸಿದವನಾದುದಱಿಂ ಆ ಲೋಕರೀತಿಯು ವಿಪರೀತವಾಯಿತು. ಅಂಥ ಆಪ್ತಬಂಧುವಾದ ನೀನೂ ಕೂಡ ಮೃತ್ಯುವಿನಿಂದ ಅಪಹರಿಸಲ್ಪಟ್ಟೆ. ಮತ್ತು ನಮ್ಮ ಸಂಬಂಧಕ್ಕೆ ಮೂಲಕಾರಣವಾದ ಸೀತೆಯೂ ಕೂಡ ಅದೃಶ್ಯಳಾದಳು. ಈ ರೀತಿ ಕಾಲಗತಿಯು ದುಸ್ಸಹವಾದರೂ ಘೋರವಾದ ಈ ಜೀವಲೋಕವೆಂಬ ನರಕದಲ್ಲಿ ಬಿದ್ದಿರುವ ಪರಮಪಾಪಿಯಾದ ನನ್ನ ಜೀವನವಂ ನಿಂದಿಸು ! ನಾನೇನುಮಾಡಲಿ ? '' ಎಂದು ವ್ಯಥೆಪಟ್ಟನು. ಕೌಸಲ್ಯಾದೇವಿಯು–'' ಎಲೌ ಸೀತೆಯೇ, ದೃಢವಾದ ವಜ್ರಲೇಪದಿಂ ಖಚಿತವಾಗಿ, ಚಲನವಿಲ್ಲದುದಾಗಿರುವ ಈ ದುಷ್ಟವಾದ ಜೀವವು ಭಾಗ್ಯಹೀನಳಾದ ನನ್ನಂ ಬಿಟ್ಟು ಪೋಗುವುದಿಲ್ಲವಲ್ಲ ! ನಾನೇನುಮಾಡಲಿ ? '' ಎಂದು ದುಃಖಿಸಲು ; ಅರುಂಧತೀದೇವಿಯು–'' ಎಲೌ ಮಹಾರಾಜಪತ್ನಿಯೇ, ಸಮಾಧಾನಪಡುವಳಾಗು. ಸರ್ವಥಾ ಈರೀತಿಯಲ್ಲಿ ಕಣ್ಣೀರಂ ಬಿಟ್ಟವರುಂಟೆ ? ಸಮಯವಿಶೇಷಗಳಲ್ಲಾದರೂ ಕಣ್ಣೀರಿಗೆ ವಿಶ್ರಾಂತಿಯಂ ಮಾಡಬೇಕು. ಮತ್ತು ಚಿತ್ತವಂ ಸಮಾಧಾನಪಡಿಸುವುದಕ್ಕೆ ಮತ್ತೊಂದು ಕಾರಣವುಂಟಲ್ಲಾ ! ಅದೇನೆಂದರೆ :–ಋಷ್ಯಶೃಂಗಮುನಿಯ ಆಶ್ರಮದಲ್ಲಿ ನಿಮ್ಮ ಕುಲಗುರುವು ನಿಮ್ಮಂ ಕುಱಿತು–ಎಲೌ, ರಾಮಭದ್ರನು ಲೋಕಾಪವಾದ ನಿಮಿತ್ತವಾಗಿ ಸೀತೆಯಂ ತ್ಯಾಗಂಗೈದನೆಂದು ನೀವು ಅತ್ಯಂತವಾಗಿ ದುಃಖಿಸಬೇಡಿ. ದೈವಗತಿಯು ಆ ರೀತಿ ಆಗತಕ್ಕುದಾಗಿದ್ದಕಾರಣ

ಆ ರೀತಿ ನಡೆಯಿತು. ಆದರೂ ಸೀತೆಯಂ ತ್ಯಜಿಸಿದುದು ಶುಭಕರವಾದ ಮಹಾಫಲಕ್ಕೆ ಕಾರಣವಾಗುತ್ತದೆ, ಎಂದು ಹೇಳಿದ ಕಾರಣವಂ ನೀನು ಸ್ಮರಿಸುವುದಿಲ್ಲವೆ ಏನು ? '' ಎಂದು ಸಂತೈಸಿದಳು. ಅದಂ ಕೇಳಿ ಕೌಸಲ್ಯೆಯು—'' ಎಲೌ ಪೂಜ್ಯಳೆ, ಭಗ್ನವಾದ ಮನೋರಥವುಳ್ಳ ನನಗೆ ಇನ್ನು ಶುಭವುಂಟಾಗುತ್ತದೆ ಎಂಬ ಆಶೆಯು ಏತಱಿಂದ ಉಂಟಾದೀತು ! '' ಎಂದು ಪೇಳಲು ; ಅರುಂಧತೀದೇವಿಯು—'' ಎಲೌ ರಾಜಪತ್ನಿಯೇ, ಆದರೆ ನಿಮ್ಮ ಗುರುಗಳ ವಚನವು ಅನೃತವೆಂದು ತಿಳಿಯುವೆಯೊ ಏನು ? ಎಲೌ ಕ್ಷತ್ರಿಯ ಕುಲೋತ್ಪನ್ನಳೆ, ನೀನು ಈ ರೀತಿ ತಿಳಿಯತಕ್ಕುದಲ್ಲ. ಬ್ರಹ್ಮಸಾಕ್ಷಾತ್ಕಾರವುಂಟಾಗಿರುವ ಬ್ರಾಹ್ಮಣರ ಯಾವ ವಚನಂಗಳುಂಟೊ ಅವುಗಳಲ್ಲಿ ನಿನಗೆ ಸಂಶಯಬೇಡ. ಇಂಥ ಈ ಬ್ರಹ್ಮನಿಷ್ಠರಾದ ಋಷಿಗಳ ವಾಕ್ಕಿನಲ್ಲಿ ಶುಭಕರಳಾದ ಲಕ್ಷ್ಮಿಯು ಉದ್ಯುಕ್ತಳಾಗಿರುವ ಳಲ್ಲವೆ ? ಇಂಥ ಮಹಾತ್ಮರಾದ ಋಷಿಗಳು ವ್ಯರ್ಥವಾಗಿ ವಚನವಂ ನುಡಿಯುವರಲ್ಲ.'' ಎಂದು ಪೇಳಿದಳು.

ಅಷ್ಟಱೊಳಗೆ ನೇಪಥ್ಯದಲ್ಲಿ ಮಹತ್ತಾದ ಕೋಲಾಹಲವುಂಟಾಯಿತು. ಎಲ್ಲರೂ ಅದಂ ಕೇಳುತ್ತಲಿರಲು ;

ಜನಕರಾಯನು ಅದಂ ಕೇಳಿ—'' ಎಲೈ ಶಿಷ್ಟರಾದ ವಸಿಷ್ಠಾದಿಗಳು ಆಶ್ರಮಕ್ಕೆ ಬಂದವರಾದಕಾರಣ ಶಿಷ್ಯಾನಧ್ಯಯನವೆಂದು ವಿದ್ಯಾಭ್ಯಾಸವಂ ಬಿಟ್ಟು ತಡೆಯಿಲ್ಲದೆ ಕ್ರೀಡಿಸುತ್ತಲಿರುವ ಬಾಲಬ್ರಹ್ಮಚಾರಿಗಳ ಕೋಲಾಹಲವಲ್ಲವೆ ಇದು ? '' ಎನಲು ; ಕೌಸಲ್ಯೆಯು—'' ಬಾಲ್ಯವೆಂಬುದು ಸುಲಭವಾದ ಸುಖವುಳ್ಳುದಾಗಿ ಇರುವುದು. ಎಲೈ, ಇದೇನು ಈ ಬ್ರಹ್ಮಚಾರಿಗಳ ಮಧ್ಯದಲ್ಲಿ ಈ ಬಾಲಕನು ರಾಮಚಂದ್ರನ ಬಾಲ್ಯ ಸಂಪತ್ತಂ ಅವಲಂಬಿಸಿಕೊಂಡಿರುವನಾಗಿ ಮನೋಹರಂಗಳಾಗಿ ಕೋಮಲಗಳಾಗಿ ಯೂ ಇರುವ ತನ್ನ ಅಂಗಗಳಿಂದ ನಮ್ಮ ನೇತ್ರಂಗಳಂ ಆನಂದಪಡಿಸುತ್ತಲಿದ್ದಾನೆ. ಇವನಾರು ?'' ಎಂದು ನೋಡಿದಳು. ಅರುಂಧತಿಯು ಆ ಕುಮಾರನಂ ನೋಡಿ ಸಂತೋಷ ಕುತೂಹಲಗಳೊಡಗೂಡಿ ತನ್ನ ಮನಸ್ಸಿನಲ್ಲಿ ಇಂತೆಂದಳು :—ಎಲೈ ಗಂಗಾದೇವಿಯಿಂ ನನಗೆ ಏಕಾಂತದಲ್ಲಿ ತಿಳುಹಿಸಲ್ಪಟ್ಟ ಕರ್ಣಾಮೃತವಾದ ರಹಸ್ಯಾರ್ಥವು ಇದೇ ಸರಿ ; ಇದಱಲ್ಲಿ ಸಂಶಯವಿಲ್ಲ. ಮತ್ತೇನೆಂದರೆ, ಆಯುಷ್ಮಂತರಾದ ಆ ಕುಶಲವರಲ್ಲಿ ಈ ಬಾಲ ಕನು ಇಂಥವನೆಂದು ನಾವು ತಿಳಿಯುವೆವು—ಎಂದು ಮನಸ್ಸಿನಲ್ಲಿ ಚಿಂತಿಸಿ ಪ್ರಕಟವಾಗಿ ಇಂತೆಂದಳು :—'' ಕನ್ನೈದಿಲೆಯ ದಳದಂತೆ ಮೆಱೆಯುತ ಶ್ಯಾಮಲವರ್ಣನಾಗಿ ಕಾಕ ಪಕ್ಷಗಳಿಂ ಅಲಂಕೃತನಾಗಿ ಪುಣ್ಯಕರವಾದ ಕಾಂತಿಯುಳ್ಳವನಾಗಿ ಬ್ರಹ್ಮಚಾರಿಗಳ ಸಮೂಹವಂ ತನ್ನ ಕಾಂತಿಯಿಂದಲೇ ಅಲಂಕರಿಸುವನಾಗಿಯೂ ಇರುವ ಈ ಬಾಲ ಕನು ದೃಷ್ಟಿವಿಷಯನಾಗಿ ಪುನಃ ಆ ರಾಮನೇ ಶಿಶುವಾಗಿರುವಂತೆ ಶೀಘ್ರವಾಗಿ ನನ್ನ ನೇತ್ರಗಳಿಗೆ ಅಮೃತಾಂಜನವಂ ಕಲ್ಪಿಸುತ್ತಾನೆ. ಇವನಾರು ?'' ಎನುತ, ಚಿಂತಿಸಿ, '' ಈ ಬಾಲಕನು ಕ್ಷತ್ರಿಯಬ್ರಹ್ಮಚಾರಿಯೆಂದು ನಾನು ತಿಳಿಯುತ್ತೇನೆ. ಈ ಅರ್ಥದಲ್ಲಿ ಸಂದೇಹವಿಲ್ಲ '' ಎಂದು ಅರುಂಧತಿಯು ಪೇಳಲು ; ಜನಕರಾಯನು ಆ ಬಾಲಕನಂ ನೋಡಿ—'' ಎಲೌ ಪೂಜ್ಯಳೇ, ಇವನು ಕ್ಷತ್ರಿಯಬ್ರಹ್ಮಚಾರಿಯೇ ಸರಿ. ಅದೆಂತೆನೆ :—ಈ

ಬಾಲಕನ ಪೃಷ್ಠಪ್ರದೇಶದಲ್ಲಿ ಶಿಖಿಯಿಂ ಸ್ಪೃಶಿಸುತ್ತಲಿರುವ ಬಾಣಗಳುಳ್ಳ ಎರಡು ಬತ್ತಳಿಕೆಗಳಂ ಉಭಯಪಾರ್ಶ್ವಗಳಲ್ಲಿಯೂ ಧರಿಸುತ್ತಲಿದ್ದಾನೆ. ಭಸ್ಮದಿಂ ಸ್ತೋಕಪವಿತ್ರದಿಂದಲೂ ಶೋಭಿತವಾದ ವಕ್ಷಸ್ಸಿನಲ್ಲಿ ಶ್ವೇತಬಿಂದುಗಳಿಂ ಹೊಳೆಯುವ ಕೃಷ್ಣಾಜಿನವಂ ಹೊದೆಯುತ್ತಲಿದ್ದಾನೆ. ಕಟಿಸೂತ್ರವಾಗಿರುವ ನೊದೆಯಿಂ ಬಂಧಿಸಲ್ಪಟ್ಟ ರಕ್ತವರ್ಣವಾಗಿರುವ ವಸ್ತ್ರವಂ ಕಟಿಪ್ರದೇಶದಲ್ಲಿ ಧರಿಸುತ್ತಲಿದ್ದಾನೆ. ಹಸ್ತದಲ್ಲಿ ದನುಸ್ಸಂ ಜಪಮಾಲೆಯಂ ಅಶ್ವತ್ಥದಂಡವಂ ಸಹ ಧರಿಸುತ್ತಲಿದ್ದಾನೆ. ಈ ಚಿಹ್ನೆಗಳಿಂದ ನಾನು ಇವನು ಕ್ಷತ್ರಿಯಬ್ರಹ್ಮಚಾರಿಯೆಂದು ನಿಶ್ಚಯಿಸುತ್ತಲಿದ್ದೇನೆ. ಎಲೌ ಪೂಜ್ಯಳಾದ ಅರುಂಧತಿಯೇ, ಈ ಬಾಲಕನು ಎಲ್ಲಿರುವನು? ಈ ಬಾಲಕನಂ ನೀನು ಏನೆಂದು ಊಹಿಸುತ್ತೀಯೆ?" ಎಂದು ಪ್ರಶ್ನೆಗೈಯಲು; ಅರುಂಧತಿಯು–"ಎಲೈ ರಾಜರ್ಷಿಯೇ, ನಾವು ಈ ಆಶ್ರಮಕ್ಕೆ ಈಗತಾನೇ ಬಂದೆವಾದಕಾರಣ ಇವನು ಯಾರೋ ತಿಳಿಯದು" ಎಂದು ಪೇಳಿದಳು. ಬಳಿಕ ಜನಕಮಹಾರಾಜನು–"ಎಲೈ ಪೂಜ್ಯನಾದ ಋಷ್ಯೇ, ನನಗೆ ಅತಿಕುತೂಹಲವುಂಟಾಗಿದೆಯಾದಕಾರಣ ನೀನೇ ಪೂಜ್ಯನಾದ ವಾಲ್ಮೀಕಿಮುನಿಯ ಸಮಿಪವನ್ನೈದಿ ಈ ಬಾಲಕನ ವೃತ್ತಾಂತವಂ ಕೇಳು. ಮತ್ತು ಈ ಬಾಲಕನನ್ನೇ ಕುಱಿತು–ಎಲೈ ಮಗುವೆ, ಯಾರೋ ಈ ವೃದ್ಧರು ನಿನ್ನಂ ನೋಡಲೋಸುಗ ಇಚ್ಛೈಸುತ್ತಲಿದ್ದಾರೆ, ಎಂದು ಪೇಳುವನಾಗು" ಎಂದು ಪೇಳಲು; ಋಷ್ಯಿಯು–"ಹಾಗೆ ಆಗಲಿ" ಎಂದು ತೆರಳಿಪೋದನು. ಕೌಸಲ್ಯೆಯು–"ಎಲೈ ರಾಜರ್ಷಿಯೇ, ಆ ಬಾಲಕನು ಈ ಋಷ್ಯಿಯ ವಚನವಂ ಕೇಳಿ ನಮ್ಮ ಸಮೀಪಕ್ಕೆ ಬಂದಾನೊ ಇಲ್ಲವೊ ನೀವು ಏನೆಂದು ತಿಳಿಯುತ್ತೀರಿ?" ಎಂದು ಪೇಳಲು; ಜನಕರಾಯನು–"ಎಲೌ ರಾಜಪತ್ನಿಯೇ, ಇಂಥ ದಿವ್ಯರೂಪಸಂಪನ್ನನಾದ ಈ ಕುಮಾರನಿಗೆ ಈ ರೂಪಸಂಪತ್ತಿಗೆ ಯೋಗ್ಯವಾದ ಸಚ್ಚರಿರಿತ್ರೆಯು ಸಹ ಉಂಟಾಗಿರುವುದೇ ಹೊಱತು ಇಲ್ಲದೆ ಪೋಗಲಾಱದು" ಎಂದು ಪೇಳಿದನು. ಕೌಸಲ್ಯೆಯು ಚೆನ್ನಾಗಿ ನೋಡಿ–"ಎಲೈ ರಾಜರ್ಷಿಯೇ, ಆ ಬಾಲಕನು ವಿನಯದೊಡಗೂಡಿ ಈ ಋಷ್ಯಿಯ ವಚನವಂ ಕೇಳಿದವನಾಗಲು, ತನಗೆ ಸಮಾನರಾದ ಬಾಲಕರನ್ನೆಲ್ಲರಂ ಬಿಟ್ಟು ನಮಗೆ ಅಭಿಮುಖವಾಗಿ ತಿರಿಗಿದವನೇ ಆದನಲ್ಲವೆ?" ಎಂದು ಆಶ್ಚರ್ಯಪಟ್ಟಳು. ಜನಕರಾಯನು ಆ ಬಾಲಕನಂ ಸಾವಕಾಶವಾಗಿ ಭಾವಿಸಿ ನೋಡಿ, "ಎಲೈ, ಇದೇನೋ ಊಹಿಸಲಶಕ್ಯವಾಗಿ ಇದೆ. ಅದೆಂತೆನೆ:–ಈ ಕುಮಾರನಲ್ಲಿ ಒಂದಾನೊಂದು ಮಹಿಮಾತಿಶಯವು ವಿನಯದಿಂ ಪ್ರಸನ್ನವಾಗಿ ಸೌಂದರ್ಯದಿಂ ಶೋಭಿತವಾಗಿಯೂ ಇದೆ. ಈ ಬಾಲಕನಲ್ಲಿರುವ ಈ ಮಹಿಮಾತಿಶಯವಂ ಪ್ರಾಜ್ಞರು ತಿಳಿಯುವರೆ ಹೊಱತು ಮೂಢರು ತಿಳಿಯಲಾಱರು. ಈಗ ಬಲವತ್ತಾದ ಈ ಮಹಿಮಾತಿಶಯವು ಅತಿಲಘುವಾದ ಸೂಜಿಕಲ್ಲಿನ ಖಂಡವು ಉಕ್ಕಿನ ಗಟ್ಟಿಯನ್ನೆಂತು ಅಪಹರಿಸುವುದೊ ಆ ರೀತಿ ಸ್ಥಿರವಾದ ನನ್ನ ಮನಸ್ಸಂ ಕೂಡ ಅಪಹರಿಸುತ್ತಲಿದೆಯಲ್ಲವೆ?" ಎಂದು ಚಿಂತಿಸುತ್ತಲಿರಲು;

ಅಷ್ಟಱೊಳಗೆ ಲವನು ರಂಗಸ್ಥಾನವಂ ಪ್ರವೇಶಂಗೈದು ಇಂತೆಂದು ಚಿಂತಿಸಿದನು:–ಈ ವೃದ್ಧರು ಪೂಜ್ಯರಾದವರು; ಆದಾಗ್ಯೂ ಇವರ ನಾಮಧೇಯಂಗಳಂ

ಜ್ಯೇಷ್ಠಕನಿಷ್ಠಭಾವಂಗಳಿಂ ಸಂಪ್ರದಾಯವಂ ಸಹ ನಾನು ತಿಳಿದವನಲ್ಲವಾದಕಾರಣ ಪೂಜ್ಯರಿಗೆ ಯಾವಪ್ರಕಾರದಿಂ ಅಭಿವಾದನವಂ ಮಾಡಲಿ? ಎಂದು ಚಿಂತಿಸಿದವನಾಗಿ, "ಆಗಲಿ; ಈ ಪ್ರಕಾರವಾದರೆ ಶಾಸ್ತ್ರವಿರುದ್ಧವಲ್ಲವೆಂದು ವೃದ್ಧರಿಗೋಸ್ಕರ ಕೆಲವರು ಅಭಿವಾದನವಂ ಮಾಡುತ್ತಾರೆ. ನಾನು ಅದೇ ರೀತಿ ಮಾಡುವೆನು" ಎಂದು ನಿಶ್ಚಯಿಸಿ, ವಿನಯದೊಡಗೂಡಿ ಆ ವೃದ್ಧರ ಸಮೀಪವನ್ನೈದಿ–"ಈ ಲವನು ಶಿರಸ್ಸಿನಿಂದ ನಿಮಗೋಸುಗ ಪ್ರಣಾಮವಂ ಮಾಡುವನು" ಎಂದು ಅಭಿವಾದನವಂ ಗೈದವನಾಗಲು; ಅರುಂಧತೀದೇವಿಯು ಜನಕರಾಯನು ಸಹ–"ಎಲೈ ಕುಮಾರನೇ, ನೀನು ಆಯುಷ್ಮಂತನಾಗು" ಎಂದು ಆಶೀರ್ವಾದವಂ ಮಾಡಿದರು. ಕೌಸಲ್ಯಾದೇವಿಯು–"ಎಲೈ ಕುಮಾರನೆ, ಚಿರಂಜೀವಿಯಾಗು" ಎಂದು ಆಶೀರ್ವಾದವಂ ಮಾಡಿದಳು. ಆಗ ಅರುಂಧತಿಯು–"ಎಲೈ ಮಗುವೆ, ಬಾರೈ" ಎಂದು ಲವನಂ ತೊಡೆಯಲ್ಲಿ ಕುಳ್ಳಿರಿಸಿಕೊಂಡು ತನ್ನ ಮನಸ್ಸಿನಲ್ಲಿ–"ದೈವಯೋಗದಿಂ ನನ್ನ ತೊಡೆಯು ಮಾತ್ರವೇ ಈ ಕುಮಾರನಿಂ ಪೂರಿಸಲ್ಪಡಲಿಲ್ಲ, ಬಹುಕಾಲಕ್ಕೆ ನನ್ನ ಮನೋರಥವೂ ಕೂಡ ಪೂರಿಸಲ್ಪಟ್ಟಿತು" ಎಂದು ಸಂತೋಷಪಟ್ಟಳು. ಕೌಸಲ್ಯೆಯು–"ಎಲೈ ಮಗುವೆ, ಇತ್ತ ಬಾರೈ" ಎಂದು ಅವನಂ ತೊಡೆಯಲ್ಲಿ ಕುಳ್ಳಿರಿಸಿಕೊಂಡು–"ಎಲೈ, ಸ್ವಲ್ಪವಿಕಾಸಯುಕ್ತವಾದ ಕನ್ನೈದಿಲೆಯಂತೆ ಶ್ಯಾಮಲವರ್ಣವಾಗಿ ತುಂಬಿಕೊಂಡಿರುವ ಸಂಪತ್ತಿನಿಂದ ಹೊಳೆಯುವ ದೇಹವಿರುವ ರೀತಿಯಿಂದ ಮಾತ್ರವೇ ಈ ಕುಮಾರನು ನಮ್ಮ ರಾಮಭದ್ರನಂ ಪೋಲುವನಾಗುವುದಿಲ್ಲ; ಮತ್ತೇನೆಂದರೆ, ಕಮಲಗಳ ಕೇಸರಂಗಳಂ ಭಕ್ಷಿಸಿ ರಕ್ತಿಮೆಯೊಡಗೂಡಿರುವ ಕಂಠವುಳ್ಳ ಹಂಸಪಕ್ಷಿಯು ಸರಳವಾದ ಉಚ್ಚಧ್ವನಿಯಂತೆ ಗಂಭೀರವಾದ ಪ್ರತಿಧ್ವನಿಯುಳ್ಳುದಾಗಿ ಪೂರ್ಣವಾಗಿ ಅತಿದೀರ್ಘವಾಗಿಯೂ ಇರುವ ಸ್ವರಸಂದರ್ಭದಿಂದಲೂ ಕೂಡ ನಮ್ಮ ರಾಮಭದ್ರನನ್ನೇ ಪೋಲುವನಾಗಿ ಇದ್ದಾನೆಯಲ್ಲವೆ? ಮತ್ತು ಪರಿಣತವಾದ ಕಮಲದ ಗರ್ಭಪ್ರದೇಶದಂತೆ ನಿಬಿಡವಾಗಿರುವ ಶರೀರಸ್ಪರ್ಶವೂ ಕೂಡ ಆ ರಾಮಭದ್ರನ ಶರೀರಸ್ಪರ್ಶವನ್ನೇ ಪೋಲುವುದಾಗಿ ಇದೆಯಲ್ಲವೆ? ಎಲೈ ಮಗುವೆ, ನಿನ್ನ ಮುಖವಂ ನೋಡೇನು" ಎಂದು ಕೌಸಲ್ಯೆಯು ಲವನ ಗಲ್ಲವಂ ಮೇಲಕ್ಕೆ ಎತ್ತಿ ಭಾವಿಸಿ ನೋಡಿದವಳಾಗಿ, ಕಣ್ಣೀರೊಡಗೂಡಿ, ಭಾವಗರ್ಭಿತವಾಗಿ ಜನಕರಾಯನಂ ಕುರಿತು ಇಂತೆಂದಳು:–"ಎಲೈ ರಾಜರ್ಷಿಯೇ, ನೀನು ಚೆನ್ನಾಗಿ ಭಾವಿಸುವವನಾಗಿ ಈ ಬಾಲಕನ ಮುಖವಂ ನೋಡುವುದಿಲ್ಲವೆ ಏನು? ಮಗಳಾಗಿ ಸೊಸೆಯಾಗಿಯೂ ಇರುವ ಸೀತೆಯ ಮುಖಚಂದ್ರನೊಡನೆ ಸಮಾನವಾಗಿದೆ" ಎಂದು ಪೇಳಲು; ಅದಂ ಕೇಳಿ ಜನಕರಾಯನು–"ನೋಡುತ್ತೇನೆ" ಎಂದನು. ಕೌಸಲ್ಯೆಯು–"ಎಲೈ ರಾಜರ್ಷಿಯೇ, ನನ್ನ ಹೃದಯವು ಏನೋ ಹುಚ್ಚುಹಿಡಿದಂತೆ ಮತ್ತೊಂದು ಕಡೆ ಮುಖವುಳ್ಳುದಾಗಿ ಸುತ್ತುತ್ತಲಿದೆ" ಎನಲು; ಜನಕರಾಯನು ಲವನಂ ಭಾವಿಸಿ ನೋಡಿ–"ಎಲೈ ನನ್ನ ಪುತ್ರಿಯಾದ ಸೀತೆಯು ಶ್ರೀರಾಮನು ಸಹ ಇವರಿಬ್ಬರ ಆ ಸಮಸ್ತವಾದ ಆಕೃತಿಯು, ಆ ಕಾಂತಿಯು, ಆ ವಾಕ್ಕು, ಜನ್ಮಸಿದ್ಧವಾದ ಅದೇ ವಿನಯವು, ಪುಣ್ಯಕರವಾದ ಕಟಾಕ್ಷವೀಕ್ಷಣ ಮೊದಲಾದ ಆ ಅಂಗವ್ಯಾಪಾರವು ಸಹ ಇದೆಲ್ಲವೂ ಈ ಬಾಲಕನಲ್ಲಿ

ಪ್ರತಿಬಿಂಬಿಸಿರುವಂತೆ ಸ್ಫುಟವಾಗಿ ತೋಱುತ್ತಲಿದೆ. ಎಲೌ ರಾಜಪತ್ನಿಯೆ, ಏಕೆ ನನ್ನ ಮನಸ್ಸು ಈ ರೀತಿ ಅತಿಚಪಲವಾಗಿ ಆ ಮಾರ್ಗದಲ್ಲಿ ಸಂಚರಿಸುತ್ತಲಿದೆ ? ಕಟಕಟಾ !' ಎಂದು ಸಂತಾಪಪಟ್ಟನು. ಕೌಸಲ್ಯೆಯು–" ಎಲೈ ಮಗುವೆ, ನಿನಗೆ ತಾಯಿ ಇರುವಳೆ ಏನು ? ಆ ತಾಯಿಯಂ ಸ್ಮರಿಸುವೆಯೊ ಏನು ? " ಎಂದು ಪ್ರಶ್ನೆಮಾಡಲು ; ಅದಂ ಕೇಳಿ ಲವನು–" ನನಗೆ ತಾಯಿ ಇಲ್ಲ, ಇಲ್ಲ " ಎಂದು ಪೇಳಿದನು. ಕೌಸಲ್ಯೆಯು–" ಆದರೆ ನೀನು ಯಾರ ಸಂಬಂಧಿಯು ? " ಎಂದು ಪುನಃ ಪ್ರಶ್ನೆಗೈಯಲು ; ಲವನು–" ಎಲೌ ತಾಯೇ, ನಾನು ಪೂಜ್ಯನಾದ ವಾಲ್ಮೀಕಿಮಹಾಮುನಿಯ ಸಂಬಂಧಿಯು " ಎಂದು ಉತ್ತರವನ್ನಿತ್ತನು. ಆಗ ಕೌಸಲ್ಯೆಯು–" ಎಲೈ ಮಗನೇ, ನಾನು ಪ್ರಶ್ನೆಮಾಡಿದುದಕ್ಕೆ ಪೇಳತಕ್ಕ ಅರ್ಥವಂ ಪೇಳುವನಾಗು " ಎಂದು ಪ್ರಶ್ನೆಗೈಯಲು ;–" ಎಲೌ ತಾಯೇ, ನಾನು ಇಷ್ಟುಮಾತ್ರವಂ ತಿಳಿಯುವೆನೇ ಹೊಱತು ಮತ್ತೊಂದನ್ನಱಿಯೆನು " ಎಂದು ಪೇಳಿದವನಾಗುತ್ತಿರಲು ;

ಅಷ್ಟಱೊಳಗೆ ನೇಪಥ್ಯದಲ್ಲಿ ಒಬ್ಬ ಅಧಿಕಾರಿಯಾದ ಪುರುಷನು ಇಂತೆಂದನು :– " ಎಲೈ ಸೇನಾಜನರುಗಳಿರಾ ! ಕೇಳಿ. ಕುಮಾರನಾದ ಚಂದ್ರಕೇತುರಾಯನು ನಮ್ಮ ಸೇನೆಯಲ್ಲಿ ಒಬ್ಬರಾದರೂ ಈ ವಾಲ್ಮೀಕಿಯ ಆಶ್ರಮದ ಸಮಿಪಭೂಮಿಗಳಲ್ಲಿ ಪ್ರವೇಶಿಸುವರಾಗಬೇಡ, ಎಂದು ಆಜ್ಞಾಪಿಸುತ್ತಾನೆ " ಎಂದು ಸಾಱುವನಾಗಲು ;

ಅದಂ ಕೇಳಿ ಅರುಂಧತೀದೇವಿಯೂ ಜನಕರಾಯನೂ ಸಹ ಇವರಿರ್ವರು ಇಂತೆಂದರು :–" ಅಶ್ವಮೇಧಾರ್ಥವಾದ ಅಶ್ವವಂ ರಕ್ಷಿಸುವ ಸಂಗತಿಯಿಂದ ಇಲ್ಲಿಗೆ ಬಂದಿರುವ ಲಕ್ಷ್ಮಣಪುತ್ರನಾದ ಚಂದ್ರಕೇತುವಂ ನಾವು ನೋಡಬಹುದಾದಕಾರಣ ಈ ದಿವಸವು ಸುದಿವಸವು " ಎಂದು ಸಂತೋಷಪಟ್ಟರು. ಕೌಸಲ್ಯಾದೇವಿಯು ಆ ಘೋಷವಂ ಕೇಳಿ, " ಕುಮಾರನಾದ ಲಕ್ಷ್ಮಣನ ಕುಮಾರನೂ ಕೂಡ ಸೇನಾಜನರಂ ಕುಱಿತು ಆಜ್ಞಾಪಿಸುತ್ತಾನೆ ಎಂದು ಪೇಳುವುದಱಿಂ ಅಮೃತಬಿಂದುಧಾರೆಗಳಾಗಿ ಅಕ್ಷರಂಗಳು ಕೇಳಲ್ಪಡುತ್ತಲಿವೆ " ಎಂದು ಸಂತೋಷಪಟ್ಟಳು. ಲವನು ಜನಕರಾಯನಂ ಕುಱಿತು–" ಎಲೈ ಪೂಜ್ಯನಾದ ಈ ಚಂದ್ರಕೇತುವು ಯಾರು ? " ಎಂದು ಪ್ರಶ್ನೆಗೈಯಲು ; ಅದಂ ಕೇಳಿ ಜನಕರಾಯನು–" ಎಲೈ ಕುಮಾರನೇ, ದಶರಥಮಹಾರಾಯನಿಗೆ ಪುತ್ರರಾದ ರಾಮಲಕ್ಷ್ಮಣರಂ ತಿಳಿಯುವೆಯೊ ಏನು ? " ಎಂದು ಪ್ರಶ್ನೆಗೈದನು. ಲವನು–" ಎಲೈ ಪೂಜ್ಯನೇ, ಇವರೇ ಅಲ್ಲವೆ ರಾಮಾಯಣಕಥಾನಾಯಕರಾದ ಪುರುಷರು ? " ಎಂದು ಪೇಳಿದವನಾಗಲು ; ಜನಕರಾಯನು–" ಇವರೇ ರಾಮಾಯಣಕಥಾಪುರುಷರು " ಎಂದು ಪೇಳಿದನು. ಲವನು–" ಹಾಗಾದರೆ ಅವರಂ ಎಂತು ತಿಳಿಯದಿರುವೆನು ? " ಎಂದು ಪೇಳಲು ; ಜನಕರಾಯನು ಲವನಂ ಕುಱಿತು–" ಎಲೈ ಕುಮಾರನೇ, ಈ ಚಂದ್ರಕೇತುವೆಂಬವನು ಆ ಲಕ್ಷ್ಮಣಸ್ವಾಮಿಗೆ ಪುತ್ರನಾದವನು " ಎಂದು ಪೇಳಿದನು. ಅದಂ ಕೇಳಿ ಲವನು–" ಹಾಗಾದರೆ ಈ ರಾಜಪುತ್ರನು ಊರ್ಮಿಳಾದೇವಿಗೆ ಪುತ್ರನಾದವನು, ರಾಜರ್ಷಿಯಾದ ಜನಕರಾಯನಿಗೆ ಮೊಮ್ಮಗನಾದವನು " ಎಂದು ಪೇಳಲು ; ಅದಂ ಕೇಳಿ ಅರುಂಧತಿಯು–" ಎಲೈ, ಕುಮಾರನು ರಾಮಾಯಣಕಥೆಯಲ್ಲಿ ತನಗೆ ಇರುವ

ಪಾಂಡಿತ್ಯವಂ ಪ್ರಕಟವನ್ನಾಗಿ ಮಾಡಿದನು'' ಎಂದು ಸಂತೋಷಪಟ್ಟಳು. ಜನಕರಾಯನು ಯೋಚನೆಯಂ ಮಾಡಿ ಲವನಂ ಕುಱಿತು–'' ಎಲೈ ಕುಮಾರನೇ, ನೀನು ರಾಮಾಯಣಕಥೆಯಲ್ಲಿ ಇಂಥ ಅಭಿಜ್ಞನಾದರೆ ನೋಡೋಣ; ದಶರಥಮಹಾರಾಯನಿಗೆ ಪುತ್ರರಾದ ಆ ರಾಮಲಕ್ಷ್ಮಣಾದಿಗಳಿಗೆ ಎಷ್ಟು ಮಂದಿ ಮಕ್ಕಳು? ಅವರ ನಾಮಧೇಯಂಗಳು ಯಾವುವು? ಯಾವ ಪತ್ನಿಯರಲ್ಲಿ ಯಾರುಯಾರು ಜನಿಸಿದರು? ಹೇಳು'' ಎಂದು ಪ್ರಶ್ನೆಗೈಯಲು; ಲವನು–'' ಎಲೈ ಪೂಜ್ಯನೇ, ಈ ಕಥಾಭಾಗವಂ ನಾವೂ ಅನ್ಯರಾದವರೂ ಕೇಳಿದವರಲ್ಲ'' ಎನಲು; ಜನಕರಾಯನು–'' ಕವಿಯಾದ ವಾಲ್ಮೀಕಿಯು ಈ ಕಥಾಭಾಗವಂ ಪೇಳಿದವನಾಗಲಿಲ್ಲವೆ ಏನು?'' ಎಂದು ಪ್ರಶ್ನೆಗೈಯಲು; ಲವನು–'' ಎಲೈ ಪೂಜ್ಯನೆ, ನಮ್ಮ ಗುರುವಾದ ವಾಲ್ಮೀಕಿಮುನಿಯು ಈ ಕಥಾಭಾಗವಂ ನಿರೂಪಿಸಿದವನಾದರೂ ಅದಂ ಪ್ರಕಟವಂ ಮಾಡಲಿಲ್ಲ. ಈ ಉತ್ತರರಾಮಾಯಣದ ಕಥೆಯಲ್ಲಿಯೇ ಕೆಲವು ಕಥಾಭಾಗವಂ ಒಂದು ಸಂದರ್ಭವಿಶೇಷದಿಂ ರಸಭರಿತವನ್ನಾಗಿ ಅಭಿನಯಪ್ರಧಾನವನ್ನಾಗಿಯೂ ರಚನೆಗೈದು ಇದ್ದಾನೆ. ಮತ್ತು ಪೂಜ್ಯನಾದ ವಾಲ್ಮೀಕಿಮುನಿಯು ಸ್ವಹಸ್ತಲಿಖಿತವಾದ ಆ ನಾಟಕಗ್ರಂಥವಂ ನೃತ್ತಗೀತವಾದ್ಯಗಳಿಗೆ ಸೂತ್ರಧಾರನಾದ ಭರತಾಚಾರ್ಯನ ಸಮೀಪಕ್ಕೆ ಕಳುಹಿಸಿದನು.'' ಎಂದು ಪೇಳಲು; ಜನಕರಾಯನು–'' ಏನು ನಿಮಿತ್ತ?'' ಎಂದು ಪ್ರಶ್ನೆಗೈಯಲು; ಲವನು–'' ಪೂಜ್ಯನಾದ ಆ ಭರತಾಚಾರ್ಯನು ಆ ನಾಟಕ ಗ್ರಂಥವಂ ಅಪ್ಸರಸ್ತ್ರೀಯರುಗಳಿಗೆ ಅಭ್ಯಾಸವಂ ಮಾಡಿಸಿ ಅವರುಗಳಿಂದ ಆ ನಾಟಕವಂ ಅಭಿನಯಂಗೈಸುವನೆಂಬ ತಾತ್ಪರ್ಯದಿಂ ಆ ಭರತಾಚಾರ್ಯನ ಸಮೀಪಕ್ಕೆ ಕಳುಹಿಸಿದನು'' ಎಂದು ಪೇಳಲು; ಜನಕರಾಯನು ಅದಂ ಕೇಳಿ–'' ಇದೆಲ್ಲವು ನಮ್ಮ ಅಭಿಪ್ರಾಯವಂ ಅನುಸರಿಸಿಕೊಂಡಿರುವುದಾಗಿಯೇ ತೋಱುತ್ತಲಿದೆ'' ಎಂದನು. ಲವನು ಜನಕರಾಯನಂ ಕುಱಿತು–'' ಎಲೈ ಪೂಜ್ಯನೆ, ನಮ್ಮ ಗುರುವಾದ ವಾಲ್ಮೀಕಿಮುನಿಗೆ ಸ್ವಹಸ್ತಲಿಖಿತವಾದ ಆ ನಾಟಕಗ್ರಂಥದಲ್ಲಿ ಮಹತ್ತಾದ ಆದರಣೆಯು. ಅದೆಂತೆನೆ:– ನಮ್ಮ ಗುರುವು ಯಾವ ಶಿಷ್ಯನ ಹಸ್ತದಲ್ಲಿ ಆ ನಾಟಕದ ಪುಸ್ತಕವಂ ಕೊಟ್ಟು ಭರತಾಚಾರ್ಯನ ಆಶ್ರಮಕ್ಕೆ ಕಳುಹಿಸಿದನೊ ಅವನ ಕ್ಷೇಮಾರ್ಥವಾಗಿ ಮಾರ್ಗದಲ್ಲಿ ಪ್ರಮಾದವಂ ಪರಿಹರಿಸಲೋಸುಗ ಧನುರ್ಧಾರಿಯಾದ ನಮ್ಮ ಸಹೋದರನಂ ಸಹ ಬಲವನ್ನಾಗಿ ಕಳುಹಿಸಿದನು. ಆದಕಾರಣ ನಮ್ಮ ಗುರುವಿಗೆ ಆ ನಾಟಕಗ್ರಂಥದಲ್ಲಿ ಮಹತ್ತಾದ ಆದರಣೆ'' ಎಂದು ಪೇಳಿದನು. ಅದಂ ಕೇಳಿ ಕೌಸಲ್ಯೆಯು–'' ಎಲೈ ಮಗುವೆ, ನಿನಗೆ ಒಡಹುಟ್ಟಿದವನು ಇದ್ದಾನೆಯೆ?'' ಎಂದು ಪ್ರಶ್ನೆಗೈಯಲು; ಲವನು–'' ಎಲೌ ತಾಯೇ, ಪೂಜ್ಯನಾದ ಕುಶನೆಂಬ ಸಹೋದರನು ಇದ್ದಾನೆ'' ಎಂದನು. ಕೌಸಲ್ಯೆಯು–'' ಕುಮಾರನೇ, ಪೂಜ್ಯನೆಂದು ಪೇಳಿದುದಱಿಂ ಜ್ಯೇಷ್ಠನು ಇದ್ದಾನೆಂದು ಪೇಳೋಣವಾಯಿತು'' ಎನಲು; ಲವನು–'' ಎಲೌ ತಾಯೇ, ನಾನು ಮೊದಲು ಜನಿಸಿದೆನು. ಅನಂತರದಲ್ಲಿ ಕುಶನು ಜನಿಸಿದನಾದಕಾರಣ ಈ ಪ್ರಸವಕ್ರಮದಿಂ ಆ ಕುಶನು ನನಗೆ ಅಣ್ಣನು, ಹೌದು'' ಎನಲು; ಅದಂ ಕೇಳಿ ಜನಕರಾಯನು–'' ಎಲೈ ಕುಮಾ

ರನೆ, ಚಿರಂಜೀವಿಗಳಾದ ನೀವಿರ್ವರು ಅವಳಿಗಳೇ ಏನು ?'' ಎಂದು ಪ್ರಶ್ನೆಗೈಯಲು ; ಲವನು–ಹೌದೆಂದನು. ಜನಕರಾಯನು–'' ಎಲೈ ಮಗುವೆ, ಮಿಗಿಲಾದ ರಾಮಾಯಣ ಕಥೆಯ ಪ್ರಸ್ತಾಪವು ಎಂಥದೊ, ಆ ಕ್ರಮವಂ ನಮಗೆ ಸ್ಫುಟವಾಗಿ ಪೇಳುವನಾಗು '' ಎನಲು ; ಲವನು–'' ಎಲೈ ಪೂಜ್ಯನೆ, ಅಸತ್ಯವಾದ ಪುರಜನರ ಅಪವಾದವಚನದಿಂ ಭಯಯುಕ್ತನಾದ ಅರಸಾದ ಶ್ರೀರಾಮನಿಂದ ಪಟ್ಟಣದಿಂ ಹೊಱಡಿಸಲ್ಪಟ್ಟವಳಾಗಿ, ಯಜ್ಞಭೂಮಿಯಲ್ಲಿ ಜನಿಸಿದವಳಾಗಿ, ಆಸನ್ನವಾದ ಪ್ರಸವವೇದನೆಯುಳ್ಳವಳಾಗಿ, ಏಕಾಕಿಯಾಗಿಯೂ ಇರುವ ಸೀತಾದೇವಿಯಂ ಲಕ್ಷ್ಮಣನು ಅರಣ್ಯದಲ್ಲಿ ಪರಿತ್ಯಾಗಂಗೈದು ಪುನಃ ಅಯೋಧ್ಯಾಪಟ್ಟನಕ್ಕೆ ಬಂದನೆಂಬದಾಗಿ ಕಥಾಭಾಗವು ಇದೆ '' ಎನಲು ; ಅದಂ ಕೇಳಿ ಕೌಸಲ್ಯೆಯು–'' ಕಟಕಟಾ ! '' ಎನುತ,–'' ಎಲೌ ಮಗಳೆ, ಎಲೌ ಮನೋಹರವಾದ ಮುಖವುಳ್ಳವಳೇ, ಎಲೌ ಸೀತೆಯೇ, ಈಗ ನಿನ್ನ ಶರೀರವೆಂಬ ಪುಷ್ಪಕ್ಕೆ ಶೀಘ್ರವಾಗಿ ದೈವದ ದುಷ್ಟವಾದ ವಿಲಾಸಪರಿಣಾಮವು ಒಂದಡಿಯಲ್ಲಿ ಸಂಭವಿಸಿತು '' ಎಂದು ಸಂತಾಪಪಟ್ಟಳು. ಜನಕರಾಯನು–'' ಎಲೌ ಪುತ್ರಿಯಾದ ಸೀತೆಯೆ, ನೀನು ಪತಿಯಿಂದ ಅವಮಾನವಂ ಭಯಂಕರವಾದ ವನವಂ ಪ್ರಸವಕಾಲದಲ್ಲಿ ಉಂಟಾದ ಅಂಥ ವೇದನೆಯಂ ಸಹ ಹೊಂದಿದವಳಾಗಿ, ಆ ಮಹಾರಣ್ಯದಲ್ಲಿ ಮಾಂಸಭಕ್ಷಕಂಗಳಾದ ವ್ಯಾಘ್ರಾದಿ ದುಷ್ಟಮೃಗಂಗಳು ನಾಲ್ಕುಕಡೆಯಲ್ಲಿಯೂ ಸುತ್ತಿಕೊಳ್ಳುತ್ತಿರಲು ಅತ್ಯಂತ ಭಯಯುಕ್ತಳಾಗಿ ಎಲೈ ತಂದೆಯೇ, ಈಗ ನನ್ನಂ ಸಲಹುವನಾಗೆಂದು ನೀನು ನನ್ನಂ ಅನೇಕಾವೃತ್ತಿ ಸ್ಮರಿಸಿದವಳಾದೆ. ಈಅರ್ಥವು ನಿಶ್ಚಿತವೇ ಸರಿ '' ಎಂದು ಸಂತಾಪಪಟ್ಟನು. ಈರೀತಿ ದುಃಖಿಸುತ್ತಲಿರುವ ಕೌಸಲ್ಯೆಯಂ ಜನಕರಾಯನಂ ಸಹ ನೋಡಿ ಲವನು ಅರುಂಧತೀದೇವಿಯಂ ಕುಱಿತು–'' ಎಲೌ ಪೂಜ್ಯಳೇ, ಇವರಿರ್ವರು ಯಾರು ? '' ಎಂದು ಪ್ರಶ್ನೆಗೈಯಲು ; ಅರುಂಧತಿಯು–'' ಈಕೆಯೇ ಕೌಸಲ್ಯೆಯು, ಈತನೇ ಜನಕರಾಯನು '' ಎಂದು ಪೇಳಿದಳು. ಆಗ ಲವನು ಬಹುಮಾನದೊಡನೆಯು ದುಃಖದೊಡನೆಯು ಕುತೂಹಲದೊಡನೆಯೂ ಕೂಡಿದವನಾಗಿ ಅವರಿರ್ವರಂ ನೋಡುವನಾಗಲು ; ಜನಕರಾಯನು–'' ಎಲೈ, ದುರಾತ್ಮರಾದ ಪುರಜನರ ನಿಷ್ಕರುಣತ್ವವು ಎಂಥದು ನೋಡಿದೆಯಾ ? ಮತ್ತು ಆ ಪುರಜನರ ವಚನವಂ ಅನುಸರಿಸಿಕೊಂಡು ಅರಸಾದ ರಾಮನು ಸಹ ಚೆನ್ನಾಗಿ ಆಲೋಚಿಸದೆ ಶೀಘ್ರವಾಗಿ ಸೀತೆಯಂ ತ್ಯಜಿಸಿದುದಂ ನೋಡಿದೆಯಾ ? '' ಎಂದು ಆಶ್ಚರ್ಯಪಟ್ಟವನಾಗಿ ಕ್ರೋಧಾವೇಶದಿಂ ಪರವಶನಾಗಿಯೂ–'' ಎಲೈ, ಈ ಜನಾಪವಾದಮೂಲಕವಾಗಿ ಈ ಸೀತೆಗೆ ಪ್ರಾಪ್ತವಾದ ಹಿಂಸಾದಿರೂಪವಾದ ಸಿಡಿಲಿನ ದುಸ್ಸಹವಾದ ಬೀಳೋಣವಂ ಬಾರಿಬಾರಿಗೂ ಚಿಂತಿಸುತ್ತಲಿರುವ ನನ್ನ ಕೋಪವು ಧನುಸ್ಸಿನಿಂದಲಾದರೂ ಶಾಪಪ್ರಯೋಗದಿಂದಲಾದರೂ ಶೀಘ್ರದಿಂ ಜ್ವಲಿಸಿ ಈ ದುಷ್ಟರೆಲ್ಲರಂ ನಿಗ್ರಹಿಸುವುದಕ್ಕೆ ಇದೇ ಸಮಯವು '' ಎಂದು ಅಟ್ಟಹಾಸವಂ ಮಾಡುತ್ತಲಿರಲು ; ಆಗ ಕೌಸಲ್ಯೆಯು ಭಯಯುಕ್ತಳಾಗಿ ಅರುಂಧತೀದೇವಿಯಂ ಕುಱಿತು–'' ಎಲೌ ತಾಯೆ, ನೀನು ಈ ಕೋಪಯುಕ್ತನಾಗಿರುವ ರಾಜರ್ಷಿಯಾದ ಜನಕರಾಯನಂ ಸಮಾಧಾನಪಡಿಸಿದವಳಾಗಿ, ರಾಮಾದಿಗಳಂ ಸಲಹು ಸಲಹು ! '' ಎಂದಳು. ಲವನು ಅದಂ ಕೇಳಿ,–'' ಅವಮಾನಿತರಾದ ಮಾನಶಾಲಿಗಳಿಗೆ

ಇದೇ ಪ್ರತಿಕ್ರಿಯೆಯಲ್ಲವೆ ?'' ಎಂದನು. ಆಬಳಿಕ ಅರುಂಧತಿಯು ಜನಕರಾಯನಂ ಕುಱಿತು–'' ಎಲೈ ಅರಸೆ, ರಾಮನು ನಿನಗೆ ಪುತ್ರನಾದವನು. ಅಜ್ಞರಾಗಿ ದೀನರಾಗಿಯೂ ಇರುವ ಮಿಗಿಲಾದ ಜನವು ಸಹ ನಿನ್ನಿಂದ ಪಾಲಿಸತಕ್ಕವರು '' ಎಂದು ಸಮಾಧಾನಪಡಿಸಿದಳು. ಅದಂ ಕೇಳಿ ಜನಕರಾಯನು–'' ಅಥವಾ, ಸೀತಾರಾಮರೆಂಬ ಈವುಭಯವು ನನಗೆ ಪುತ್ರಸ್ಥಾನವಾದುದಲ್ಲವೆ ? ಪುರಜನರಾದರೊ–ಬಹುಮಂದಿ ಬ್ರಾಹ್ಮಣರು ಬಾಲಕರು ವೃದ್ಧರು ದೀನರು ಸ್ತ್ರೀಸಮೂಹವು ಸಹ ಇವರೊಡನೆ ಕೂಡಿಕೊಂಡಿರುವರು. ಅದುಕಾರಣ ಈ ಜನರಲ್ಲಿ ಅಸ್ತ್ರಪ್ರಯೋಗವಂ ಮಾಡುವುದು ಉಚಿತವಲ್ಲವಾದುದಱಿಂ ನಾನು ಉಪಶಾಂತಿಯಂ ಧರಿಸುತ್ತೇನೆ ; ಕೋಪವಂ ತ್ಯಜಿಸುವನಾಗುತ್ತೇನೆ '' ಎನುತಲಿರಲು ;

ಅಷ್ಟಱೊಳಗೆ ಬಾಲಕರಾದ ಬ್ರಹ್ಮಚಾರಿಗಳು ತ್ವರೆಯೊಡಗೂಡಿದವರಾಗಿ ರಂಗಸ್ಥಾನದಲ್ಲಿ ಪ್ರವೇಶಂಗೈದು ಬಾಲಕನಾದ ಲವನಂ ಕುಱಿತು–'' ಎಲೈ ಬಾಲಕನೆ, ಎಲೈ ಬಾಲಕನೆ, ದೇಶದಲ್ಲಿ ಅಶ್ವವು ಅಶ್ವವು ಎಂಬದಾಗಿ ಒಂದು ಪ್ರಾಣಿವಿಶೇಷವಂ ನಾವು ಕೇಳುತ್ತಲಿದ್ದೇವೆಯಲ್ಲವೆ. ಈಗ ನಾವು ಆ ಅಶ್ವವೆಂಬ ಪ್ರಾಣಿಯಂ ಪ್ರತ್ಯಕ್ಷವಾಗಿ ಕಂಡೆವು '' ಎಂದು ಪೇಳಿದವರಾಗಲು ; ಅದಂ ಕೇಳಿ ಲವನು–'' ಎಲೈ ಬ್ರಹ್ಮಚಾರಿಗಳಿರಾ ! ಅಶ್ವವು ಅಶ್ವವು ಎಂದು ವೇದದಲ್ಲಿ ಪಶುಗಳಂ ನಿರೂಪಿಸುವ ಪ್ರಕರಣದಲ್ಲಿ ಯುದ್ಧಪ್ರಕರಣದಲ್ಲಿಯೂ ಒಂದು ಪ್ರಾಣಿವಿಶೇಷವು ಶ್ರುತವಾಗುತ್ತಲಿದೆಯಾದಕಾರಣ ಆ ಅಶ್ವವು ಯಾವ ರೀತಿ ಇರುವುದೊ ಆರೀತಿ ನೀವು ಪೇಳುವರಾಗಿ '' ಎಂದು ಪೇಳಲು ; ಆ ಬ್ರಹ್ಮಚಾರಿಗಳು ಲವನಂ ಕುಱಿತು–'' ಎಲೈ ಬಾಲಕನೆ, ಕೇಳು. ಹಿಂಭಾಗದಲ್ಲಿ ವಿಸ್ತೃತವಾದ ಪುಚ್ಛವಂ ವಹಿಸುವುದಾಗಿ ಆ ಪುಚ್ಛವಂ ನಿರಂತರವೂ ಕೊಡುಹುತ್ತಲಿದೆ. ಮತ್ತು ಅಶ್ವವು ದೀರ್ಘವಾದ ಕಂಠವುಳ್ಳುದಾಗಿದೆ. ಅದಕ್ಕೆ ಗೊರಸುಗಳು ನಾಲ್ಕೇ ಸರಿ. ಎಳಹುಲ್ಲುಗಳನ್ನೇ ಆ ಪ್ರಾಣಿ ಮೆಲ್ಲುವುದು. ಮಾವಿನ ಕಾಯಿಗಳಂತೆ ಇರುವ ಲದ್ದಿಯ ಉಂಡೆಗಳಂ ಎರಚುತ್ತಲಿದೆ. ಈ ರೀತಿ ನಾವು ಪೇಳಿದುದಱಿಂದ ಏನು ಫಲವು ? ಮತ್ತು ಅಶ್ವವು ದೂರವಾಗಿ ಪೋಗುತ್ತಲಿದೆ. ಬಾರೈ, ಬಾರೈ, ಪೋಗೋಣ '' ಎಂದು ಪೇಳಿ, ಆ ಬಾಲಕರು ಕೃಷ್ಣಾಜಿನದಲ್ಲಿ ಹಸ್ತಗಳಲ್ಲಿಯೂ ಪಿಡಿದು ಸೆಳೆಯಲು ; ಆಗ ಲವನು ಅಶ್ವವಂ ನೋಡಬೇಕೆಂಬ ಕುತೂಹಲದಿಂ ಈ ಬ್ರಹ್ಮಚಾರಿಗಳ ನಿರ್ಬಂಧದಿಂ ಈ ಗುರುಜನವಿಷಯವಾದ ವಿನಯದಿಂದಲೂ ಕೂಡಿದವನಾಗಿ–'' ಎಲೈ ಪೂಜ್ಯರೇ ನೋಡಿ. ಈ ಬಾಲಕರು ನನ್ನಂ ಬಲಾತ್ಕಾರದಿಂ ಸೆಳೆಕೊಂಡು ಪೋಗುತ್ತಾರೆ '' ಎಂದು ಪೇಳಿ ತ್ವರೆಯಿಂದ ಅಡಿಗಳನ್ನಿಡಲು ;

ಅದಂ ನೋಡಿ ಅರುಂಧತಿಯು ಜನಕರಾಯನು ಸಹ ಕುಮಾರನಾದ ಲವನಿಗೆ ಅಶ್ವವಂ ನೋಡಬೇಕೆಂಬ ಮಹತ್ತಾದ ಕುತೂಹಲವು ಎಂದರು. ಕೌಸಲ್ಯೆಯು ಅರುಂಧತೀ ಜನಕರಾಯರನ್ನು ಕುಱಿತು–'' ಎಲೈ ನೋಡಿ. ಅರಣ್ಯದಲ್ಲಿರುವ ಈ ಲವನೆಂಬ ಬಾಲಕನ ಸೌಂದರ್ಯದಿಂ ಮನೋಹರವಾದ ವಚನಗಳಿಂದಲೂ ನೀವು ನಾವು ಸಹ ಸಂತೋಷಪಟ್ಟವರಾದೆವು. ಎಲೌ ಪೂಜ್ಯಳಾದ ಅರುಂಧತಿಯೇ, ನಾನು ಆ ಬಾಲಕನಂ ನೋಡದೆ

ಇರುವವಳಾಗಿ ಯಾರಿಂದಲೊ ವಂಚಿಸಲ್ಪಟ್ಟವಳಂತೆ ಇದ್ದೇನೆಯಾದಕಾರಣ ಈ ವನ ದಲ್ಲೇ ಮತ್ತೊಂದು ಕಡೆಯಲ್ಲಿ ಇದ್ದುಕೊಂಡು ನಾವು ಗರ್ವಿತನಾಗುತಲಿರುವ ಆ ಚಿರಂ ಜೀವಿಯಂ ನೋಡೋಣ '' ಎಂದು ಪೇಳಲು ; ಅರುಂಧತಿಯು–'' ಎಲೌ ರಾಜಪತ್ನಿಯೇ, ಅತಿವೇಗದಿಂ ದೂರವಾಗಿ ಪೋಗಿರುವ ಚಪಲನಾದ ಆ ಬಾಲಕನು ಎಂತು ಕಾಣಲ್ಪಡು ವನು ?'' ಎಂದು ಪೇಳಲು ;

ಅಷ್ಟರೊಳಗೆ ಪ್ರುಷ್ಟಿಯೆಂಬ ಅವಸರದವನು ಪುನಃ ವಾಲ್ಮೀಕ್ಯಾಶ್ರಮದಿಂ ರಂಗ ಸ್ಥಾವನ್ನೈದಿ ಅರುಂಧತೀದೇವಿಯಂ ಜನಕರಾಯನಂ ಕೌಸಲ್ಯೆಯಂ ಸಹ ಕುಱಿತು– '' ಎಲೆ ಪೂಜ್ಯರೇ, ವಾಲ್ಮೀಕಿಮುನಿಯು ಈ ಬಾಲಕನಾದ ಲವನ ವೃತ್ತಾಂತವಂ ನೀವು ಸಮಯವಿಶೇಷದಲ್ಲಿ ತಿಳಿಯುವರಾಗಬೇಕೆಂದು ಪೇಳಿದರು '' ಎಂದು ಬಿನ್ನವಿಸಲು ; ಜನಕರಾಯನು ಆ ವಾಲ್ಮೀಕಿಮುನಿಯ ವಚನವಂ ಕೇಳಿ–'' ಎಲೈ, ಈ ಬಾಲಕನ ಉತ್ಪತ್ತಿ ಕ್ರಮವು ಏನೊ ಅತಿರಹಸ್ಯವಾಗಿ ಇರುವುದು. ಎಲೌ ಪೂಜ್ಯಳಾದ ಅರುಂಧತಿಯೆ, ಎಲೌ ಕೌಸಲ್ಯೆಯೆ, ಎಲೈ ಪೂಜ್ಯನಾದ ಪ್ರುಷ್ಟಿಯೆ, ಈಗ ನಾವೇ ಜ್ಞಾನಸಂಪನ್ನನಾದ ವಾಲ್ಮೀಕಿಮುನಿಯ ದರ್ಶನವಂ ಮಾಡೋಣ '' ಎಂದು, ಈ ವೃದ್ಧಸಮೂಹವು ರಂಗ ಸ್ಥಾನದಿಂ ಪೊಱಟುಪೋಗಲು ;

ಪುನಃ ಆ ಬಾಲಬ್ರಹ್ಮಚಾರಿಗಳು ರಂಗಸ್ಥಾನವನ್ನೈದಿ ಲವನಂ ಕುಱಿತು– '' ಎಲೆ ಕುಮಾರನೆ, ಆಶ್ಚರ್ಯವಂ ನೋಡುವನಾಗು '' ಎಂದು ಪೇಳಿದವರಾಗಲು ; ಲವನು–'' ಎಲೈ ಬ್ರಹ್ಮಚಾರಿಗಳಿರಾ ! ಈ ಆಶ್ಚರ್ಯವಂ ನೋಡಿದವನಾದೆನು. ಮತ್ತು ಈ ಅಶ್ವವು ಅಶ್ವಮೇಧವೆಂಬ ಮಹಾಯಜ್ಞಕ್ಕೆ ಉಪಯುಕ್ತವಾದುದೆಂದು ಸಹ ತಿಳಿಯು ತ್ತೇನೆ '' ಎಂದು ಪೇಳಲು ; ಆ ಬ್ರಹ್ಮಚಾರಿಗಳು–'' ಎಲೈ ಬಾಲಕನೇ, ನೀನು ಈ ಅರ್ಥವಂ ಎಂತು ತಿಳಿಯುವೆ ? '' ಎಂದು ಕೇಳಿದವರಾಗಲು ; ಲವನು ಆ ಬಾಲಕರಂ ಕುಱಿತು–'' ಎಲೈ ಮೂರ್ಖರೇ, ನೀವು ಕೂಡ ವೇದದಲ್ಲಿ ಆ ಅಶ್ವಮೇಧಕಾಂಡವಂ ಪಾಠಂಗೈದು ಇದ್ದರಲ್ಲ. ಈಗ ನೀವು ಇಲ್ಲಿ ಇರುವ ಕ್ರಮವಂ ಚೆನ್ನಾಗಿ ನೋಡಬಾರದೆ. ಈ ಅಶ್ವಕ್ಕೆ ನಾಲ್ಕು ಕಡೆಯಲ್ಲೂ ಪ್ರತ್ಯೇಕ ಪ್ರತ್ಯೇಕವಾದ ನೂಱು ನೂಱು ಮಂದಿ ಕವ ಚಧಾರಿಗಳಾಗಿ ಬತ್ತಳಿಕೆಗಳಂ ಧರಿಸಿದವರಾಗಿ ದಂಡಪಾಣಿಗಳಾಗಿಯು ಶಾಸ್ತ್ರೋಕ್ತ ಪ್ರಕಾರದಿಂ ರಕ್ಷಕರಾದ ಶೂರರು ಕಲ್ಪಿಸಲ್ಪಟ್ಟು ಇದ್ದಾರೆ. ಅದೇರೀತಿ ಮಿಗಿಲಾದುದು ಸಹ ಶಾಸ್ತ್ರೋಕ್ತವಾಗಿ ಕಾಣುತಲಿದೆ. ನಿಮಗೆ ಯಾವ ಅರ್ಥದಲ್ಲಾದರೂ ವಿರೋಧ ತೋಱಿದರೆ ಅದಂ ನೀವು ನನ್ನಂ ಕೇಳುವರಾಗಿ '' ಎಂದು ಲವನು ಪೇಳಲು ; ಆ ಬ್ರಹ್ಮ ಚಾರಿಗಳು–'' ಎಲೈ ಲವನೆ, ಈ ಅಶ್ವವು ಮಹಾಶೂರರಿಂ ಸುತ್ತುವರಿಯಲ್ಪಟ್ಟುದಾಗಿ ಸರ್ವತ್ರ ಸಂಚರಿಸುವುದಕ್ಕೆ ಫಲವೇನು ? '' ಎಂದು ಪ್ರಶ್ನೆಗೈಯಲು ; ಅವನು ಅಭಿಪ್ರಾ ಯಪೂರ್ವಕವಾಗಿ ತನ್ನ ಮನಸ್ಸಿನಲ್ಲೇ–ಎಲೈ, ಅಶ್ವಮೇಧವೆಂಬ ಮಹಾಯಜ್ಞವು ಜಗ ತ್ತಂ ಜಯಿಸಿರುವ ಕ್ಷತ್ರಿಯರಿಗೆ ಬಲವಂತರಾದ ಕ್ಷತ್ರಿಯರಂ ನಿರಾಕರಿಸುವ ಮಹತ್ತಾದ ಉತ್ಕೃಷ್ಟತ್ವವಲ್ಲವೆ ? ಎಂದು ಚಿಂತಿಸುತ್ತಲಿರಲು.

ನೇಪಥ್ಯದಲ್ಲಿ ಆ ಅಶ್ವದ ಮುಂಭಾಗದಲ್ಲಿರುವ ಒಬ್ಬ ಸ್ತೋತ್ರಪಾಠಕನು ಇಂತೆಂ ದನು :–'' ಎಲೈ ಕೇಳಿ. ಇದು ಅಶ್ವವೆಂದು ನೀವು ತಿಳಿಯಬೇಡಿ. ಮತ್ತೇನೆಂದರೆ :–

ಭೂಲೋಕ ಮೊದಲಾದ ಸಪ್ತಲೋಕಂಗಳಲ್ಲಿಯೂ ಏಕವೀರನಾದ ರಾವಣಕುಲಕ್ಕೆ ಶತ್ರುವಾದ ಶ್ರೀರಾಮನ ವೀರತ್ವವಂ ಪ್ರಖ್ಯಾತವಂ ಮಾಡುವ ಧ್ವಜಪಟವೇ ಇದು, ಎಂದು ತಿಳಿಯುವರಾಗಿ '' ಎಂದು ಉಗ್ಗಳಿಸಲು ;

ಅದಂ ಕೇಳಿ ಲವನು ಗರ್ವದೊಡಗೂಡಿ–'' ಎಲೈ, ಆ ಭಟನ ಮುಖದಿಂ ಹೊಱಡುವ ಅಕ್ಷರಂಗಳು ಜ್ವಲಿಸುತ್ತಲಿವೆಯಲ್ಲವೆ?'' ಎಂದನು. ಆ ಬ್ರಹ್ಮಚಾರಿಗಳು ಲವನಂ ಕುಱಿತು, '' ಎಲೈ ಆ ಭಟನು ಪ್ರಾಜ್ಞನಾದ ನಿನ್ನಂ ಕುಱಿತು ಏನೆನ್ನುತ್ತಾನೆ ? '' ಎಂದು ಪೇಳಲು ; ಲವನು ನೇಪಥ್ಯಕ್ಕೆ ಅಭಿಮುಖನಾಗಿ–'' ಎಲೈ ಎಲೆ ಭಟನೆ, ನೀನು ಈರೀತಿ ರಾಜ ಕೀರ್ತಿಯಂ ಉಗ್ಗಳಿಸುವೆಯಾದಕಾರಣ ಈ ಭೂಮಿಯಲ್ಲಿ ಕ್ಷತ್ರಿಯರು ಇಲ್ಲವೊ ಏನು ? '' ಎಂದು ಗರ್ಜಿಸಲು ; ಅದಂ ಕೇಳಿ ನೇಪಥ್ಯದಲ್ಲಿ ಆ ಪುರುಷನು ಲವನಂ ಕುಱಿತು–'' ಎಲೆ ಮಹಾರಾಜನಾದ ಶ್ರೀರಾಮನಿಗೆ ಎದುರಾಗಿ ಕ್ಷತ್ರಿಯರು ಎಲ್ಲಿ ಇದ್ದಾರೆ ? '' ಎನಲು ; ಲವನು ಕ್ರೋಧದಿಂ ಯುಕ್ತನಾಗಿ, '' ಹಿಂದೆ ಮುಂದೆ ಚೆನ್ನಾಗಿ ನೋಡದೆ ಕಾರ್ಯಗಳಂ ಮಾಡುವ ಇಂಥ ಮೂರ್ಖರಂ ನಿಂದಿಸು '' ಎನುತ,–'' ಎಲೈ ಮೂರ್ಖನೇ, ಹಾಗಾದರೆ ಭೂಮಿಯಲ್ಲಿ ಕ್ಷತ್ರಿಯರು ಇಲ್ಲವೆ ? ಇರಲೇ ಇದ್ದಾರು. ಈ ಬೆದರಿಕೆ ಏನು ? ಅಥವಾ ಈ ಮಾತುಗಳಿಂ ಫಲವೇನು ? ಏಳು ಲೋಕಗಳಲ್ಲಿಯೂ ಏಕವೀರನಾದ ನಿಮ್ಮ ಅರಸಿನ ವಿಜಯಧ್ವಜಪಟರೂಪವಾದ ಆ ಅಶ್ವವಂ ಅಪಹರಿಸುತ್ತೇನೆ '' ಎಂದು ಪೇಳಿ, ಋಷಿ ಪುತ್ರರಂ ಕುಱಿತು–'' ಎಲೈ ಬ್ರಹ್ಮಚಾರಿಗಳಿರಾ, ನೀವು ಸುತ್ತಲೂ ಬಳಸಿಕೊಂಡು ಹೆಂಟೆ ಗಳಿಂ ಈ ಅಶ್ವವಂ ಪ್ರಹರಿಸುವರಾಗಿ ಹಿಂದಕ್ಕೆ ತಿರವಿಕೊಳ್ಳಿ. ನಮ್ಮ ಆಶ್ರಮದಲ್ಲಿ ಈ ಅಶ್ವವು ಹುಲ್ಲೆಗಳ ಮಧ್ಯದಲ್ಲಿ ಸಂಚರಿಸಿಕೊಂಡು ಇರಲಿ '' ಎಂದು ಲವನು ಪೇಳಲು ; ಅದಂ ಕೇಳಿ ಒಬ್ಬ ಪುರುಷನು ಕ್ರೋಧಯುಕ್ತನಾಗಿ ನೇಪಥ್ಯದಿಂ ರಂಗಸ್ಥಾನವಂ ಪ್ರವೇ ಶಂಗೈದು ಲವನಂ ಕುಱಿತು–'' ಎಲೈ ಚಪಲನೆ, ಬಿಡು ಬಿಡು. ನೀನು ಏನೆಂದು ಮಾತ ನಾಡುವೆ ? ಅತಿತೀಕ್ಷ್ಣಂಗಳಾದ ಆಯುಧಧಾರಿಗಳ ಪಙ್ತಿಗಳು ನೀನು ಬಾಲಕನಾದರೂ ನಿನ್ನ ಗರ್ವಯುಕ್ತವಾದ ವಚನವಂ ಈಗ ಸಹಿಸುವುದಿಲ್ಲ. ರಾಜಪುತ್ರನಾದ ಮಹಾಶೂರ ನಾದ ಚಂದ್ರಕೇತುವು ಅತಿಪ್ರಚಂಡನಾದವನು. ಅವನು ಎಂದೂ ನೋಡದಿರುವ ಅರಣ್ಯ ವಂ ನೋಡುವುದಱಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಎಷ್ಟು ಪರ್ಯಂತವು ಇಲ್ಲಿಗೆ ಬರು ವುದಿಲ್ಲವೊ ಅಷ್ಟಱೊಳಗೆ ನೀನು ಶೀಘ್ರದಿಂ ಈ ಗಿಡಗಳ ಮಾರ್ಗದಿಂ ಹಿಂದಕ್ಕೆ ಓಡುವ ನಾಗು '' ಎಂದು ಪೇಳಲು ; ಅದಂ ಕೇಳಿ ಆ ಬ್ರಹ್ಮಚಾರಿಗಳು–'' ಎಲೈ ಲವನೆ, ಎಲೈ ಲವನೆ, ಇನ್ನು ಈ ಅಶ್ವವಂ ಹಿಂದಕ್ಕೆ ತಿರಿಗಿಸುವುದು ಸಾಕು, ಸಾಕು. ಎಲೈ ಬಾಲಕನೇ, ಪಙ್ತಿಪಙ್ತಿಗಳಾಗಿ ಬರುವ ಈ ಆಯುಧಧಾರಿಗಳು ಧನುಷ್ಟಂಕಾರವಂ ಮಾಡುವರಾಗಿ ಬೆದಱಿಸುತ್ತಲಿದ್ದಾರೆ. ನಮ್ಮ ಆಶ್ರಮಸ್ಥಾನವು ಸಹ ದೂರವಾಗಿ ಇದೆಯಾದಕಾರಣ ನಾವು ಇಲ್ಲಿಂದ ಹುಲ್ಲೆಗಳು ಹಾಱಿ ಹಾಱಿ ಓಡುವಂತೆ ಓಡಿಹೋಗೋಣ ಬಾ '' ಎಂದು ಕರೆಯುವರಾಗಲು ; ಅದಂ ಕೇಳಿ ಲವನು ನಕ್ಕವನಾಗಿ, ಶಸ್ತ್ರಗಳು ಏಕೆ ಚಲಿಸುತ್ತಲಿವೆ ಎಂದು, ತನ್ನ ಧನುಸ್ಸಿನಲ್ಲಿ ಹೆದೆಯನ್ನಾರೋಪಿಸುವನಾಗಿ, ಇಂತೆಂದನು :–'' ಹೆದೆಯೆಂಬ ನಾಲಗೆಯಿಂದ ಸುತ್ತಲ್ಪಟ್ಟ ಭಯಂಕರಗಳಾದ ತುದಿಗಳೆಂಬ ಕೋರೆದಾಡೆಗಳುಳ್ಳುದಾಗಿ

ಹೊಱಡುತ್ತಲಿರುವ ಭಯಂಕರವಾದ ನಿಬಿಡವಾದ ಗರ್ಘರ ಶಬ್ದವುಳ್ಳುದಾದಕಾರಣ ಈ ನನ್ನ ಧನುಸ್ಸು ಜಗತ್ತಂ ಕಬಳಿಸುವುದಱಲ್ಲಿ ಪ್ರಯತ್ನವುಳ್ಳುದಾಗಿ ಅಟ್ಟಹಾಸವಂ ಮಾಡುತ್ತಲಿರುವ ಮೃತ್ಯುವಿನ ಮುಖದ ಆಟೋಪವನ್ನನುಸರಿಸುತ್ತ ವಕ್ರವಾದ ಉದರಪ್ರದೇಶವುಳ್ಳುದಾಗಲಿ!'' ಎಂದು ಗರ್ಜಿಸುತ್ತ ಲವನು ಯುದ್ಧಸನ್ನದ್ಧನಾದನು.

ಈರೀತಿ ಯಥಾಯೋಗ್ಯವಾಗಿ ತಿರಿಗಿಕೊಂಡು ಎಲ್ಲರೂ ರಂಗಸ್ಥಾನದಿಂ ಪೊಱಟು ಪೋದರು.

ಚತುರ್ಥಾಂಕ ತಾತ್ಪರ್ಯಂ ಸಮಾಪ್ತಂ.

## ॥ ಪಂಚಮಾಂಕಂ ॥

ಐದನೆಯ ದಿವಸದಲ್ಲಿ ಸಮಸ್ತ ಸಾಮಾಜಿಕರು ಪುನಃ ರಂಗಸ್ಥಾನವನ್ನೈದಿ ನಾಟಕಾಭಿನಯವಂ ನೋಡಲೋಸುಗ ಕುತೂಹಲಯುಕ್ತರಾಗಲು ; ಸೂತ್ರಧಾರನು ನಟನು ಇವರು ಮೊದಲಾದ ಗಾಯಕರು ತಂತಮ್ಮ ವ್ಯಾಪಾರಗಳಲ್ಲಿ ಉದ್ಯುಕ್ತರಾಗುತ್ತಿರಲು ;

ಈರೀತಿ ನೇಪಥ್ಯದಿಂ ಕ್ರೋಧಯುಕ್ತನಾಗಿ ಒಬ್ಬ ಪುರುಷನು ರಂಗಸ್ಥಾನವಂ ಪ್ರವೇಶಂಗೈದು ಅಶ್ವಮೇಧ ಸಂಬಂಧಿಯಾದ ಅಶ್ವವಂ ಅಡ್ಡಗೈಸುವ ಲವನಂ ಕುಱಿತು, "ಎಲೈ ಚಪಲನೇ, ನೀನು ಬಾಲಕನಾದರೂ ನಿನ್ನ ಗರ್ವವಚನವಂ ಈ ಆಯುಧಧಾರಿಗಳು ಸಹಿಸುವುದಿಲ್ಲ. ಮತ್ತು ಮಹಾರಾಜ ಪುತ್ರನಾದ ಚಂದ್ರಕೇತುವು ಹಿಂದೆ ಬರುತ್ತಲಿದ್ದಾನೆ. ಆತನು ಇಲ್ಲಿಗೆ ಬರುವಷ್ಟಱೊಳಗೆ ನೀನು ಓಡುವನಾಗು" ಎಂದು ಚಂದ್ರಕೇತುರಾಯನ ಪ್ರವೇಶವಂ ಸೂಚನಂಗೈದನಂತರದಲ್ಲಿ ಲವನು ಯುದ್ಧಸನ್ನದ್ಧನಾಗಿ ನಿಲ್ಲಲು ;

ನೇಪಥ್ಯದಲ್ಲಿ ಒಬ್ಬ ಪುರುಷನು ಸೇನಾಪತಿಗಳಂ ಕುಱಿತು–"ಎಲೊ ಎಲೋ ಸೇನಾಪತಿಗಳಿರಾ, ನನಗೆ ಅವಲಂಬನವುಂಟಾಯಿತು. ನೀವು ಹೆದಱಬೇಡಿ. ಅದೆಂತೆಂದರೆ–ಇತ್ತ ನೋಡಿ ; ಕುಮಾರನಾದ ಚಂದ್ರಕೇತುವು ಅತಿಶೀಘ್ರವಾಗಿ ಸುಮಂತ್ರನಿಂದ ಪ್ರೇರಿಸಲ್ಪಡುವುವಾದಕಾರಣ ಅತಿವೇಗದಿಂ ಬರುತ್ತಲಿರುವ ಅಶ್ವಗಳುಳ್ಳ ರಥದಲ್ಲಿ ಕುಳಿತು ರಥಾಗ್ರದಲ್ಲಿ ನಿಲ್ಲಿಸಲ್ಪಟ್ಟುದಾಗಿ ಅತ್ಯಂತವಾಗಿ ಚಲಿಸುತ್ತಲಿರುವ ಕೋವಿದಾರ ವೃಕ್ಷದ ಶಾಖೆಯೆಂಬ ಧ್ವಜವುಳ್ಳವನಾಗಿ ಈ ಕ್ಷಣದಲ್ಲಿ ಬಂದನಲ್ಲವೆ ?" ಎಂದು ಪೇಳಲು ;

ಅದೇರೀತಿ ರಥಾರೂಢನಾಗಿ ಚಂದ್ರಕೇತುರಾಯನು ರಂಗಸ್ಥಾನವನ್ನೈದಿ ತನ್ನ ಸಾರಥಿಯಾದ ಸುಮಂತ್ರನಂ ಕುಱಿತು ಇಂತೆಂದನು :–"ಎಲೈ ಪೂಜ್ಯನಾದ ಸುಮಂತ್ರನೇ, ನೋಡು. ಯುದ್ಧರಂಗದ ಮುಂಭಾಗದಲ್ಲಿ ಚಲಿಸುತ್ತಲಿರುವ ಪಂಚಶಿಖೆಗಳುಳ್ಳ ಒಬ್ಬಾನೊಬ್ಬ ವೀರಬಾಲಕನು ಸ್ವಲ್ಪ ಕೋಪಯುಕ್ತನಾಗುವುದಱಿಂ ರಕ್ತವರ್ಣವಾಗುತ್ತಲಿರುವ ಮುಖಕಾಂತಿಯುಳ್ಳವನಾಗಿ ಎಡವಿಲ್ಲದೆ ಹೆದೆಯಂ ಧ್ವನಿಗೈಯುತ್ತಲಿರುವ ತುದಿಯುಳ್ಳ ಧನುಸ್ಸಿನಿಂದ ನಮ್ಮ ಸೇನೆಗಳ ಮೇಲೆ ಬಾಣವರ್ಷವಂ ವರ್ಷಿಸುತ್ತಲಿದ್ದಾನೆ. ಇದು ಆಶ್ಚರ್ಯವು, ಇದು ಆಶ್ಚರ್ಯವು ! ನೋಡು. ರಘುವಂಶದ ಪ್ರಖ್ಯಾತವಲ್ಲದೆ ಇರುವ ನೂತನವಾದ ಅಂಕುರವೋ ಎಂಬಂತೆ ಇರುವ ಈ ಮುನಿಕುಮಾರನು ಒಬ್ಬನು ಅತಿಕೋಪಯುಕ್ತನಾಗಿ ಸೀಳಲ್ಪಟ್ಟ ಗಜಕಪೋಲಗ್ರಂಥಿಗಳಲ್ಲಿ ತಗಲಿ ಅದಱಿಂ ಟೇಂಕರಿಸುವುದಱಿಂದ ಭಯಂಕರಗಳಾಗಿ ಜ್ವಲಿಸುತ್ತಲಿರುವ ಬಾಣ ಸಹಸ್ರಗಳುಳ್ಳವನಾಗಿ ನನಗೆ ಕುತೂಹಲವನ್ನುಂಟುಮಾಡುತ್ತಾನೆ" ಎಂಬ ಚಂದ್ರಕೇತುವಿನ ವಚನವಂ ಕೇಳಿ ಸುಮಂತ್ರನು ಇಂತೆಂದನು :–"ಎಲೈ ಆಯುಷ್ಮಂತನೆ, ದೇವಾಸುರರ ಪ್ರಭಾವವಂ ಅತಿಕ್ರಮಿಸಿದವ

ನಾಗಿರುವ ಅದೇರೀತಿ ಸಮಾನವಾದ ಆಕೃತಿಯುಳ್ಳ ಈ ಬಾಲಕನಂ ನೋಡಿ ನಾನು ವಿಶ್ವಾಮಿತ್ರಮುನಿಯ ಯಜ್ಞಕ್ಕೆ ವಿಘ್ನಕಾರಿಗಳಾದ ರಾಕ್ಷಸರ ಸಂಹಾರಕಾಲದಲ್ಲಿ ಧನುಸ್ಸಂ ಧರಿಸಿಕೊಂಡು ಸನ್ನದ್ಧನಾಗಿರುವ ಶ್ರೀರಾಮನಂ ಸ್ಮರಿಸುತ್ತೇನೆ '' ಎಂಬ ಸುಮಂತ್ರನ ವಚನವಂ ಕೇಳಿ, ಚಂದ್ರಕೇತುವು ಇಂತೆಂದನು :–'' ಎಲೈ ಪೂಜ್ಯನೆ, ಈ ಮುನಿಕುಮಾರನಂ ಒಬ್ಬನಂ ಕುಱಿತು ಬಲುಮಂದಿ ಶೂರರು ಯುದ್ಧಪ್ರಯತ್ನವಂ ಮಾಡುತ್ತಾರೆ, ಎಂಬದಾಗಿ ನನ್ನ ಮನಸ್ಸು ಲಜ್ಜೆಯನ್ನೈದುತ್ತಲಿದೆ. ಅದೆಂತೆನೆ:–ಒಂದು ಕಡೆಯಲ್ಲಿ ಈ ಮುನಿಬಾಲಕನೊಬ್ಬನು ಅತ್ಯಂತವಾಗಿ ಚಲಿಸುತ್ತಲಿರುವವನಾದಕಾರಣ ಭಯಂಕರಗಳಾಗಿ ಹಸ್ತಗಳಿಂ ಧರಿಸಲ್ಪಟ್ಟಿರುವ ಶಸ್ತ್ರಸಮೂಹವುಳ್ಳವಾಗಿ, ಮತ್ತು ಧ್ವನಿಗೈಯುತ್ತಲಿರುವ ಸುವರ್ಣಮಯಗಳಾದ ಕಿಱುಗಂಟೆಗಳಿಂದ ಝಣಝಣತ್ಕಾರಯುಕ್ತಗಳಾದ ರಥಗಳುಳ್ಳವಾಗಿ, ಮತ್ತು ಅತ್ಯಂತವಾಗಿ ಮದಜಲಗಳಂ ವರ್ಷಿಸುತ್ತಲಿರುವ ಗಜಗಳೆಂಬ ಮೇಘಗಳುಳ್ಳವಾಗಿಯೂ ಇರುವ ಸೇನೆಗಳಿಂ ಸಮಾನಭಾವವಂ ವಹಿಸಿ, ಸುತ್ತುವರೆಯಲ್ಪಟ್ಟಿದ್ದಾನೆಯಲ್ಲವೆ ? '' ಎಂಬ ಚಂದ್ರಕೇತುವಚನವಂ ಕೇಳಿ, ಸುಮಂತ್ರನು– '' ಎಲೈ ಕುಮಾರನೆ, ಎಲೈ ಕುಮಾರನೆ, ಈ ಸೇನೆಯಲ್ಲಿರುವ ಶೂರರೆಲ್ಲರು ಕೂಡಿದರೂ ಈ ಬಾಲಕನೊಡನೆ ಯುದ್ಧವಂ ಮಾಡಲಾಱರು. ಇನ್ನು ಒಬ್ಬರೊಬ್ಬರಾಗಿ ಯುದ್ಧವಂ ಮಾಡಲಾಱರೆಂದು ಹೇಳತಕ್ಕುದೇನು ಇದೆ ? '' ಎಂದು ಪೇಳಲು ; ಚಂದ್ರಕೇತುವು ಸುಮಂತ್ರನಂ ಕುಱಿತು–'' ಎಲೈ ಪೂಜ್ಯನೆ, ತ್ವರೆಮಾಡು, ತ್ವರೆಮಾಡು. ಈ ಬಾಲಕನಿಂದ ನಮ್ಮಂ ಆಶ್ರಯಿಸಿಕೊಂಡಿರುವ ಈ ಸೇನಾಜನರಿಗೆ ಮಹತ್ತಾದ ಸಂಹಾರವು ಆರಂಭಿಸಲ್ಪಟ್ಟಿತು. ಅದೆಂತೆನೆ :–ಈ ಮಹಾವೀರನಾದ ಬಾಲಕನು ಪರ್ವತಗಳ ಹೊದೆಗಳಲ್ಲಿ ಸೇರಿಕೊಂಡು ಅತ್ಯಂತವಾಗಿ ಗರ್ಜಿಸುತ್ತಲಿರುವ ಗಜಸಮೂಹಂಗಳಿಗೆ ಕರ್ಣಜ್ವರವಂ ಕಲ್ಪಿಸುತ್ತಲಿರುವ ಧನುಷ್ಟಂಕಾರಂಗಳಂ ಮಹತ್ತುಗಳಾದ ಭೇರೀಭಾಂಕಾರಂಗಳಿಂ ಪೂರಿಸಲ್ಪಟ್ಟುದನ್ನಾಗಿ ವೃದ್ಧಿಯನ್ನೈದಿಸುತ್ತ ಯುದ್ಧರಂಗದಲ್ಲಿ ಹಾಱಾಡುತ್ತಲಿರುವನಾದಕಾರಣ ಅತಿಭಯಂಕರಂಗಳಾದ ಮುಂಡಗಳ ಖಂಡಸಮೂಹಗಳಿಂ ಭೂಮಿಯಂ ಹಸುಗೊಂಡಿರುವ ಕಾಲಮೃತ್ಯುವಿನ ಭಯಂಕರವಾದ ಮುಖದಿಂ ಬೀಳುತ್ತಲಿರುವ ಕಬಳವಿಶೇಷಗಳಿಂದ ಎರಚಲ್ಪಡುತ್ತಲಿರುವಂತೆ ಮಾಡುತ್ತಲಿದ್ದಾನೆ, ನೋಡು '' ಎಂಬ ಚಂದ್ರಕೇತುವಚನವಂ ಕೇಳಿ ಸುಮಂತ್ರನು ತನ್ನ ಮನಸ್ಸಿನಲ್ಲಿ–ಇಂಥ ಶೂರನಾದ ಈ ಬಾಲಕನೊಡನೆ ಈ ಕುಮಾರನಾದ ಚಂದ್ರಕೇತುವು ದ್ವಂದ್ವಯುದ್ಧವಂ ಮಾಡುವುದಂ ನಾವು ಎಂತು ಸಮ್ಮತಿಸೋಣ ! ಎಂದು ಚಿಂತಿಸಿ, ಆ ಬಳಿಕ,–ಅಥವಾ ಚಿಂತಿಸಿ ಫಲವೇನು ? ನಾವು ಇಕ್ಷ್ವಾಕುಕುಲಕ್ಕೆ ವೃದ್ಧರಾಗಿರುವವರಲ್ಲವೆ ? ಯುದ್ಧವು ಪ್ರಾಪ್ತವಾದಲ್ಲಿ ಇನ್ನು ಮತ್ತೊಂದು ಗತಿಯು ಏನು ಇದೆ ? ಎಂದು ಸುಮಂತ್ರನು ತನ್ನಲ್ಲಿ ತಾನೇ ಚಿಂತಿಸುತ್ತಿರಲು ; ಚಂದ್ರಕೇತುವು ಆಶ್ಚರ್ಯದೊಡನೆ ಲಜ್ಜೆಯೊಡನೆಯೂ ತ್ವರೆಯೊಡನೆಯೂ ಕೂಡಿದವನಾಗಿ–'' ಎಲೈ, ನಮ್ಮ ಸೇನೆಗಳೆಲ್ಲವು ಈ ಬಾಲಕನ ಶಸ್ತ್ರದ ವೇಗದಿಂ ಹಿಂದಕ್ಕೆ ತಿರಿಗಿದಂಥವೇ ಆದವಲ್ಲ, ಕಟಕಟಾ ! ನಮ್ಮ ಯಶಸ್ಸು ಭಗ್ನವಾಯಿತು '' ಎಂದು ತಮ್ಮನ್ನು ನಿಂದಿಸಿಕೊಂಡನು. ಸುಮಂತ್ರನು ರಥವೇಗವನ್ನಭಿನಯಿಸಿದವನಾಗಿ–'' ಎಲೈ

ಆಯುಷ್ಮಂತನಾದ ಚಂದ್ರಕೇತುವೇ, ಆ ವೀರನಾದ ಕುಮಾರನು ನಿನ್ನ ವಾಕ್ಕಿಗೆ ಗೋಚರನಾಗಿ ನಿಂತನು '' ಎಂದು ಪೇಳಲು ; ಚಂದ್ರಕೇತುವು ವಿಸ್ಮೃತಿಯನ್ನಭಿನಯಿಸಿ–'' ಎಲೈ ಪೂಜ್ಯನೆ, ಜನರು ಈ ಕುಮಾರನಂ ಏನೆಂದು ಕರೆಯುವರು ? '' ಎಂದು ಪ್ರಶ್ನೆಗೈಯಲು ; ಸುಮಂತ್ರನು–'' ಈತನು ಲವನೆಂಬ ನಾಮಧೇಯವುಳ್ಳವನು '' ಎಂದು ಪೇಳಿದನು.

ಆ ಬಳಿಕ ಚಂದ್ರಕೇತುವು ಲವನಂ ಕುಱಿತು–'' ಎಲೈ, ಎಲೈ, ಮಹಾಭುಜ ಪರಾಕ್ರಮವುಳ್ಳ ಲವನೇ, ಸೇನಾಜನರೊಡನೆ ಯುದ್ಧವಂ ಮಾಡಿ ನಿನಗೆ ಏನು ಫಲವು ? ಇಗೋ ! ನಾನು ಎದುರಿಗೆ ನಿಂತು ಇದ್ದೇನೆ. ನನ್ನೊಡನೆ ಯುದ್ಧವಂ ಮಾಡು. ತೇಜಸ್ಸು ತೇಜಸ್ಸಿನಲ್ಲೇ ಶಾಂತಿಯನ್ನೈದಲಿ ! '' ಎಂದು ಪೇಳಲು ; ಸುಮಂತ್ರನು–'' ಎಲೈ ಕುಮಾರನೇ, ಕುಮಾರನೇ, ಸಿಂಹದ ಮಱಿಯು ಮೇಘಗರ್ಜನವಂ ಕೇಳಿ ಮತ್ತೊಂದು ಸಿಂಹವು ತನ್ನೊಡನೆ ಯುದ್ಧವಂ ಮಾಡಲೋಸುಗ ಗರ್ಜಿಸುತ್ತಲಿದೆಯೊ ಎಂಬ ಭ್ರಾಂತಿಯಿಂದ ಗಜಸಮೂಹಗಳಂ ಸಂಹರಿಸುವುದಂ ಬಿಟ್ಟು ಹಿಂದಕ್ಕೆ ತಿರಿಗಿ ಬಂದಂತೆ ಈ ವೀರನಾದ ಬಾಲಕನು ನಿನ್ನಿಂದ ಕರೆಯಲ್ಪಟ್ಟಮಾತ್ರನಾಗಿಯೇ ಸೇನಾ ಸಂಹಾರವಂ ಬಿಟ್ಟು ಹಿಂದಕ್ಕೆ ತಿರಿಗಿದನು, ನೋಡು '' ಎಂದು ಪೇಳಲು ;

ಆಬಳಿಕ ವೀರೋದ್ಧತಪರಾಕ್ರಮವುಳ್ಳವನಾಗಿ ಲವನು ರಂಗಸ್ಥಾನವಂ ಪ್ರವೇಶಿಸಿ, ಚಂದ್ರಕೇತುವಂ ಕುಱಿತು–'' ಎಲೈ ರಾಜಪುತ್ರನೆ, ಎಲೈ ರಾಜಪುತ್ರನೆ, ಚೆನ್ನಾಯಿತು, ಚೆನ್ನಾಯಿತು. ನೀನು ಸತ್ಯವಾಗಿ ಇಕ್ಷ್ವಾಕುವಂಶದಲ್ಲಿ ಜನಿಸಿದವನಲ್ಲವೆ ? ಅದಱಿಂದಲೇ ನಾನು ಸೇನಾಸಂಹಾರವಂ ಬಿಟ್ಟು ಹಿಂದಕ್ಕೆ ತಿರಿಗಿದವನಾದೆನು '' ಎಂದು ಪೇಳುತ್ತಲಿರಲು ;

ಅಷ್ಟಱಲ್ಲಿಯೇ ನೇಪಥ್ಯದಲ್ಲಿ ಮಹತ್ತಾದ ಕೋಲಾಹಲಧ್ವನಿಯುಂಟಾಯಿತು.

ಅದಂ ಕೇಳಿ ಲವನು ಧಿಕ್ಕರಿಸುತ್ತ ಹಿಂದಕ್ಕೆ ತಿರಿಗಿ ನೋಡಿ–'' ಎಲೈ, ಈಗ ನನ್ನಿಂದ ಪರಾಜಿತರಾಗಿ ಓಡಿದವರಾದರೂ ಎಂತು ಪುನಃ ಹಿಂನಕ್ಕೆ ತಿರಿಗಿದವರಾಗಿ ಈ ಸೇನಾಪತಿಗಳು ನನ್ನನ್ನಡ್ಡೈಸುತ್ತಲಿದ್ದಾರೆ ! ಬುದ್ಧಿಹೀನರು '' ಎಂದು ನಿಂದಿಸಿ–'' ಆಗಲಿ, ಸುತ್ತಲೂ ವ್ಯಾಪಿಸುತ್ತಲಿರುವ ಗಂಭೀರವಾದ ಭಯಂಕರವಾದ ಸಿಂಹನಾದದ ಕೋಲಾಹಲಧ್ವನಿಯುಳ್ಳ ಈ ಸೇನಾಸಮೂಹವು ಪ್ರಳಯಕಾಲವಾಯುವಿನಿಂದ ತಾಡಿಸಲ್ಪಟ್ಟುದಾಗಿ ಮೊಱೆಯುತ್ತಲಿರುವ ಸಮುದ್ರದ ಪ್ರವಾಹದಂತೆ, ಪ್ರಳಯವಾಯುವಿನ ವೇಗದಿಂ ಕೀಳಲ್ಪಟ್ಟುವಾಗಿ ಒಣಗಿದ ಎಲೆಗಳಂತೆ ಸಮುದ್ರದಲ್ಲಿ ಬೀಳುತ್ತಲಿರುವ ಪರ್ವತಗಳ ಅಭಿಘಾತದಿಂ ವ್ಯಾಕುಲವಾದ ಬಡಬಾಗ್ನಿಯಂತೆ, ಅತಿಪ್ರಚಂಡವಾದ ನನ್ನ ಕೋಪಾಗ್ನಿಯ ಜ್ವಾಲಾಸಮೂಹಕ್ಕೆ ಕಬಳಭಾವವನ್ನೈದುವುದಾಗಲಿ ! '' ಎಂದು ಪೇಳಿ ಲವನು ಅತಿವೇಗದಿಂ ಅಡಿಗಳನ್ನಿಡುತ್ತಲಿರಲು ; ಅದಂ ನೋಡಿ ಚಂದ್ರಕೇತುವು–'' ಎಲೈ ಕುಮಾರನೇ, ಎಲೈ ಕುಮಾರನೇ, ಅತ್ಯಾಶ್ಚರ್ಯಕರವಾದ ಗುಣಾತಿಶಯದಿಂ ನೀನು ನನಗೆ ಪ್ರೇಮವಿಷಯನಾದಕಾರಣ ನನಗೆ ನೀನು ಮಿತ್ರನಾಗುತ್ತೀಯೆಯಾದುದಱಿಂ ಯಾವುದು ನನ್ನ ವಸ್ತುವೋ ಅದು ನಿನ್ನದೆ ಹೊಱತು ಮತ್ತೊಂದಲ್ಲವಾದಕಾರಣ ನಿನ್ನ ಪರಿಜನ

ವಾದ ಈ ಸೇನಾಜನದಲ್ಲಿ ಏಕೆ ಯುದ್ಧವಂ ಮಾಡುತ್ತಲಿದ್ದೀಯೆ? ಈ ಚಂದ್ರಕೇತುವೆಂಬ ನಾನು ನಿನ್ನ ಗರ್ವವಂ ಪರೀಕ್ಷಿಸುವುದಕ್ಕೆ ಒಱೆಗಲ್ಲಾಗಿ ನಿಂತಿರುವೆನಲ್ಲವೆ'' ಎಂದು ಪೇಳಲು; ಲವನು ಕ್ರೋಧದೊಡನೆ ಬೇಸಱಿಕೆಯೊಡನೆಯೂ ಯುಕ್ತನಾಗಿ– ''ಆಃ! ನೋಡಿದೆಯಾ? ಇಂಥ ವೀರನಾದ ಚಂದ್ರಕೇತುವಿನೊಡನೆ ನಾನು ವೀರವಾದವಂ ಮಾಡುವುದಕ್ಕೆ ವಿಘ್ನಕಾರಿಗಳಾದ ಪಾಪಿಷ್ಠರಾದ ಆ ಸೇನಾಪತಿಗಳಿಂ ನಾನು ವ್ಯರ್ಥವಾಗಿ ಮಾಡಲ್ಪಟ್ಟೆನು'' ಎನುತ, ಚಂದ್ರಕೇತುವಿಗೆ ಅಭಿಮುಖವಾಗಿ ತಿರಿಗಿದವನಾಗುತ್ತಲಿರಲು; ಚಂದ್ರಕೇತುವು ಸುಮಂತ್ರನಂ ಕುಱಿತು–''ಎಲೈ ಪೂಜ್ಯನೆ, ಈ ವೀರನಂ ನೋಡು. ಕುತೂಹಲಯುಕ್ತವಾದ ಗರ್ವದಿಂ ಮುಂದುಗಡೆಯಲ್ಲಿ ಸೇನೆಗಳಿಂ ಅನುಸರಿಸಲ್ಪಟ್ಟವನಾಗಿ ಹಸ್ತದಿಂ ಪಿಡಿಯಲ್ಪಟ್ಟ ಧನುಸ್ಸುಳ್ಳವನಾಗಿಯೂ ಇರುವ ಈ ಕುಮಾರನು ಉಭಯದಿಕ್ಕುಗಳಲ್ಲಿಯೂ ಎದ್ದಿರುವ ಮೇಘಕಾಂತಿಯಂತೆ ಇರುವ ಕಾಂತಿಯಂ ಧರಿಸುತ್ತಲಿದ್ದಾನೆ'' ಎಂದು ಪೇಳಲು; ಸುಮಂತ್ರನು ಚಂದ್ರಕೇತುವಂ ಕುಱಿತು– ''ಎಲೈ ಕುಮಾರನೆ, ಈ ನಮ್ಮ ಸೇನಾಪತಿಗಳು ಮಹಾಶೂರನಾದ ಈ ಲವನಂ ನೋಡುವುದಕ್ಕೆ ಕೂಡ ಯೋಗ್ಯರಲ್ಲ. ನಾವಾದರೋ ಇವನ ಪರಾಕ್ರಮವಂ ನೋಡಿ ಪರವಶರಾಗುತ್ತಲಿದ್ದೇವೆ'' ಎಂದು ಪೇಳಿದನು. ಅದಂ ಕೇಳಿ ಚಂದ್ರಕೇತುವು ತಮ್ಮ ಸೇನಾಪತಿಗಳಂ ಕುಱಿತು–''ಎಲೈ ಅರಸುಗಳಿರಾ, ಎಲೈ ಅರಸುಗಳಿರಾ, ನೀವು ಸಂಖ್ಯೆಯಿಲ್ಲದೆ ಇರುವವರು, ಈ ಬಾಲಕನು ಒಬ್ಬನಾಗಿರುವವನು; ಮತ್ತು ನೀವು ಗಜಗಳಲ್ಲಿ ಅಶ್ವಗಳಲ್ಲಿ ರಥಗಳಲ್ಲಿಯೂ ಕುಳಿತಿರುವವರು, ಈ ಬಾಲಕನು ಪಾದಚಾರಿಯಾಗಿ ಇರುವವನು; ಇನ್ನೂ ನೀವು ಕವಚಗಳಂ ತೊಟ್ಟಿರುವವರು, ಇವನು ಕೃಷ್ಣಾಜಿನವಂ ಹೊದೆದಿರುವವನು; ಮತ್ತು ನೀವು ವಯಸ್ಸಿನಲ್ಲಿ ಜ್ಯೇಷ್ಠರಾದವರು, ಇವನು ಬಾಲನು: ಹೀಗಿರುವಲ್ಲಿ ನೀವು ಖ್ಯಾತಿಯಂ ಪಡೆಯಲಿಚ್ಛೆಯುಳ್ಳವರಾಗಿ ಈ ಕುಮಾರನೊಡನೆ ಯುದ್ಧದಲ್ಲಿ ಸಮಾನಭಾವವಂ ವಹಿಸಿದಿರಿ–ಎಂಬುದಱಿಂ ನೀವು ನಿಂದಿಸಲು ಯೋಗ್ಯರು; ನಾವು ಸಹ ನಿಂದಿಸಿಕೊಳ್ಳತಕ್ಕವರು'' ಎಂದು ಸೇನಾಪತಿಗಳಂ ಧಿಕ್ಕರಿಸಲು;

ಲವನು ಆಕ್ಷೇಪದೊಡಗೂಡಿದವನಾಗಿ–''ಆಃ! ಇದೇನು! ಈ ರಾಜಪುತ್ರನು ನನ್ನಲ್ಲಿ ದಯೆಮಾಡುವನೊ ಏನು?'' ಎನುತ ತ್ವರೆಯೊಡಗೂಡಿ ಚಿಂತಿಸಿ,–''ಆಗಲಿ! ಎಲೈ, ಈ ವೀರನಾದ ಚಂದ್ರಕೇತುವಿನೊಡನೆ ದ್ವಂದ್ವಯುದ್ಧವಂ ಮಾಡುವುದಕ್ಕೆ ಈ ಸೇನಾಪತಿಗಳಿಂ ಕಾಲಹರಣವಾಗದಂತೆ ಮಾಡಲೋಸುಗ ಜ್ರಂಭಕಾಸ್ತ್ರಪ್ರಯೋಗದಿಂ ಈ ಸೇನೆಗಳಂ ಸ್ತಂಭಿಸಿದವನಾಗುತ್ತೇನೆ'' ಎಂದು ಧ್ಯಾನವಂ ನಟಿಸುವನಾಗಲು;

ಸುಮಂತ್ರನು ನೋಡಿ–ಏನು ನಿಮಿತ್ತ ಮಹತ್ತುಗಳಾದ ನಮ್ಮ ಸೇನಾಘೋಷಗಳು ಅಡಗಿದಂಥವಾದುವು? ಅದೇನೋ ತಿಳಿಯದು? ಎಂದು ಚಿಂತಿಸಿದನು.

ಲವನು ಜ್ರಂಭಕಾಸ್ತ್ರಗಳಿಂ ಸೇನೆಗಳಂ ಸ್ತಂಭಿಸಿದವನಾಗಿ, ಆಬಳಿಕ–ಅಥವಾ ಯುದ್ಧದಲ್ಲಿ ಪ್ರೌಢನಾದ ಚಂದ್ರಕೇತುವಂ ನೋಡುತ್ತೇನೆ, ಎಂದು ಸನ್ನದ್ಧನಾದನು.

ಸುಮಂತ್ರನು ನೋಡಿ ತ್ವರೆಯೊಡಗೂಡಿ ಚಂದ್ರಕೇತುವಂ ಕುಱಿತು–''ಎಲೈ ಕುಮಾರನೆ, ಈ ಬಾಲಕನು ಜ್ರಂಭಕಾಸ್ತ್ರವಂ ಪ್ರಯೋಗಿಸಿದನೆಂದು ನಾನು ತಿಳಿ

ಯುತ್ತೇನೆ '' ಎಂದು ಪೇಳಲು ; ಅದಂ ಕೇಳಿ ಚಂದ್ರಕೇತುವು ಸುಮಂತ್ರನಂ ಕುಱಿತು—'' ಎಲೈ ಪೂಜ್ಯನೆ, ಈ ಅರ್ಥದಲ್ಲಿ ಸಂದೇಹವಿಲ್ಲ. ಅದೆಂತೆನೆ :—ಮಿಂಚುಗಳು ಅಂಧಕಾರವು ಈ ಉಭಯವು ಕೂಡಿದಂತೆ, ಚೆನ್ನಾಗಿ ನೋಡಬೇಕೆಂದು ನೇತ್ರವಂ ತೆಱೆದು ನೋಡಿದರೂ ಆ ನೇತ್ರವಂ ಕಬಳಿಸಿ ಪುನಃ ಬಿಡಲ್ಪಟ್ಟಂತೆ, ಪೀಡಿಸುತ್ತಲಿದೆ. ಇದಲ್ಲದೆ ಈ ನಮ್ಮ ಸಮಸ್ತಸೇನೆಯು ಚಿತ್ರದಲ್ಲಿ ಬರೆದಿರುವಂತೆ ವ್ಯಾಪಾರರಹಿತವಾಗಿದೆ ಯಾದಕಾರಣ ಒಂದಱಿಂದಲೂ ಈ ಜಯಿಸಲಶಕ್ಯವಾದ ಶಕ್ತಿಯುಳ್ಳ ಜೃಂಭಕಾಸ್ತ್ರವು ಈ ಕ್ರೂರನಿಂದ ಪ್ರಯೋಗಿಸಲ್ಪಟ್ಟುದಾಗಿ ವೃದ್ಧಿಯನ್ನೈದುತ್ತಲಿದೆ. ಇದು ನಿಶ್ಚಯವು, ನೋಡು. ಇದು ಆಶ್ಚರ್ಯವು ! ಇದು ಆಶ್ಚರ್ಯವು ! ಪಾತಾಳಲೋಕದ ಮಧ್ಯದಲ್ಲಿರುವ ನಿಬಿಡಂಗಳಾದ ಪೊದೆಗಳಲ್ಲಿ ಗುಂಪುಕೂಡಿಕೊಂಡಿರುವ ಅಂಧಕಾರದಂತೆ ಅತಿನೀಲವರ್ಣಗಳಾಗಿ, ಪುಟಪಾಕಗಳಿಂ ಅತಿತಪ್ತವಾದ ಸುವರ್ಣದ ಹೊಂಬಣ್ಣವಾಗಿರುವ ತೇಜಸ್ಸುಗಳಂತೆ ಜ್ವಲಿಸುತ್ತಲಿರುವ ಕಾಂತಿಗಳುಳ್ಳವಾಗಿಯೂ ಇರುವ ಈ ಜೃಂಭಕಾಸ್ತ್ರಗಳು ಪ್ರಳಯಕಾಲದಲ್ಲಿ ಮಹಾವೇಗದಿಂ ಸಮಸ್ತವಂ ಕಿತ್ತುಬಿಸುಡೋಣದಱಿಂ ಮಹಾಕಠೋರವಾದ ಭಯಂಕರವಾದ ವಾಯುವಿನಿಂದ ಕಿತ್ತು ಎಱಚಲ್ಪಟ್ಟುವಾಗಿ ಗುಹೆಗಳಲ್ಲಿ ಸೇರಿಕೊಂಡಿರುವ ಮೇಘಗಳಿಂ ನೀಲವರ್ಣಗಳಾಗಿ ಮಿಂಚುಗಳಿಂ ಹೊಂಬಣ್ಣವಾಗಿಯೂ ಇರುವ ವಿಂಧ್ಯಪರ್ವತದ ಶಿಖರಗಳಂತೆ ಆಕಾಶವಂ ನಾಲ್ಕುಕಡೆಗಳಲ್ಲಿಯೂ ವ್ಯಾಪಿಸುತ್ತಲಿವೆ ! '' ಎಂಬ ಚಂದ್ರಕೇತುವಿನ ವಚನವಂ ಕೇಳಿ, ಸುಮಂತ್ರನು—'' ಎಲೈ ಆಯುಷ್ಮಂತನೇ, ಈ ಲವನಿಗೆ ಈ ಜೃಂಭಕಾಸ್ತ್ರಗಳು ಎಲ್ಲಿಂದ ಬಂದಿರುವುವೊ ? '' ಎನಲು ; ಚಂದ್ರಕೇತುವು—'' ಪೂಜ್ಯನಾದ ವಾಲ್ಮೀಕಿಮುನಿಯಿಂದ ಇವನಿಗೆ ಈ ಅಸ್ತ್ರಗಳು ಉಪದೇಶವಾಗಿರುವುವೆಂದು ನಾನು ತಿಳಿಯುತ್ತೇನೆ '' ಎಂದನು. ಸುಮಂತ್ರನು ಚಂದ್ರಕೇತುವಂ ಕುಱಿತು—'' ಎಲೈ ಕುಮಾರನೇ, ವಿಶೇಷದಿಂ ಈ ಜೃಂಭಕಾಸ್ತ್ರಗಳ ವಿಷಯದಲ್ಲಿ ವಾಲ್ಮೀಕಿಮುನಿಯಿಂ ಉಪದೇಶವಾಗಿ ಇದ್ದೀತೆಂದು ಊಹಿಸಲು ಶಕ್ಯವಲ್ಲ. ಅದೇನೆಂದರ :—ಈ ಜೃಂಭಕಾಸ್ತ್ರಗಳು ಭೃಶಾಶ್ವನೆಂಬ ಮಹಾಮುನಿಗೆ ಪುತ್ರರಾಗಿದ್ದಂಥವು. ಆಬಳಿಕ ಭೃಶಾಶ್ವಮುನಿಯಿಂದ ಉಪದೇಶಂಗೈಯಲ್ಪಟ್ಟುವಾಗಿ ವಿಶ್ವಾಮಿತ್ರಮುನಿಯನ್ನಾಶ್ರಯಿಸಿದುವು. ಅನಂತರ ಆ ಸಂಪ್ರದಾಯದಿಂ ವಿಶ್ವಾಮಿತ್ರಮುನಿಯಿಂದ ಉಪದೇಶಂಗೈಯಲ್ಪಟ್ಟುವಾಗಿ ರಾಮಭದ್ರನಲ್ಲಿ ನಿಂತವಾದಕಾರಣ, ಇವರು ಮೂಱುಮಂದಿಯನ್ನು ಹೊಱತು ಮತ್ತೊಬ್ಬನೂ ಈ ಅಸ್ತ್ರಸಂಪ್ರದಾಯವನ್ನಱಿಯನು '' ಎಂಬ ಸುಮಂತ್ರನ ವಚನವಂ ಕೇಳಿ ಚಂದ್ರಕೇತುವು—'' ಎಲೈ ಪೂಜ್ಯನೇ, ಮಿಗಿಲಾದ ಋಷಿಗಳು ಕೂಡ ಸತ್ವಗುಣಪ್ರಕಾಶವು ಅಧಿಕವಾಗುವುದಱಿಂ ಅಂತರ್ದೃಷ್ಟಿಯುಳ್ಳವರಾಗಿ ಸಮಸ್ತ ರಹಸ್ಯವಂ ಸ್ವಯಮೇವ ಪ್ರಕಾಶಿಸುವುದನ್ನಾಗಿ ನೋಡುತ್ತಲಿದ್ದಾರೆ '' ಎನಲು ; ಅದಂ ಕೇಳಿ ಸುಮಂತ್ರನು—'' ಎಲೈ ಕುಮಾರನೇ, ನಿನಗೆ ಪ್ರತಿವೀರನಾದ ಲವನು ಎದುರಿಗೆ ಬಂದನು, ಸಾವಧಾನನಾಗು '' ಎಂದು ಪೇಳಿದನು.

ಲವನು ಚಂದ್ರಕೇತುವು ಇವರಿರ್ವರು ಪರಸ್ಪರವಾಗಿ ಒಬ್ಬನಂ ನೋಡಿ ಒಬ್ಬನು ಇಂತೆಂದು ಚಿಂತಿಸಿದರು :—ಅಹೋ ! ಈ ಕುಮಾರನು ರೂಪಸಂಪತ್ತಿನಿಂದ ನೇತ್ರಾ

ನಂದಕರನಾಗಿದ್ದಾನೆ–ಎಂದು ಆಶ್ಚರ್ಯಪಟ್ಟು, ಸ್ನೇಹದಿಂ ಅನುರಾಗದಿಂದಲು ಕೂಡಿ ಚೆನ್ನಾಗಿ ಭಾವಿಸಿ ನೋಡಿ, ಪರಸ್ಪರವಾಗಿ ಇಂತೆಂದರು :–" ಸದ್ಗುಣಸಮೂಹಗಳ ಅತಿಶಯವು ಈರೀತಿ ಕುಮಾರರೂಪವಂ ತಾಳಿ ಸ್ವೇಚ್ಛೆಯಿಂದ ಈ ಪ್ರಕಾರದಿಂ ಸಂವಾದವಂ ಮಾಡುವುದೊ ಏನು ? ಹಾಗಲ್ಲದೆ ಜನ್ಮಾಂತರಗಳಿಂ ಎಡವಿಲ್ಲದಂತೆ ಅನುಸರಿಸಿ ಬಂದಿರುವ ಪೂರ್ವಪರಿಚಯವೇ ಈ ಕುಮಾರರೂಪದಿಂ ಇರುತ್ತಿರುವುದೊ ? ಅಥವಾ ದೈವಗತಿಯಿಂ ತಿಳಿಯದೆ ಇರುವ ತಮ್ಮ ಒಂದಾನೊಂದು ದೇಹಸಂಬಂಧವೊ ? ಇದೇನು ಈ ಕುಮಾರನು ದೃಷ್ಟಿವಿಷಯನಾಗಲು ನನ್ನ ಹೃದಯವು ಧ್ಯಾನವಂ ಮಾಡುತ್ತಲಿದೆ ! " ಎಂಬ ವಚನವಂ ಕೇಳಿ, ಸುಮಂತ್ರನು–" ಎಲೈ ಆಯುಷ್ಮಂತನೇ, ಒಬ್ಬನಲ್ಲಿ ಒಬ್ಬನಿಗೆ ಸ್ವರಸಮಯವಾಗಿ ಸ್ವತಏವ ಪ್ರೀತಿಯುಂಟಾಗುವುದು ಯಾವುದುಂಟೊ ಅದು ಬಹುತರವಾಗಿ ಪ್ರಾಣಿಗಳ ಧರ್ಮವೇ ಸರಿ. ಈ ಅರ್ಥದಲ್ಲಿ ನೇತ್ರಪ್ರೀತಿಯೆಂಬುವುದೇ ಗ್ರಹಮೈತ್ರವಾಗುವುದೆಂದು ಲೋಕದಲ್ಲಿರುವ ಜನರ ಉಪಚಾರವಚನವುಂಟು. ಆ ವಚನವಂ ಉಪೇಕ್ಷಿಸಲಶಕ್ಯವಲ್ಲದ ಪ್ರಮಾಣವೆಂದು ಜನರು ಹೇಳುತ್ತಾರೆ. ಮತ್ತು ಒಬ್ಬನಿಗೆ ಮತ್ತೊಬ್ಬನಲ್ಲಿ ಕಾರಣವಿಲ್ಲದೆ ಉಂಟಾಗುವ ಯಾವ ಪಕ್ಷಪಾತವುಂಟೊ ಆ ಪಕ್ಷಪಾತಕ್ಕೆ ಪ್ರತಿಕ್ರಿಯೆಯಿಲ್ಲ. ಆ ಪಕ್ಷಪಾತವು ಸ್ನೇಹರೂಪದಿಂ ಸೂತ್ರವಾಗಿ ಪ್ರಾಣಿಗಳ ಅಂತಃಕರಣವಂ ಕೂಡಿಸಿ ಬಂಧನಂಗೈಯುತಲಿದೆ " ಎಂದು ಪೇಳಿದನು. ಪುನಃ ಲವನು ಚಂದ್ರಕೇತುವು ಇವರಿರ್ವರು ಪರಸ್ಪರವಾಗಿ ಒಬ್ಬನಂ ಕುಱಿತು ಒಬ್ಬನು ಇಂತೆಂದು ಚಿಂತಿಸಿದರು :–ಈ ಕುಮಾರನ ಯಾವ ದೇಹವು ದೃಷ್ಟಿಗೆ ವಿಷಯವಾಗಲು ಆಲಿಂಗನವಂ ಮಾಡಲಿಚ್ಛೆಯಿಂ ನನ್ನ ದೇಹವು ಉದಯಿಸುತ್ತಲಿರುವ ರೋಮಾಂಚಸಮೂಹವುಳ್ಳುದಾಗುತ್ತಲಿದೆಯೊ, ನುಣುಪಾಗಿ ಸೂರ್ಯಪುಟದಂತೆ ಮಿಂಚುತ್ತಲಿರುವ ಅಂಥ ಈ ಕುಮಾರನ ದೇಹದಲ್ಲಿ ನಾನು ಎಂತು ಬಾಣಗಳಂ ಪ್ರಯೋಗಿಸುವನಾಗಲಿ ! ಮತ್ತು ದುಸ್ಸಹವಾದ ಪರಾಕ್ರಮದಿಂ ಪರಿಪೂರ್ಣನಾಗಿರುವ ಈ ಕುಮಾರನು ಯುದ್ಧಸನ್ನದ್ಧನಾಗಿರುವಾಗ ಶಸ್ತ್ರಪ್ರಯೋಗವಂ ವಿನಾಯಿಸಿ ಮತ್ತೊಂದು ಮಾರ್ಗವೇನು ಇದೆ ? ಮತ್ತು ಯಾವ ಶಸ್ತ್ರಕ್ಕೆ ಇಂಥ ಶೂರನು ಲಕ್ಷ್ಯವಾಗಿ ನಿಲ್ಲುವುದಿಲ್ಲವೊ ಅಂಥ ಶಸ್ತ್ರದಿಂದಲಾದರೂ ಏನು ಪ್ರಯೋಜನವು ? ಮತ್ತು ಆಯುಧವಂ ಪಿಡಿದು ಯುದ್ಧಸನ್ನದ್ಧನಾಗಿ ನಿಂತು ಪುನಃ ಯುದ್ಧಪರಾಙ್ಮುಖನಾದರೆ ಆಗ ಈ ಶೂರನೇ ನನ್ನಂ ಏನೆಂದು ನಿಂದಿಸುವನೊ ತಿಳಿಯದಾದಕಾರಣ ವೀರರ ಸಮಯಬಂಧವು ಮಹಾತೀಕ್ಷ್ಣವು : ಆದುದಱಿಂ ಸ್ನೇಹಪ್ರಕಾರವಂ ಬಾಧಿಸುತ್ತಲಿದೆ ಎಂಬದಾಗಿ ಕುಮಾರರಿರ್ವರು ಚಿಂತಿಸುತ್ತಲಿರಲು ; ಸುಮಂತ್ರನು ಲವನಂ ಭಾವಿಸಿನೋಡಿ, ಕಣ್ಣೀರೊಡಗೂಡಿ ತನ್ನ ಮನಸ್ಸಿನಲ್ಲಿ–ಸೀತೆಯು ಪೂರ್ಣಗರ್ಭಿಣಿಯಾಗಿ ತ್ಯಾಗಂಗೈಯಲ್ಪಟ್ಟವಳಾದಕಾರಣ ಈ ಕುಮಾರನು ಆ ಸೀತೆಯ ಗರ್ಭದಲ್ಲಿ ಜನಿಸಿದನೊ ಏನು ? ಎಂಬ ಅಭಿಪ್ರಾಯವುಳ್ಳವನಾಗಿ ಇಂತೆಂದನು :–ಎಲೈ ಹೃದಯವೆ, ಏಕೆ ನೀನು ಪ್ರಕಾರಾಂತರದಿಂ ಚಪಲವಾಗಿ ಊಹಿಸುತ್ತೀಯೆ ? ಅಂಥ ಮನೋರಥಕ್ಕೆ ಮೂಲವಾದುದು ಯಾವುದೊ ಆ ಮೂಲವು ದೈವದಿಂ ಮೊದಲೇ ಅಪಹರಿಸಲ್ಪಟ್ಟಿತು. ಬಳ್ಳಿಯು ಸಮೂಲವಾಗಿ ಪೂರ್ವದಲ್ಲೇ

ಛೇದಿಸಲ್ಪಟ್ಟ ಮೇಲೆ ಎಂತು ಫಲವು ಪುಟ್ಟುವುದು? ಅದುಕಾರಣ ಆ ಆಶೆಯಂ ಬಿಡು, ಎಂದು ಮನಸ್ಸಿನಲ್ಲಿಯೇ ಚಿಂತಿಸಿದನು. ಆಗ ಚಂದ್ರಕೇತುವು ಸುಮಂತ್ರನಂ ಕುಱಿತು–" ಎಲೈ ಪೂಜ್ಯನೆ, ನಾನು ರಥದಿಂ ಇಳಿಯುತ್ತೇನೆ " ಎನಲು; ಸುಮಂತ್ರನು–ಏನು ನಿಮಿತ್ತವೆಂದನು. ಚಂದ್ರಕೇತುವು–" ಎಲೈ ಪೂಜ್ಯನೆ, ಈ ರಥದಿಂ ಇಳಿಯುವುದಱಿಂದ ಈ ವೀರಪುರುಷನು ಪೂಜಿತನಾಗುತ್ತಾನೆ. ಇದಲ್ಲದೆ ನಮ್ಮ ಕ್ಷತ್ರಿಯಧರ್ಮವು ಕೂಡ ರಕ್ಷಿಸಲ್ಪಡುತ್ತಲಿದೆ. ಮತ್ತು ರಥಸ್ಥರಾದವರು ಪಾದಚಾರಿಯಂ ಕುಱಿತು ಯುದ್ಧಾರ್ಥವಾಗಿ ಉದ್ಯುಕ್ತರಾಗಬಾರದೆಂದು ಶಾಸ್ತ್ರಜ್ಞರು ಪೇಳುತ್ತಲಿದ್ದಾರೆ. ಆದುದಱಿಂದ ರಥದಿಂದ ಇಳಿಯುವನಾಗುತ್ತೇನೆ " ಎಂಬ ರಾಜಪುತ್ರವಚನವಂ ಕೇಳಿ, ಸುಮಂತ್ರನು ತನ್ನಲ್ಲಿ ತಾನೇ ಇಂತೆಂದು ಚಿಂತಿಸಿದನು. ಅದೆಂತೆನೆ :–ಈಗ ನನಗೆ ಕಷ್ಟದಶೆಯು ಪ್ರಾಪ್ತವಾಯಿತು. ಕ್ಷತ್ರಿಯಧರ್ಮವಂ ತಿಳಿದಿರುವ ನನ್ನಂಥ ಪುರುಷನು ಈಗ ಈ ಕುಮಾರನು ರಥದಿಂ ಇಳಿಯುವುದಂ ಎಂತು ನಿಷೇಧಂಗೈದಾನು? ಮತ್ತು ಸಾಹಸವೇ ಮುಖ್ಯರಸವಾಗುಳ್ಳ ಈ ವ್ಯಾಪಾರವಂ ಮಾಡುವುದನ್ನಾದರೂ ಎಂತು ಸಮ್ಮತಿಸಾನು? ಎಂದು ಚಿಂತಿಸಲು; ಚಂದ್ರಕೇತುವು ಸುಮಂತ್ರನಂ ಕುಱಿತು–" ಎಲೈ ಪೂಜ್ಯನೆ, ಪೂಜ್ಯರಾದ ನಮ್ಮ ತಂದೆಗಳು ಕೂಡ ತಮ್ಮ ತಂದೆಯಾದ ದಶರಥಮಹಾರಾಯನಿಗೆ ಪ್ರಿಯಮಿತ್ರನಾದ ನಿನ್ನಂ ಕಾರ್ಯಕಾಲದಲ್ಲಿ ಸಂಶಯವಿಷಯವಾದ ಅರ್ಥವಂ ಕೇಳುತ್ತಾರೆ. ಹೀಗಿರುವಲ್ಲಿ ಪೂಜ್ಯನಾದ ನೀನು ಏತಕ್ಕೆ ಯೋಚನೆಯಂ ಮಾಡುತ್ತಲಿದ್ದೀಯೆ? " ಎನಲು; ಸುಮಂತ್ರನು ರಾಜಪುತ್ರನಂ ಕುಱಿತು–" ಎಲೈ ಆಯುಷ್ಮಂತನೆ, ಕ್ಷತ್ರಿಯಧರ್ಮವನ್ನನುಸರಿಸಿ ನಡೆಯತಕ್ಕುದೆ ಹೊಱತು ಮತ್ತೊಂದಿಲ್ಲ. ನೀನು ರಥದಿಂದಿಳಿದು ಪಾದಚಾರಿಯಾದ ಈ ಕುಮಾರನೊಡನೆ ಯುದ್ಧಗೈವೆನೆಂಬುದು ಯಾವುದುಂಟೊ ಇದೇ ಯುದ್ಧಕ್ಕೆ ಉಚಿತವಾದ ನ್ಯಾಯವು; ಇದೇ ಅನಾದಿಯಾಗಿ ಬಂದಿರುವ ಕ್ಷತ್ರಿಯಧರ್ಮವು. ಮತ್ತು ಇದೇ ರಘುಕುಲಕ್ಕೆ ಶ್ರೇಷ್ಠರಾದ ಅರಸುಗಳ ವೀರಚರಿತ್ರದ ಕ್ರಮವು " ಎಂಬ ತನ್ನ ವಚನವನ್ನಂಗೀಕರಿಸಿ ಚಂದ್ರಕೇತುವು ಸುಮಂತ್ರನಂ ಕುಱಿತು–"ಪೂಜ್ಯರಾದ ನಿಮ್ಮ ವಚನಕ್ಕೆ ಸಮಾನವಾದುದಿಲ್ಲ. ಸಮಸ್ತವಾದ ಇತಿಹಾಸವಂ ಪುರಾಣವಂ ಧರ್ಮಶಾಸ್ತ್ರಗಳಂ ರಘುವಂಶಸ್ಥರಾದ ಅರಸುಗಳ ಕುಲಸ್ಥಿತಿಯಂ ಸಹ ನೀವೇ ಬಲ್ಲಿರಿ." ಎಂದು ಶ್ಲಾಘಿಸಲು; ಸುಮಂತ್ರನು ಸ್ನೇಹದೊಡನೆ ಆನಂದಬಾಷ್ಪದೊಡನೆಯೂ ಕೂಡಿದವನಾಗಿ ಚಂದ್ರಕೇತುವನ್ನಾಲಿಂಗನಂಗೈದು ಇಂತೆಂದನು :–" ನಮ್ಮ ವಾತ್ಸಲ್ಯಕ್ಕೆ ಪಾತ್ರನಾದ ಲಕ್ಷ್ಮಣನಿಗೆ ಕುಮಾರನಾದ ಎಲೈ ಆಯುಷ್ಮಂತನೇ, ಇಂದ್ರಜಿತ್ತುವಂ ಜಯಿಸಿದ ನಿನ್ನ ತಂದೆಯಾದ ಲಕ್ಷ್ಮಣನು ಸಹ ಬಾಲಕನೇ ಹೊಱತು ಅವನು ಜನಿಸಿ ಬಹುದಿನಂಗಳು ಆಗಲಿಲ್ಲ. ಹೀಗಿರುವಲ್ಲಿ ಅಂಥ ಕುಮಾರನಾದ ಲಕ್ಷ್ಮಣನಿಗೂ ಕುಮಾರನಾದ ನೀನು ಕೂಡ ಮಹಾವೀರಧರ್ಮವಂ ಅನುಸರಿಸುವೆಯಾದ ಕಾರಣ ಬಲು ಚೆನ್ನಾಯಿತು. ಈಗ ದಶರಥಮಹಾರಾಯನ ಕುಲವು ಪ್ರಖ್ಯಾತಿಯಂ ಪಡೆಯಿತು " ಎಂಬದಾಗಿ ಸುಮಂತ್ರನು ಶ್ಲಾಘಿಸಲು; ಅದಂ ಕೇಳಿ ಚಂದ್ರಕೇತುವು ಇಂತೆಂದನು :–" ಎಲೈ ಪೂಜ್ಯನೆ, ಕೇಳು. ನಮ್ಮ ಮಿಗಿಲಾದ ಮೂಱು ಮಂದಿ ತಂದೆ

ಗಳು, ಸರ್ವ ಜ್ಯೇಷ್ಠನಾಗಿ ರಘುವಂಶದಲ್ಲಿ ಶ್ರೇಷ್ಠನಾಗಿಯೂ ಇರುವ ನಮ್ಮ ಅಣ್ಣನು ಲೋಕದಲ್ಲಿ ದೇವಿಯ ನಿಮಿತ್ತವಾಗಿ ಅಪವಾದಯುಕ್ತನಾಗುತ್ತಿರಲು ಇನ್ನು ನಮ್ಮ ಕುಲಕ್ಕೆ ಕೀರ್ತಿಯೆಂಬುದು ಎಂತು ಸಂಭವಿಸೀತು, ಎಂಬ ದುಃಖದಿಂದ ಸಂತಾಪಪಡುತ್ತಲಿದ್ದಾರೆ. ಹೀಗಿರುವಲ್ಲಿ ನನ್ನಿಂದ ಈ ಕುಲಕ್ಕೆ ಪ್ರತಿಷ್ಠೆಯೆಂಬುದು ಎಲ್ಲಿಂದ ಬರುವುದು ?'' ಎಂಬ ರಾಜಪುತ್ರವಚನವಂ ಕೇಳಿ ಸುಮಂತ್ರನು-'' ಈ ಚಂದ್ರಕೇತುವಚನಂಗಳು ಮನಸ್ಸಿಗೆ ದುಸ್ಸಹಂಗಳಾಗಿ ಇವೆ'' ಎಂದನು. ಅತ್ತಲು ಲವನು ಇಂತೆಂದನು :-ಎಲೈ ಈ ಅರಸುಗಳ ಕ್ರಮುಗಳು ಪರಸ್ಪರ ಮಿಶ್ರವಾಗಿವೆ. ಅದೆಂತೆನೆ :-ಚಂದ್ರನು ಉದಯಿಸಲು ಯಾವ ರೀತಿ ನೈದಿಲೆಯ ಬಳ್ಳಿಯು ಆನಂದವನ್ನೈದುವುದೊ ಅದೇ ರೀತಿ ಈ ಚಂದ್ರಕೇತುವು ಅಭಿಮುಖನಾಗಲು ನನ್ನ ಹೃದಯದೃಷ್ಟಿಯು ಆನಂದವನ್ನೆಯ್ದುತ್ತಲಿದೆ. ನನ್ನ ಈ ಭುಜವಾದರೋ ಝಣತ್ಕಾರದಿಂ ಕ್ರೂರವಾದ ಧ್ವನಿಯುಳ್ಳ ಹೆದೆಯಿಂ ಮೊಱೆಯುವ ಮಹತ್ತಾದ ಧನುಸ್ಸಿನಲ್ಲಿ ಪ್ರೀತಿಯಂ ಧರಿಸಿದುದಾಗಿ ಭಯಂಕರವಾದ ವಿಸ್ತೃತವಾದ ಯುದ್ಧಕ್ಕೆ ಅಭಿಮುಖವಾಗಿ ಇದೆ, ಎಂದು ತನ್ನಲ್ಲಿ ತಾನೇ ಚಿಂತಿಸಿದನು.

ಚಂದ್ರಕೇತುವು ರಥದಿಂ ಇಳಿಯುವನಾಗಿ ಸುಮಂತ್ರನಂ ಕುಱಿತು-'' ಎಲೈ ಪೂಜ್ಯನೇ, ಇಕ್ಷ್ವಾಕುಕುಲೋತ್ಪನ್ನನಾದ ಚಂದ್ರಕೇತುನಾಮಕನಾದ ಈ ನಾನು ನಿನಗೆ ಅಭಿವಾದನವಂ ಮಾಡುತ್ತೇನೆ'' ಎಂದು ಅಭಿವಾದನಂಗೈಯಲು ; ಸುಮಂತ್ರನು ರಾಜಪುತ್ರನಂ ಕುಱಿತು-'' ಎಲೈ ಆಯುಷ್ಮಂತನೆ, ಮಹಾತ್ಮನಾದ ಆದಿವರಾಹಮೂರ್ತಿಯು ಶತ್ರುವಿಗೆ ಪರಾಜಯವಂ ಕಲ್ಪಿಸಲಿ! ಮತ್ತು ನಿನ್ನ ಕುಲಕ್ಕೆ ಅಧಿಪತಿಯಾದ ದೇವೋತ್ತಮನಾದ ಸೂರ್ಯನು ಯುದ್ಧದಲ್ಲಿ ನಿನ್ನಂ ಸಲಹುವನಾಗಲಿ! ನಿನ್ನ ಗುರುಗಳಿಗೂ ಗುರುವಾದ ವಸಿಷ್ಠಮುನಿಯು ನಿನ್ನಂ ಕುಱಿತು ಅಂತಸ್ಸಂತೋಷದಿಂ ಶ್ರೇಯಸ್ಸನ್ನಪೇಕ್ಷಿಸಲಿ! ಮತ್ತು ಇಂದ್ರನು ವಿಷ್ಣುವು ಸಹ ಇವರ ತೇಜಸ್ಸು, ಅಗ್ನಿವಾಯುಗಳ ತೇಜಸ್ಸು, ಗರುಡನ ತೇಜಸ್ಸು ಸಹ ನಿನಗೆ ಉಂಟಾಗಲಿ! ಮತ್ತು ರಾಮಲಕ್ಷ್ಮಣರ ಧನುಷ್ಟಂಕಾರವೆಂಬ ಮಂತ್ರವು ಯುದ್ಧದಲ್ಲಿ ನಿನಗೆ ಜಯುವನ್ನೇ ಕೊಡಲಿ!'' ಎಂಬದಾಗಿ ಆಶೀರ್ವಾದವಂ ಮಾಡಲು ;

ಲವನು ಚಂದ್ರಕೇತುವಂ ಕುಱಿತು-'' ಎಲೈ ವೀರನೆ, ಈಗ ನೀನು ರಥದಲ್ಲಿ ಕುಳಿತಿರುವನಾಗಿಯೆ ಅತ್ಯಂತವಾಗಿ ಶೋಭಿಸುವೆ : ಅದುಕಾರಣ ಅತಿಶಯದಿಂ ನನ್ನಂ ಕುಱಿತು ಈ ಆದರಣೆಯು ಸಾಕು, ಪುನಃ ರಥವನ್ನೇಱುವನಾಗು'' ಎಂದು ಪೇಳಲು ; ಚಂದ್ರಕೇತುವು ಲವನಂ ಕುಱಿತು-'' ಎಲೈ ವೀರನೆ, ನಾನು ಪುನಃ ರಥವನ್ನಾರೋಹಣಮಾಡುವ ಪಕ್ಷದಲ್ಲಿ ಮಹಾಪರಾಕ್ರಮಿಯಾದ ನೀನು ಕೂಡ ಮತ್ತೊಂದು ರಥವನ್ನಲಂಕರಿಸುವನಾಗು'' ಎಂದನು. ಲವನು ಸುಮಂತ್ರನಂ ಕುಱಿತು-'' ಎಲೈ ಪೂಜ್ಯನೆ, ನೀನು ಪುನಃ ರಾಜಪುತ್ರನಂ ರಥದಲ್ಲಿ ಕೂಡಿಸುವನಾಗು'' ಎನಲು ; ಸುಮಂತ್ರನು-'' ಎಲೈ ವೀರನೆ, ನೀನು ಕೂಡ ಕುಮಾರನಾದ ಚಂದ್ರಕೇತುವಿನ ವಚನವಂ ಅನುಸರಿಸುವನಾಗು'' ಎಂದನು. ಅದಂ ಕೇಳಿ ಲವನು ಸುಮಂತ್ರನಂ ಕುಱಿತು-'' ಎಲೈ ಪೂಜ್ಯನೆ, ರಥ ಮೊದಲಾದ ಈ ಸಾಮಗ್ರಿಗಳೆಲ್ಲವು ನಮ್ಮವೆ ಹೊಱತು ಮತ್ತೊಂದಲ್ಲ.

ಈ ವಿಷಯವಾಗಿ ನನಗೆ ಉಪಚರಿಸತಕ್ಕುದು ಏನು ಇದೆ ? ಮತ್ತೇನೆಂದರೆ :—ನಾವು ಅರಣ್ಯವಾಸಿಗಳಾದಕಾರಣ ರಥಚರ್ಯಾವ್ಯಾಪಾರದಲ್ಲಿ ಅಭ್ಯಾಸವಿಲ್ಲ '' ಎಂದು ಪೇಳಲು ; ಸುಮಂತ್ರನು—'' ಎಲೈ ಕುಮಾರನೆ, ನೀನು ಗರ್ವದಲ್ಲಿ ಸುಜನತ್ವದಲ್ಲಿಯೂ ಉಚಿತವನ್ನ ಱಿತು ಆಚರಿಸುವುದಱಲ್ಲಿ ಚತುರನಾಗುತಲಿದ್ದೀಯೆ. ಇಂಥ ಶೂರನಾಗಿ ಪ್ರೌಢನಾಗಿಯೂ ಇರುವ ನಿನ್ನಂ ಇಕ್ಷ್ವಾಕುವಂಶಸ್ಥನಾದ ಮಹಾರಾಜನಾದ ರಾಮಭದ್ರನು ನೋಡುವವನಾದರೆ ಆಗ ನಿನ್ನಂ ನೋಡುವುದಱಿಂ ಸ್ನೇಹವು ಆ ರಾಮಭದ್ರನ ಹೃದಯವಂ ದ್ರವಿಸುವಂತೆ ಮಾಡುವುದು '' ಎಂದನು. ಅದಂ ಕೇಳಿ ಲವನು—'' ಎಲೈ ಪೂಜ್ಯನೇ, ನಾನು ತಿಳಿಯುವೆನು. ಆ ರಾಜರ್ಷಿಯು ಮಹಾಸುಜನನೆಂದು ಪ್ರಾಜ್ಞರ ಮುಖದಿಂ ಕೇಳುತ್ತಲಿದ್ದೇವೆ '' ಎಂದು ಪೇಳುತ್ತಲೆ, ಪುನಃ ಲಜ್ಜಾಯುಕ್ತನಾಗಿ ಸುಮಂತ್ರನಂ ಕುಱಿತು—'' ಎಲೈ ಪೂಜ್ಯನೆ, ಯಜ್ಞವಿಘ್ನಕಾರಿಗಳಾದ ರಾಕ್ಷಸರಿಗೆ ವೈರಿಯಾದ ಆ ರಾಜಶ್ರೇಷ್ಠನ ವಿಷಯದಲ್ಲಿ ನಾವು ಕೂಡ ಬಹುಮಾನದಿಂ ಸೌಜನ್ಯವನ್ನಾಚರಿಸತಕ್ಕವರೇ ಹೌದು. ಲೋಕದಲ್ಲಿ ಯಾವ ಜನವು ಗುಣಾತಿಶಯಂಗಳಿಂದ ಆ ರಾಜಶ್ರೇಷ್ಠನಂ ಬಹುಮಾನಂಗೈಯುವುದಿಲ್ಲ ? ಸಮಸ್ತ ಜನರು ಆ ಮಹಾಪುರುಷನಂ ಶ್ಲಾಘಿಸುತ್ತಲಿದ್ದಾರೆ. ಹಾಗಾದರೂ ಈ ಅಶ್ವರಕ್ಷಕರಾದ ಪುರುಷರು ಭೂಮಿಯಲ್ಲಿರುವ ಸಮಸ್ತ ಕ್ಷತ್ರಿಯರಂ ತಿರಸ್ಕರಿಸುವ ಸಪ್ತಲೋಕೈಕವೀರನ ವಿಜಯಧ್ವಜಪಟವೇ ಸರಿ ಈ ಅಶ್ವವು, ಎಂದು ಪೇಳಿದ ಆ ವಚನವು ಸಹಿಸಲಶಕ್ಯವಾದುದಱಿಂ ನನಗೆ ಮನೋವಿಕಾರವನ್ನುಂಟುಮಾಡಿತಲ್ಲ ! '' ಎಂದು ಪೇಳಲು ; ಚಂದ್ರಕೇತುವು ಲವನಂ ಕುಱಿತು—'' ಎಲೈ ವೀರನೇ, ನಮ್ಮ ತಂದೆಯ ಪ್ರತಾಪವಂ ಶ್ಲಾಘಿಸುವುದಱಲ್ಲಿ ಕೂಡ ನಿನಗೆ ಕೋಪವೊ ಏನು ? '' ಎಂದು ಪ್ರಶ್ನೆಗೈದನು. ಅದಂ ಕೇಳಿ ಲವನು ಇಂತೆಂದನು :—'' ಎಲೈ ರಾಜಪುತ್ರನೇ, ನನಗೆ ಕೋಪವು ಬರಲಿ, ಬಾರದೇ ಹೋಗಲಿ ; ಮತ್ತೊಂದು ಅರ್ಥವಂ ನಾನು ನಿನ್ನಂ ಕುಱಿತು ಕೇಳುತ್ತೇನೆ. ಅದೇನೆಂದರೆ :—ರಘುವಂಶೋತ್ಪನ್ನನಾದ ಆ ರಾಜಶ್ರೇಷ್ಠನು ಇಂದ್ರಿಯಂಗಳಂ ಜಯಿಸಿದವನೆಂಬದಾಗಿ ನಾವು ಕೇಳುತ್ತೇವೆ. ಅಂಥ ಅಭಿಜ್ಞನಾದ ಅರಸು ತನ್ನ ಶೌರ್ಯದಿಂ ತಾನು ಗರ್ವಯುಕ್ತನಾಗುವುದಿಲ್ಲವಲ್ಲ ; ಈ ಅರಸಿನ ಪ್ರಜೆಗಳಾದರೊ ಗರ್ವಯುಕ್ತರಾಗರಲ್ಲ. ಹೀಗೆ ಇರುವಲ್ಲಿ ಈಗ ನಿಮ್ಮ ಸೇನೆಯಲ್ಲಿರುವ ಪುರುಷರು ಏಕೆ ರಾಕ್ಷಸರಿಗೆ ಉಚಿತವಾದ ವಚನವಂ ಪೇಳುತ್ತಾರೆ ? ಅದೆಂತೆನೆ :—ಶಾಸ್ತ್ರಜ್ಞರಾದ ಋಷಿಗಳು ಉನ್ಮಾದಯುಕ್ತನಾದ ಪುರುಷನ ವಚನವಂ ಗರ್ವಯುಕ್ತನಾದ ಪುರುಷನ ವಚನವಂ ಸಹ ರಾಕ್ಷಸವಾಕ್ಯೆಂದು ಪೇಳುತ್ತಾರೆ. ಮತ್ತು ಆ ಗರ್ವಯುಕ್ತವಾದ ವಚನವು ಸಮಸ್ತ ವೈರಗಳಿಗೂ ಕಾರಣವಾದುದು, ಲೋಕಕ್ಕೆ ವಿರುದ್ಧವಾದುದು ಎಂದು ಸಹ ಆ ಗರ್ವಯುಕ್ತವಾದ ವಚನವಂ ನಿಂದಿಸುತ್ತಾರೆ. ವಿನಯಯುಕ್ತವಾಗಿರುವ ಪ್ರಿಯವಚನವನ್ನಾದರೊ ಬಹುತರವಾಗಿ ಶ್ಲಾಘಿಸುತ್ತಲಿದ್ದಾರೆ. ಅದೆಂತೆನೆ :—ಲೋಕದಲ್ಲಿ ಪ್ರಿಯವಚನವು ಇಷ್ಟವಾದ ಅರ್ಥವನ್ನು ಕೊಡುತ್ತಲಿದೆ ; ಅಶುಭವಂ ಅತ್ಯಂತವಾಗಿ ಪರಿಹರಿಸುತ್ತಲಿದೆ ; ಮತ್ತು ಕೀರ್ತಿಯನುಂಟುಮಾಡುತ್ತಲಿದೆ ; ಪಾಪವಂ ಪರಿಹರಿಸುತ್ತಲಿದೆಯಾದಕಾರಣ ಜ್ಞಾನಿಗಳು ಪರಿಶುದ್ಧವಾಗಿ ಶಾಂತಿಯುಕ್ತ

ವಾಗಿ ಹಿತಕರವಾದುದಱಿಂ ಮಾತ್ರವಾಗಿಯೂ ಇರುವ ಪ್ರಿಯವಚನವಂ ಸಮಸ್ತಶುಭಗ ಳನ್ನುಂಟುಮಾಡುವುದಱಲ್ಲಿ ಕಾಮಧೇನುವೆಂದು ಶ್ಲಾಘಿಸುತ್ತಾರೆ '' ಎಂಬ ಲವನ ವಚ ನವಂ ಕೇಳಿ ಚಂದ್ರಕೇತುವು–'' ಎಲೈ, ವಾಲ್ಮೀಕಿಮುನಿಶಿಷ್ಯನಾದ ಈ ಕುಮಾರನು ರಾಜಶ್ರೇಷ್ಠನಾದ ನಮ್ಮ ತಂದೆಯ ಶೌರ್ಯವಂ ಶ್ಲಾಘಿಸಿದ ಮಾತ್ರದಿಂದಲೇ ತಿರಸ್ಕರಿಸ ಲ್ಪಟ್ಟವನಾಗಿ ರೋಷಯುಕ್ತವಾದ ಸಂಸ್ಕಾರದಿಂ ಈ ರೀತಿ ಪೇಳುತ್ತಾನೆ '' ಎಂದು ನುಡಿಯಲು ; ಲವನು–'' ಎಲೈ ಚಂದ್ರಕೇತುವೆ, ನೀನು ನನ್ನಂ ಕುಱಿತು–ಎಲೈ, ನಮ್ಮ ತಂದೆಯ ಪ್ರತಾಪವಂ ಶ್ಲಾಘಿಸುವುದಱಲ್ಲಿ ಕೂಡ ನಿನಗೆ ದೋಷವೆ ಏನು ಎಂದು ಪೇಳುವೆ ಯಾದಕಾರಣ ನಿನ್ನಂ ಕುಱಿತು ನಾನು ಕೇಳುತ್ತೇನೆ. ಹಾಗಾದರೆ ಲೋಕದಲ್ಲಿ ಕ್ಷತ್ರಿಯ ಧರ್ಮವೆಂಬುದು ನಿಮ್ಮ ತಂದೆಯಲ್ಲಿಯೇ ಇರುವುದು ; ಮತ್ತೊಬ್ಬ ಕ್ಷತ್ರಿಯನೂ ಇಲ್ಲ, ಅವನಲ್ಲಿ ಆ ಕ್ಷತ್ರಿಯ ಧರ್ಮವೂ ಇಲ್ಲವೆಂದು ಒಂದು ನಿಬಂಧನವುಂಟೊ ಏನು ? '' ಎಂದು ಕೇಳಿದನು. ಅದಂ ಕೇಳಿ ಸುಮಂತ್ರನು ಲವನಂ ಕುಱಿತು–''ಎಲೈ ಕುಮಾರನೇ, ಇಕ್ಷ್ವಾಕು ಕುಲೋತ್ಪನ್ನನಾದ ಆ ರಾಜಶ್ರೇಷ್ಠನಂ ನೀನು ಅಱಿತವನೇ ಅಲ್ಲವಾದಕಾರಣ ಇನ್ನು ಅತಿಪ್ರಸಂಗವಂ ಬಿಡು. ನೀನು ಈ ಸೇನಾಜನರಂ ಜಯಿಸಿದುದಱಿಂ ನಿನ್ನ ಪ್ರತಾಪವಂ ಪ್ರಕಾಶವಂ ಮಾಡಿದೆ, ಸತ್ಯವೇ ಸರಿ. ಮತ್ತೇನೆಂದರೆ :–ಲೋಕದಲ್ಲಿ ಸಮಸ್ತ ಕ್ಷತ್ರಿ ಯರಂ ನಿಗ್ರಹವಂ ಮಾಡಿದ ಪರಶುರಾಮನಂ ವೀರ್ಯರಹಿತನನ್ನಾಗಿ ಮಾಡಿದ ರಾಮಭ ದ್ರನ ವಿಷಯದಲ್ಲಿ ಈ ರೀತಿ ವಿವಾದವಂ ಮಾಡುವುದು ನಿನಗೆ ಉಚಿತವಲ್ಲ '' ಎಂದು ಪೇಳಲು : ಅದಂ ಕೇಳಿ ಲವನು ಸುಮಂತ್ರನಂ ಕುಱಿತು–'' ಎಲೈ ಪೂಜ್ಯನೆ, ಜಮದಗ್ನಿ ಪುತ್ರನಾದ ಪರಶುರಾಮನಂ ಜಯಿಸಿದನೆಂದು ಈ ರೀತಿ ಗಟ್ಟಿಯಾಗಿ ಘೋಷಿಸುವು ದೇನು ? ಲೋಕದಲ್ಲಿ ಬ್ರಾಹ್ಮಣರಿಗೆ ವಾಕ್ಕಿನಲ್ಲಿ ವೀರ್ಯವು ಸಿದ್ಧವಾಗಿರುವುದು, ಕ್ಷತ್ರಿ ಯರಿಗಾದರೊ ಆ ವೀರ್ಯವು ಭುಜಗಳಲ್ಲಿ ಇರುವುದು. ಹೀಗಿರುವಲ್ಲಿ ಆ ಪರಶು ರಾಮನು ತಾನು ಬ್ರಾಹ್ಮಣನಾಗಿ ಶಸ್ತ್ರವಂ ಗ್ರಹಿಸಿದವನಾದುದಱಿಂ ಬ್ರಾಹ್ಮಣ್ಯವು ನಷ್ಟವಾಯಿತಾದಕಾರಣ ಅವನಿಗೆ ವಾಕ್ಕಿನಲ್ಲಿ ವೀರ್ಯವಿಲ್ಲ; ಸ್ವತಃ ಕ್ಷತ್ರಿಯಕುಲೋ ತ್ಪನ್ನನಲ್ಲವಾದುದಱಿಂ ಅವನಿಗೆ ಭುಜಗಳಲ್ಲಿಯೂ ವೀರ್ಯವಿಲ್ಲ. ಆದಕಾರಣ ಉಭಯ ಭ್ರಷ್ಟನಾಗಿರುವ ಆ ಪರಶುರಾಮನಂ ಜಯಿಸಿದುದಱಿಂ ಆ ರಾಜಶ್ರೇಷ್ಠನಿಗೆ ಸ್ತೋತ್ರವೇನುಂಟಾಗುವುದು ? '' ಎಂದು ಪೇಳಿದನು. ಚಂದ್ರಕೇತುವು ಆ ವಚನವಂ ಸಹಿಸಲಾಱದೆ ಕೊಬ್ಬಿನೊಡಗೂಡಿ ಸುಮಂತ್ರನಂ ಕುಱಿತು–'' ಎಲೈ ಪೂಜ್ಯನೇ, ಎಲೈ ಪೂಜ್ಯನೇ, ನೀನು ಪುನಃ ಈ ವೀರನಿಗೆ ಪ್ರತ್ಯುತ್ತರವಂ ಕೊಡಬೇಡ, ಕೊಡಬೇಡ. ಯಾವ ಈ ವೀರನಿಗೆ ಭಗವಂತನಾದ ಪರಶುರಾಮನು ಕೂಡ ವೀರನೆಂದು ತೋಱಲಿಲ್ಲವೊ, ಮತ್ತು ಯಾವ ಈ ವೀರನು ಭುವನಾದಿಸಪ್ತಲೋಕಗಳಿಗೂ ಅಭಯಪ್ರದಾನವಂ ಮಾಡುವು ದಱಲ್ಲಿ ಅತಿಸಮರ್ಥಂಗಳಾಗಿ ಪುಣ್ಯಕರಂಗಳಾಗಿಯೂ ಇರುವ ನಮ್ಮ ತಂದೆಯ ಚರಿತ್ರೆ ಗಳಂ ಸಹ ಅಱಿಯನೊ ಅಂಥ ಈ ವೀರನು ಈಗ ನೂತನವಾದ ಒಂದಾನೊಂದು ಪುರುಷಾವತಾರವಾಗಿ ಇದ್ದಾನೆ ! '' ಎಂದು ಪೇಳಲು ; ಲವನು ಚಂದ್ರಕೇತುವಂ ಕುಱಿತು–'' ಎಲೈ ರಾಜಪುತ್ರನೆ, ರಘುಕುಲಾಧ್ಯಕ್ಷನಾದ ಆ ರಾಜಶ್ರೇಷ್ಠನ ಚರಿತ್ರೆಯಂ

ಮಹಿಮೆಯಂ ಸಹ ಯಾರು ಅಱಿಯರು ? ಅದೇನಾದರೂ ಸ್ವಲ್ಪ ಪೇಳತಕ್ಕುದಾಗಿದೆಯೊ ಏನು ? ಅಥವಾ ದೋಷವಿಲ್ಲ, ಆ ನಿಮ್ಮ ತಂದೆಗಳು ವೃದ್ಧರಾದವರು, ಹೌದು. ಅವರ ಚರಿತ್ರೆಯು ಮಾತ್ರ ವಿಚಾರಿಸತಕ್ಕುದಲ್ಲ ! ಅಥವಾ ಇರಲಿ, ಇದೊಂದು ವಿಶೇಷವಿದೆ. ಅದೇನೆಂದರೆ–ಸುಂದನಿಗೆ ಪತ್ನಿಯಾದ ತಾಟಕಿಯೆಂಬ ಸ್ತ್ರೀಯಂ ಸಂಹರಿಸಿದಾಗ್ಯೂ ಆ ನಿಮ್ಮ ತಂದೆಗಳು ಪ್ರಬಲವಾದ ಕೀರ್ತಿಯುಳ್ಳವರಾದಕಾರಣ ಮಹಾತ್ಮರಲ್ಲವೆ ! ಮತ್ತು ಖರನ ಯುದ್ಧದಲ್ಲಿ ಆ ಖರನು ರೋಷದಿಂ ಅಭಿಮುಖನಾಗಿ ಬರುವನಾಗಲು ಆಗ ಯಾವ ಮೂಱಡಿಗಳು ಯಾವ ಮುಖಗಳಾಗಿ ಪ್ರಸರಿದುವೊ ಅಂಥ ಪಾದವಿನ್ಯಾಸಗಳಲ್ಲಿ, ಇನ್ನು ಇಂದ್ರಪುತ್ರನಾದ ವಾಲಿಯ ಸಂಹಾರದಲ್ಲಿ ಅದೃಶ್ಯರಾಗಿ ಮಾಡಿದ ಯಾವ ಚಾತುರ್ಯವುಂಟೊ ಅಂಥ ಚಾತುರ್ಯದಲ್ಲಿ ಸಹ ಆ ನಿಮ್ಮ ತಂದೆಗಳು ಮಹಾಪ್ರಾಜ್ಞರಾದವರು ! '' ಎಂದು ಲವನು ಪೇಳಲು ; ಚಂದ್ರಕೇತುವು ಲವನಂ ಕುಱಿತು–'' ಆಃ ! ಎಲೈ ನಮ್ಮ ತಂದೆಗಳಲ್ಲಿಯೂ ಅಪವಾದವಂ ಕಲ್ಪಿಸುವುದಱಿಂ ಮರ್ಯಾದೆಯನ್ನುಲ್ಲಂಘಿಸಿದವನೆ, ನೀನು ಅತ್ಯಂತವಾಗಿ ಪ್ರೌಢನಾಗುತ್ತೀಯೆ ! '' ಎಂಬ ರಾಜಪುತ್ರನ ವಚನವಂ ಕೇಳಿ, ಲವನು–'' ಎಲೈ ಈ ಚಂದ್ರಕೇತುವು ನನ್ನಲ್ಲಿಯೇ ದೋಷದಿಂದ ಹುಬ್ಬುಗಳಿಂ ಕೂಡಿಕೊಂಡಿರುವ ಮುಖವುಳ್ಳವನಾದನು '' ಎಂದು ಪೇಳಲು : ಸುಮಂತ್ರನು ತನ್ನ ಮನಸ್ಸಿನಲ್ಲಿ ಇಂತೆಂದು ಚಿಂತಿಸಿದನು :–'' ಎಲೈ, ಈ ಕುಮಾರರಿಬ್ಬರಿಗೂ ಕೋಪವು ಸ್ಫುಟವಾಯಿತು. ಅದೆಂತೆನೆ :–ಇವರಿಬ್ಬರಿಗೂ ಕೋಪದಿಂ ಸರ್ವಾಂಗಗಳಲ್ಲಿಯೂ ಜನಿಸಿರುವ ಕಂಪವು ಆಟೋಪದಿಂ ಕೇಶಪಾಶವಂ ಕೊಡುಹುತ್ತಲಿದೆ. ಮತ್ತು ಕನ್ನೈದಿಲೆಯ ದಳಕ್ಕೆ ಸಮಾನಗಳಾದ ನೇತ್ರಗಳು ತಮಗೆ ತಾವೇ ಕೆಂಪಾಗುತ್ತಲಿವೆ. ಮತ್ತು ಕೋಪದಿಂ ಹುಬ್ಬುಗಳಂ ಕೂಡಿಸುವುದಱಿಂ ಕುಟಿಲವಾದ ಈ ಮುಖವು ಸ್ಫುಟವಾಗಿ ಪ್ರಕಾಶಿಸುತ್ತಲಿರುವ ಕಳಂಕವುಳ್ಳ ಚಂದ್ರನ ಕಾಂತಿಯಂತೆ ಇರುವ ಕಾಂತಿಯಂ ಉನ್ನತವಾಗಿ ತಿರಿಗುತ್ತಲಿರುವ ತುಂಬಿಯುಳ್ಳ ಕಮಲದ ಕಾಂತಿಯಂತೆ ಇರುವ ಕಾಂತಿಯಂ ಸಹ ಧರಿಸುತ್ತಲಿದೆ '' ಎಂದು ಸುಮಂತ್ರನು ಚಿಂತಿಸಲು ; ಲವನು–'' ಎಲೈ ಕುಮಾರನೇ, ಎಲೈ ಕುಮಾರನೇ, ಬಾರೈ, ಬಾರೈ. ಯುದ್ಧಕ್ಕೆ ಯೋಗ್ಯವಾದ ಭೂಮಿಯಂ ಪ್ರವೇಶಿಸೋಣ '' ಎಂದು ಪೇಳಿ, ಇಬ್ಬರು ಅಲ್ಲಿಂದ ತಿರುಗಿ ಯುದ್ಧಸನ್ನದ್ಧರಾದರು.

ಪಂಚಮಾಂಕತಾತ್ಪರ್ಯಂ ಸಮಾಪ್ತಂ.

## ॥ ಷಷ್ಠಾಂಕಂ ॥

ಈರೀತಿ ಸುಮಂತ್ರನೊಡಗೂಡಿರುವ ಚಂದ್ರಕೇತುವು ಲವನು ಸಹ ಪರಸ್ಪರವಾಗಿ ವೀರವಾದವಂ ಮಾಡಿದುದಱಿಂ ರೋಷಯುಕ್ತರಾಗಿ ಯುದ್ಧರಂಗಭೂಮಿಯಂ ಪ್ರವೇಶಿಸಿ, ಯುದ್ಧದಲ್ಲಿ ಸನ್ನದ್ಧರಾದರೆಂದು ಪೂರ್ವಾಂಕದಲ್ಲಿ ನಿರೂಪಿಸಿದುದಱಿಂ, ಪುನಃ ಆಱನೆಯ ದಿವಸದಲ್ಲಿ ಸಕಲಸಾಮಾಜಿಕರು ನಾಟಕಾಭಿನಯವಂ ನೋಡಲೋಸುಗ ಸಭಾಸ್ಥಾನದಲ್ಲಿ ಕುತೂಹಲಯುಕ್ತರಾಗಿರಲು ;

ಸೂತ್ರಧಾರನು ನಟನು ಇವರು ಮೊದಲಾದ ಗಾಯಕರು ಗಾನಪೂರ್ವಕವಾಗಿ ಸಭಾಪ್ರಾರ್ಥನೆಯಂ ಮಾಡಿ ರಂಗಸ್ಥಾನದಲ್ಲಿ ತಮ್ಮತಮ್ಮ ವೇಷಭಾಷಾದಿವ್ಯಾಪಾರಂಗಳಲ್ಲಿ ಉದ್ಯುಕ್ತರಾಗಿರಲು ;

ಆಬಳಿಕ ನೇಪಥ್ಯದಿಂದ ರೂಪಸಂಪನ್ನರಾದ ವಿದ್ಯಾಧರದಂಪತಿಗಳು ವಿಮಾನಾರೂಢರಾಗಿ ರಂಗಸ್ಥಾನವಂ ಪ್ರವೇಶಂಗೈದವರಾಗಲು ; ಆ ದಂಪತಿಗಳಲ್ಲಿ ವಿದ್ಯಾಧರನಾದ ಪುರುಷನು ಇಂತೆಂದನು :—" ಎಲೆ, ಆಕಸ್ಮಿಕವಾಗಿ ಯುದ್ಧದಲ್ಲಿ ಅತಿರೋಷಯುಕ್ತರಾಗಿರುವ ಈ ಸೂರ್ಯಕುಲೋತ್ಪನ್ನರಾದ ಕುಮಾರರ ಪರಾಕ್ರಮವಿಲಾಸಗಳು ಆಶ್ಚರ್ಯಕರಗಳಾದುದಱಿಂ ದೇವಾಸುರರು ಕೂಡ ಅತಿಭ್ರಮೆಯನ್ನೈದುತ್ತಲಿದ್ದಾರೆ " ಎಂದು ಆಶ್ಚರ್ಯದಿಂ ಕಾಂತೆಯಂ ಕುಱಿತು—" ಎಲೌ ಪ್ರಿಯಳೆ, ನೋಡು ನೋಡು. ಧ್ವನಿಗೈಸುವುದಱಿಂ ಝಣಝಣತ್ಕಾರವಂ ಮಾಡುತ್ತಲಿರುವ ಕಿಱುಗಂಟೆಗಳುಳ್ಳುದಾಗಿ ಮೆಱೆಯುತ್ತಲಿರುವ, ಮಹತ್ತಾದ ಹೆದೆಯುಳ್ಳ ಕೊನೆಗಳಿಂದ ಭಯಂಕರವಾದ ಕೋಲಾಹಲಧ್ವನಿಯಂ ಮಾಡುತ್ತಲಿರುವ, ಧನುಸ್ಸಂ ವಿಸ್ತರಿಸಿಕೊಂಡು ಎಡೆಯಿಲ್ಲದಂತೆ ಬಾಣಂಗಳಂ ವರ್ಷಿಸುವವರಾಗಿ ನಿರಂತರವೂ ಚಲಿಸುತ್ತಲಿರುವ ಶಿಖೆಗಳುಳ್ಳವರಾಗಿಯೂ ಇರುವ ಈ ಕುಮಾರರ ಯುದ್ಧವು ಲೋಕಕ್ಕೆ ಭಯಂಕರವಾದಕಾರಣ ಅತ್ಯಾಶ್ಚರ್ಯಕರವಾಗಿ ಇದೆಯಾದುದಱಿಂದ ಶೂರರಾದ ಈ ಕುಮಾರರಿರ್ವರಿಗೂ ಶುಭವುಂಟಾಗುವ ನಿಮಿತ್ತವಾಗಿಯೂ ಮಹಾಮೇಘದ ಗರ್ಜನೆಯಂತೆ ಧುಂಧುಮೆಂಬದಾಗಿ ದೇವಭೇರೀಧ್ವನಿಯು ವೃದ್ಧಿಯನ್ನೈದಿತಾದಕಾರಣ, ಎಲೌ ಪ್ರಿಯಳೆ, ಮಹಾವೀರರಾದ ಈ ಕುಮಾರರ ಮೇಲೆ ಎಡೆಯಿಲ್ಲದಂತೆ ಗುಂಪಾಗಿ ಕೂಡಿರುವ ವಿಕಾಸಯುಕ್ತಗಳಾದ ಸುವರ್ಣಕಮಲಗಳ ಮನೋಹರವಾದ ಸಮೂಹವುಳ್ಳುದಾಗಿ ಕಲ್ಪವೃಕ್ಷಗಳ ನೂತನಂಗಳಾದ ಮೊಗ್ಗುಗಳ ಸಮೂಹದಿಂ ಸ್ರವಿಸುತ್ತಲಿರುವ ಮಕರಂದವುಳ್ಳುದಾಗಿಯೂ ಇರುವ ಪುಷ್ಪವರ್ಷವಂ ವರ್ಷಿಸುವರಾಗೋಣ " ಎಂದು ಪೇಳಲು ; ಅದಂ ಕೇಳಿ ವಿದ್ಯಾಧರಸ್ತ್ರೀಯು ಕಾಂತನಂ ಕುಱಿತು—" ಎಲೆ ಪ್ರಿಯನೇ, ಈ ಮುಂಭಾಗದಲ್ಲಿ ಆಕಾಶವು ಏನುಕಾರಣ ಮತ್ತೊಂದೊ ಎಂಬಂತೆ ಶೀಘ್ರವಾಗಿ ಚಲಿಸುತ್ತಲಿರುವ ಉನ್ನತಗಳಾದ ಮಿಂಚುಗಳ ಸಮೂಹಗಳಿಂ ಹೊಂಬಣ್ಣವಾಯಿತು ? " ಎಂದು ಪ್ರಶ್ನೆಗೈದಳು. ಅದಂ ನೋಡಿ ವಿದ್ಯಾ

ಧರನು–" ಎಲೌ, ಈಗ ಲೋಕವಂ ಸಂಹರಿಸಲೋಸುಗ ಕಾಲಾಗ್ನಿರುದ್ರನು ವಿಶ್ವಕರ್ಮ ನೆಂಬ ದೇವಶಿಲ್ಪಿಯಿಂದ ಸಾಣೆಯ ಚಕ್ರವನ್ನೇಱಿಸಿ ಆ ಚಕ್ರಭ್ರಮಣದಿಂದ ತಿರಿಗಿಸಲ್ಪಟ್ಟ ಸೂರ್ಯನ ತೇಜಸ್ಸಿಗಿಂತ ಅತ್ಯಂತವಾಗಿ ಜಲ್ವಿಸುತ್ತಲಿರುವ ಅಗ್ನಿಸ್ವರೂಪವಾದ ತನ್ನ ಲಲಾಟಸ್ಥಾನದಲ್ಲಿರುವ ನೇತ್ರವಂ ಈಗ ತೆಱೆದವನಾಗಲಿಲ್ಲವಲ್ಲ. ಎಂತು ಆಕಾಶವು ಈ ರೀತಿ ಹೊಂಬಣ್ಣವಾಯಿತೊ!" ಎಂದು, ಆಲೋಚಿಸಿ, "ಆಃ! ತಿಳಿಯಿತು. ಚಂದ್ರಕೇತುವು ಕೋಪದಿಂ ವ್ಯಾಕುಲನಾಗಿ ಆಗ್ನೇಯಾಸ್ತ್ರವಂ ಪ್ರಯೋಗಿಸಿದನು. ಆದುದಱಿಂ ಅಗ್ನಿಯಂತೆ ಬಾಣಗಳು ಜ್ವಲಿಸುತ್ತ ಬೀಳುತ್ತಲಿವೆ. ಈಗ ನೋಡು. ಅಂತರಿಕ್ಷದಲ್ಲಿ ವಿಮಾನಸಮೂಹಂಗಳು ಅಗ್ನಿಜ್ವಾಲೆಗಳಿಂ ದಹಿಸಲ್ಪಟ್ಟುವಾದಕಾರಣ ಬರ್ಬರಶಬ್ದಯುಕ್ತಗಳಾದ ಧ್ವಜಗಳು ಚಾಮರಂಗಳು ಸಹ ಉಳ್ಳುವಾಗಿ ಹಿಂದಕ್ಕೆ ತಿರಿಗಿಹೋದವಲ್ಲ, ಮತ್ತು ಮುತ್ತುಗದ ನೂತನಂಗಳಾದ ಪುಷ್ಪಗಳ ಕಾಂತಿಗೆ ಸಮಾನವಾದ ಅಗ್ನಿಯು ಧ್ವಜಾಗ್ರಗಳಲ್ಲಿ ಕಟ್ಟಿರುವ ಈ ಪತಾಕಂಗಳ ಸಮೂಹವಂ ದಹಿಸುತ್ತಲಿದೆ. ಇದು ಪರಮಾಶ್ಚರ್ಯವು. ಅತಿ ದುಸ್ಸಹಗಳಾದ ಸಿಡಿಲಿನ ಖಂಡಗಳು ಒಡೆಯುವಂತೆ ಪ್ರಬಲವಾಗಿ ಧ್ವನಿಗೈಯುತ್ತ ಚಲಿಸುವ ಕಿಡಿಗಳಿಂದ ವ್ಯಾಪಿಸಲ್ಪಟ್ಟ ಅತ್ಯುನ್ನತಗಳಾದ ನಿಬಿಡಂಗಳಾದ ಕೋಲಾಹಲಧ್ವನಿಗಳುಳ್ಳ ಜ್ವಲಿಸುವ ಜ್ವಾಲಾಸಮೂಹಂಗಳಿಂ ಅತಿಭಯಂಕರನಾದ ಭಗವಂತನಾದ ಅಗ್ನಿಯು ಸುತ್ತಲೂ ವ್ಯಾಪಿಸಿದನಲ್ಲಾ! ಮತ್ತೂ ಈ ಅಗ್ನಿಯು ನಾಲ್ಕು ಕಡೆಯಲ್ಲಿಯೂ ವ್ಯಾಪಿಸುವುದು ಅತಿದುಸ್ಸಹವಾಯಿತು. ಆದುದಱಿಂದ ಈ ಪ್ರಿಯಳಂ ವಸ್ತ್ರದಿಂದ ಆಚ್ಛಾದನಂಗೈದು ದೂರವಾಗಿ ಹಿಂದಕ್ಕೆ ಪೋಗುತ್ತೇನೆ" ಎಂದು ವಿದ್ಯಾಧರನು ಅಲ್ಲಿಂದ ಹಿಂದಕ್ಕೆ ತಿರಿಗಿದವನಾಗಲು; ಆ ವಿದ್ಯಾಧರಸ್ತ್ರೀಯು ಇಂತೆಂದಳು:– "ದೈವಯೋಗದಿಂ ಮುಕ್ತಾಫಲದಂತೆ ಅತಿಶೀತಳವಾಗಿ ಮೆಱೆಯುತ್ತ ನುಣುಪಾಗಿ ಬಲವತ್ತಾಗಿರುವ ಕಾಂತನ ದೇಹದ ಸ್ಪರ್ಶನದಿಂ, ಅಗ್ನಿಜ್ವಾಲೆಗಳಿಂದ ಅತ್ಯಂತವಾಗಿ ತಪಿಸಲ್ಪಟ್ಟೆನಾದುದಱಿಂ ದೇಹದಲ್ಲಿ ವ್ಯಾಪಿಸುತ್ತಲಿರುವ ವೇದನೆಯುಳ್ಳ ನನ್ನ ಸಂತಾಪವು ಪ್ರಬಲವಾಗಿಯೂ ಅಷ್ಟಱೊಳಗೆ ಉಪಶಾಂತಿಯನ್ನೈದಿಸಲ್ಪಟ್ಟಿತು" ಎಂಬ ಪ್ರಿಯಳ ವಚನವಂ ಕೇಳಿ ವಿದ್ಯಾಧರನು ತನ್ನ ಸ್ತ್ರೀಯಂ ಕುಱಿತು–" ಎಲೌ ಪ್ರಿಯಳೆ, ಈಗ ನಾನು ನಿನ್ನ ವೇದನೆಯಂ ಪರಿಹರಿಸುವ ನಿಮಿತ್ತವಾಗಿ ಏನು ಉಪಚಾರವಂ ಮಾಡಿದೆನು? ಅಥವಾ ನಾನು ನಿನಗೆ ವಿಶೇಷವಾಗಿ ಶೀತೋಪಚಾರವಂ ಮಾಡದೆ ಇದ್ದರೂ ಮಾಡಿದವನೇ ಆಗುತ್ತೇನೆ. ಅದೆಂತೆನೆ:–ಲೋಕದಲ್ಲಿ ಯಾವ ಜನಕ್ಕೆ ಯಾವ ಜನವು ಅತ್ಯಂತವಾಗಿ ಇಷ್ಟವಾದುದೊ ಅಂಥ ಇಷ್ಟವಾಗಿರುವ ಜನವು ಆ ಜನಕ್ಕೆ ಸ್ವಲ್ಪವೂ ಹಿತವನ್ನಾಚರಿಸದೆ ಇದ್ದಾಗ್ಯೂ ತನ್ನ ಸೌಖ್ಯವಿಶೇಷಗಳಿಂದಲೇ ಆ ಜನದ ದುಃಖಗಳಂ ಪರಿಹರಿಸುವುದು. ಅದು ಹೇಗೆಂದರೆ:–ತನಗೆ ಇಷ್ಟವಾದ ಜನವು ಸೌಖ್ಯವನ್ನನುಭವಿಸುವುದು ಯಾವುದುಂಟೊ ಅದೇ ಉತ್ಕೃಷ್ಟವಾದ ದ್ರವ್ಯಸ್ವರೂಪವಾಗಿರುವುದಲ್ಲ. ಆದುದಱಿಂ ಅದೇ ರೀತಿ ನಾನು ನಿನಗೆ ಅತಿಪ್ರಿಯನಾಗಿ ಇರುವೆನಾದಕಾರಣ ನಿನಗೆ ಏನು ಉಪಚಾರವಂ ಮಾಡದೆ ಇದ್ದರೂ ನಾನು ಹಿತವನ್ನಾಚರಿಸಿದವನಾಗಿ ನಿನ್ನ ದುಃಖವಂ ಪರಿಹರಿಸುತ್ತೇನೆ" ಎಂಬದಾಗಿ ವಿದ್ಯಾಧರನು ಪೇಳಲು; ಅದಂ ಕೇಳಿ ವಿದ್ಯಾಧರ

ಸ್ತ್ರೀಯು ಪ್ರಿಯನಂ ಕುಱಿತು ಇಂತೆಂದಳು :–'' ಎಲೈ ಪ್ರಿಯನೆ, ಇದೇನು ನಿಬಿಡಂಗಳಾಗಿ ಅತಿಚಂಚಲಗಳಾಗಿ ಸುತ್ತುತ್ತಲಿರುವ ಮಿಂಚುಗಳ ವಿಲಾಸಗಳಿಂ ವ್ಯಾಪ್ತಗಳಾಗಿ ಮತ್ತು ಮದಯುಕ್ತಗಳಾಗಿರುವ ನವಿಲುಗಳ ಕಂಠದಂತೆ ಅತಿನೀಲವರ್ಣವಾಗಿಯೂ ಇರುವ ಮೇಘಗಳಿಂದ ಈ ಆಕಾಶಪ್ರದೇಶವು ವ್ಯಾಪಿಸಲ್ಪಡುತ್ತಲಿದೆ ? '' ಎಂದು ಪ್ರಶ್ನೆಗೈದಳು. ವಿದ್ಯಾಧರನು ಪ್ರಿಯಳ ವಚನವಂ ಕೇಳಿ–'' ಎಲೌ ಪ್ರಿಯಳೇ, ಇದು ಕುಮಾರನಾದ ಲವನಿಂದ ಪ್ರಯೋಗಿಸಲ್ಪಟ್ಟ ವಾರುಣಾಸ್ತ್ರಪ್ರಭಾವವಲ್ಲವೆ, ನೋಡು. ಗುಂಪಾಗಿ ವ್ಯಾಪಿಸಿಕೊಂಡಿರುವ ಜಲಧಾರಾಸಹಸ್ರಗಳು ಬೀಳೋಣದಱಿಂದ ಆಗ್ನೇಯಾಸ್ತ್ರವು ಉಪಶಾಂತವೇ ಆಯಿತು.'' ಎಂದು ಪೇಳಲು ; ವಿದ್ಯಾಧರಸ್ತ್ರೀಯು ಕಾಂತನಂ ಕುಱಿತು–'' ಎಲೈ ಪ್ರಿಯನೆ, ಈ ವಾರುಣಾಸ್ತ್ರವಂ ಪ್ರಯೋಗಿಸಿದುದು ನನಗೆ ಇಷ್ಟವಾಯಿತು, ಇಷ್ಟವಾಯಿತು '' ಎಂದಳು. ವಿದ್ಯಾಧರನು ಪ್ರಿಯಳಂ ಕುಱಿತು–'' ಕಟಕಟಾ ! ಸರ್ವವೂ ಅತಿಯಾದರೆ ಏತಕ್ಕೆ ? ಉಪದ್ರವವನ್ನೇ ಉಂಟುಮಾಡುವುದು. ಅದೆಂತೆನೆ :–ನೋಡು, ಪ್ರಳಯವಾತದಿಂ ವ್ಯಾಕುಲಗಳಾದಂತೆ ಗಂಭೀರವಾಗಿ ಗುಳುಗುಳೆಂದು ಧ್ವನಿಗೈಯುತ್ತಲಿರುವ ಮೇಘಗಳಿಂದ ಅತಿಪ್ರಬಲವಾದ ಅಂಧಕಾರದಿಂ ವ್ಯಾಪಿಸಲ್ಪಟ್ಟುದಾಗಿ ಇದೆಯಾದಕಾರಣ ಪ್ರಾಣಿಗಳ ಸಮೂಹವು ಒಂದೇ ಆವೃತ್ತಿ ನಾನಾ ಮುಖವಾಗಿ ಕಬಳಿಸುವುದಱಿಂ ವಕ್ರವಾಗಿಯೂ ಭಯಂಕರವಾಗಿಯೂ ಇರುವ ಕಾಲಮೃತ್ಯುವಿನ ಮಹತ್ತಾದ ಮುಖದಲ್ಲಿ ಹೊರಳುತ್ತಲಿರುವಂತೆಯೂ, ಮತ್ತು ಯುಗಾಂತಕಾಲದಲ್ಲಿ ಯೋಗನಿದ್ರೆಯಿಂದ ನಿರೋಧಿಸಲ್ಪಟ್ಟ ಸಮಸ್ತದ್ವಾರಂಗಳುಳ್ಳ ನಾರಾಯಣನ ಉದರಪ್ರದೇಶದಲ್ಲಿ ಪ್ರವೇಶಂಗೈದು ಇರುವಂತೆಯೂ, ಸಂಕಟಪಡುತ್ತಲಿದೆ '' ಎನುತ, ಆ ಬಳಿಕ ನೋಡಿ–'' ಎಲೈ ಚಂದ್ರಕೇತುವೆ, ಚೆನ್ನಾಯಿತು, ಚೆನ್ನಾಯಿತು. ಈಗ ನೀನು ವಾಯವ್ಯಾಸ್ತ್ರವಂ ಪ್ರಯೋಗಿಸಿದುದು ಬಹು ಉಪಯುಕ್ತವಾಯಿತು. ಅದು ಹೇಗೆಂದರೆ :–ತತ್ವಜ್ಞಾನಕ್ಕೆ ಸಮಾನವಾದ ವಾಯುವಿನಿಂದ ಬ್ರಹ್ಮನಲ್ಲಿ ಮಾಯಾಕಲ್ಪಿತಂಗಳಾದ ಸಮಸ್ತ ಭೂತಗಳಿಗೂ ತತ್ವಜ್ಞಾನದಿಂ ಪ್ರಳಯವುಂಟಾಗುವಂತೆ ಆಕಾಶದಲ್ಲಿ ನಿಬಿಡಂಗಳಾಗಿ ಇದ್ದಾಗ್ಯೂ ಸಮಸ್ತ ಮೇಘಂಗಳಿಂ ಎಲ್ಲೋ ಕಣ್ಣಲ್ಲಿ ಬೀಳದಂತೆ ಪ್ರಳಯವು ಮಾಡಲ್ಪಟ್ಟಿತು '' ಎಂದು ಪೇಳಲು ; ವಿದ್ಯಾಧರಸ್ತ್ರೀಯು ಪತಿಯಂ ಕುಱಿತು– '' ಎಲೈ ಪ್ರಿಯನೆ, ಇತ್ತ ನೋಡು. ಈಗ ಈ ಪುರುಷನು ಯಾರು ? ತ್ವರೆಯಿಂದ ಮೇಲಕ್ಕೆ ಭುಜವಂ ಎತ್ತಿ ಹಸ್ತದಿಂದ ತನ್ನ ಮೆಯ್ಯ ಹೊದ್ದಿಕೆಯ ಸೆಱಗಂ ಬೀಸಿದವನಾಗಿ ದೂರದಲ್ಲೇ ಮಧುರಂಗಳಾಗಿ ಸ್ನೇಹಯುಕ್ತಂಗಳಾಗಿಯೂ ಇರುವ ವಚನಗಳಿಂದ ಈ ಯುದ್ಧವ್ಯಾಪಾರವನ್ನು ತಡೆದವನಾಗಿ ಈ ಕುಮಾರರಿಬ್ಬರಿಗೂ ಮಧ್ಯಪ್ರದೇಶದಲ್ಲಿ ವಿಮಾನಶ್ರೇಷ್ಠದಿಂ ಇಳಿಯುತ್ತಲಿದ್ದಾನೆ ? '' ಎಂದು ಪ್ರಶ್ನೆಗೈಯಲು ; ವಿದ್ಯಾಧರನು– '' ಎಲೌ ಪ್ರಿಯಳೆ, ಈತನಾರೆಂದರೆ : ಶಂಬೂಕನೆಂಬ ಶೂದ್ರಮುನಿಯಂ ಸಂಹರಿಸಿ, ಅಲ್ಲಿಂದ ಪುನಃ ತಿರಿಗಿ ಬಂದಿರುವ ಶ್ರೀರಘುಪತಿಯು ಈತನು. ಎಲೌ ಕಾಂತೆಯೆ, ನೋಡು. ಮಹಾಪುರುಷನಾದ ಈ ರಘುಪತಿಯ ಉಪಶಾಂತಿಯುಕ್ತವಾದ ವಚನವಂ ಕೇಳಿ ಈ ರಘುಪತಿಯಲ್ಲಿರುವ ಗುರುಭಾವನೆಯಿಂ ಯುದ್ಧವಂ ಬಿಟ್ಟು ಈ ಲವನೆಂಬ

ಕುಮಾರನು ಉಪಶಾಂತನಾಗಿ ನಿಂತನು. ಈ ಮಹಾರಾಯನಿಗೆ ಈ ಪುತ್ರರೊಡಗೂಡು ವುದಱಿಂ ಶುಭವುಂಟಾಗಲಿ!'' ಎಂದು ತನ್ನ ಪ್ರಿಯಳಂ ಕುಱಿತು ಪೇಳಿದನು.

ಈರೀತಿ ವಿದ್ಯಾಧರದಂಪತಿಗಳು ತಮ್ಮ ಪರಸ್ಪರ ಸಲ್ಲಾಪಗಳಿಂ ಲವನಿಗೂ ಚಂದ್ರ ಕೇತುವಿಗೂ ನಡೆದಂಥ ಶಸ್ತ್ರಾಸ್ತ್ರಯುದ್ಧವಂ, ಶ್ರೀರಾಮನು ಸಮಾಧಾನವಂ ಮಾಡ ಲೋಸುಗ ಕುಮಾರರೊಡಗೂಡಿರುವನಾಗಿ ಮುಂದೆ ರಂಗಸ್ಥಾನವಂ ಪ್ರವೇಶಂಗೈದು ದಂ ಸಹ ಸೂಚನಂಗೈದು ಅಲ್ಲಿಂದ ಪೊಱಟವರಾಗಲು ;

ಆ ಬಳಿಕ ನೇಪಥ್ಯದಿಂದ ಶ್ರೀರಾಮನು, ಲವನು, ವಂದಿಸುತ್ತಲಿರುವ ಚಂದ್ರಕೇ ತುವು ಸಹ ರಂಗಸ್ಥಾನವಂ ಪ್ರವೇಶಿಸುವರಾಗಲು ; ಆಗ ಶ್ರೀರಾಮನು ಪುಷ್ಪಕವೆಂಬ ವಿಮಾನದಿಂ ಇಳಿಯುವನಾಗಿ ಕುಮಾರನಂ ಕುಱಿತು–'' ಎಲೈ ಸೂರ್ಯವಂಶದಲ್ಲಿ ಚಂದ್ರ ನಂತೆ ಆನಂದಕರನಾದ ಚಂದ್ರಕೇತುವೆ, ನೀನು ವೇಗದಿಂ ಬರುವನಾಗು, ದೃಢವಾಗಿ ನನ್ನಂ ಆಲಿಂಗನಂಗೈಯುವನಾಗು. ಹಿಮಬಿಂದುಗಳಂತೆ ಶೀತಳಂಗಳಾದ ನಿನ್ನ ಅಂಗಗ ಳೊಡನೆ ಸಂಪರ್ಕವುಂಟಾಗುವುದಱಿಂ ನನ್ನ ಮನಸ್ತಾಪವು ಕೂಡ ಉಪಶಾಂತಿಯನ್ನೈ ದಲಿ'' ಎನುತ ತನ್ನ ಪಾದಂಗಳಂ ವಂದಿಸುತ್ತಲಿರುವ ಚಂದ್ರಕೇತುವಂ ಮೇಲಕ್ಕೆ ಎಬ್ಬಿ ಸಿದವನಾಗಿ ಸ್ನೇಹದೊಡನೆ ಕಣ್ಣೀರೊಡನೆಯೂ ಕೂಡ ಆಲಿಂಗನಂಗೈದು–'' ಎಲೈ ಆಯುಷ್ಮಂತನೆ, ನಿನ್ನ ದಿವ್ಯಾಸ್ತ್ರಯುದ್ಧಕ್ಕೆ ಕುಶಲವೆ ಏನು?'' ಎಂದು ಪ್ರಶ್ನೆಗೈದವ ನಾಗಲು ; ಅದಂ ಕೇಳಿ ಚಂದ್ರಕೇತುವು ಸ್ವಾಮಿಯಂ ಕುಱಿತು–'' ಎಲೈ ಪೂಜ್ಯನೆ, ಅತ್ಯಾಶ್ಚರ್ಯಕರನಾದ ಈ ಪ್ರಿಯಮಿತ್ರನ ಲಾಭವೆಂಬ ಶುಭೋದಯವುಂಟಾದುದಱಿಂ ಈಗ ನನ್ನ ದಿವ್ಯಾಸ್ತ್ರಯುದ್ಧಕ್ಕೆ ಕುಶಲವುಂಟಾಯಿತು. ಅದುಕಾರಣ ನಾನು ವಿಜ್ಞಾಪಿ ಸುವೆನು. ಅದೇನೆಂದರೆ :–ಪೂಜ್ಯನಾದ ನೀನು ನನ್ನಂ ನೋಡುವಂತೆ ವಿಶೇಷದಿಂ ಪ್ರಸ ನ್ನವಾಗಿ ಸ್ನೇಹಯುಕ್ತವಾಗಿಯೂ ಇರುವ ದೃಷ್ಟಿಯಿಂ ಋಜುವಾದ ಯುದ್ಧಸಹಾಯ ವುಳ್ಳ ಈ ವೀರನಂ ನೋಡಬೇಕು'' ಎಂದು ಬಿನ್ನವಿಸಲು ; ಶ್ರೀರಾಮನು ಅದೇ ರೀತಿ ಲವನಂ ಭಾವಿಸಿ ನೋಡಿ–'' ಎಲೈ, ಭಾಗ್ಯೋದಯದಿಂ ಈ ಪುತ್ರನಾದ ಚಂದ್ರಕೇತು ವಿಗೆ ಅತಿಗಂಭೀರವಾಗಿ ಅತಿಸುಂದರವಾಗಿ ಶುಭಕರವಾಗಿಯೂ ಇರುವ ಆಕಾರವುಳ್ಳ ಪ್ರಿಯಮಿತ್ರನು ದೊರೆತನಲ್ಲವೆ. ಈ ಕುಮಾರನಂ ಭಾವಿಸಿ ನೋಡಿದರೆ ಎಂತು ತೋಱು ವುದು ಎಂದರೆ :–ಲೋಕಂಗಳಂ ರಕ್ಷಿಸಲೋಸುಗ ಧನುರ್ವೇದವೇ ಈರೀತಿ ಮೂರ್ತಿವ ತ್ತಾಗಿದೆಯೊ, ಅಲ್ಲದೆ ಕ್ಷತ್ರಿಯಧರ್ಮವು ಬ್ರಾಹ್ಮಣನೆಂಬ ಬೊಕ್ಕಸವಂ ರಕ್ಷಿಸಲೋಸುಗ ಈರೀತಿ ದೇಹವಂ ತಾಳಿದೆಯೊ ಎಂಬಂತೆಯೂ ತೋಱುತ್ತಲಿದೆ. ಮತ್ತು ಸಾಮರ್ಥ್ಯ ಗಳ ಸಮೂಹವು ಈ ರೂಪದಿಂ ಇರುವಂತೆಯೂ, ಅಥವಾ ಶೌರ್ಯಾದಿಗುಣಗಳ ಸಮೂ ಹವು ಈರೀತಿ ಇರುವಂತೆಯೂ, ಮತ್ತು ಜಗತ್ತಿನ ಪುಣ್ಯಗಳೆಲ್ಲವೂ ಗುಂಪಾಗಿ ಈರೀತಿ ಆವಿರ್ಭವಿಸಿ ಇರುವಂತೆಯೂ ತೋಱುತ್ತಲಿದೆ'' ಎಂಬುದಾಗಿ ಶ್ರೀರಾಮನು ಲವನಂ ನೋಡಿ ಭಾವನೆಯಂ ಮಾಡುತ್ತಲಿರಲು ; ಲವನು ಸ್ವಾಮಿಯಂ ನೋಡಿ–ಈ ಮಹಾಪುರು ಷನು ಪುಣ್ಯಕರಂಗಳಾದ ಕಟಾಕ್ಷವೀಕ್ಷಣವೊದಲಾದ ಅಂಗವ್ಯಾಪಾರಂಗಳಿಂ ಮನೋಹರ ವಾದ ದರ್ಶನವುಳ್ಳವನು ; ಮತ್ತು ಈ ಮಹಾತ್ಮನು ಬಾಲಕರಲ್ಲಿ ಮಾಡತಕ್ಕ ವಾತ್ಸಲ್ಯ

ವೆಂಬ ಪ್ರೇಮಾತಿಶಯಕ್ಕೂ ಸಮಾನಸ್ಥರಲ್ಲಿ ಮಾಡತಕ್ಕ ಸ್ನೇಹವೆಂಬ ಪ್ರೇಮಾತಿಶಯಕ್ಕೂ ಈರೀತಿ ಎಲ್ಲರಲ್ಲಿ ಮಾಡತಕ್ಕ ಭಕ್ತಿಯೆಂಬ ಪ್ರೇಮಾತಿಶಯಕ್ಕೂ ಸಹ ಈ ಮೂಱಕ್ಕೂ ಮುಖ್ಯವಾದ ಮಹತ್ತಾದ ಆವಾಸಸ್ಥಾನವಾಗಿ ಇರುವನಲ್ಲವೆ? ಈ ಮಹಾಪುರುಷನು ಉತ್ಕೃಷ್ಟವಾದ ಧರ್ಮವು ಸುಂದರವಾದ ದೇಹವುಳ್ಳುದಾಗಿ ಪ್ರಸನ್ನವಾದಂತೆ ನನಗೆ ತೋಱುತ್ತಲಿದ್ದಾನೆ. ಈಗ ಇದು ಆಶ್ಚರ್ಯವು, ಆಶ್ಚರ್ಯವು ! ಅದೇನೆಂದರೆ :– ಈ ಮಹಾಪುರುಷನ ದರ್ಶನವಾಗಲು ಆ ವೈರವು ಉಪಶಾಂತವಾಯಿತು. ಮನಸ್ಸಿನಲ್ಲಿ ಪರಮಾನಂದದಿಂ ಪರಿಪೂರ್ಣವಾದ ಒಂದಾನೊಂದು ರಸವು ಪ್ರಸರಿಸುತ್ತಲಿದೆ. ಮತ್ತು ನನ್ನ ಅಹಂಕಾರವು ಎಲ್ಲೋ ಅಗೋಚರವಾಯಿತು. ವಿನಯಾತಿಶಯವು ಈಗ ನನ್ನಂ ಅತಿನಮ್ರನನ್ನಾಗಿ ಮಾಡುತ್ತಲಿದೆ. ಈತನಂ ನೋಡಲು ನಾನು ಏಕೆ ಈ ರೀತಿ ಪರವಶನಾಗುತ್ತೇನೊ ತಿಳಿಯದು. ಅಥವಾ ಇದಕ್ಕೆ ಮತ್ತೊಂದು ಕಾರಣವು ಏನು ಇದೆ? ಪುಣ್ಯಕರಂಗಳಾದ ಗಂಗಾತೀರ್ಥಗಳಲ್ಲಿ ಇರುವ ಒಂದಾನೊಂದು ವಿಶೇಷದಂತೆ ಮಹಾತ್ಮರಲ್ಲಿಯೂ ಒಂದಾನೊಂದು ವಿಶೇಷವು ಅಮೂಲ್ಯವಾಗಿ ಇರುವುದಱಿಂ ಈತನ ದರ್ಶನದಿಂ ನಾನು ಈ ರೀತಿ ಉಪಶಾಂತನಾದೆನು. ಈ ರೀತಿ ಲವನು ಆಶ್ಚರ್ಯಪಡುತ್ತಲಿರಲು ಶ್ರೀರಾಮನು ಲವನಂ ನೋಡಿ–ಇಂದು ಈ ಕುಮಾರನು ಒಂದು ಕ್ಷಣದಲ್ಲಿಯೇ ನನ್ನ ಅಪಾರವಾಗಿರುವ ದುಃಖಕ್ಕೆ ಉಪಶಾಂತಿಯನ್ನುಂಟುಮಾಡುತ್ತಲಿದ್ದಾನೆ; ಏನೋ ಕಾರಣಾಂತರದಿಂ ನನ್ನ ಅಂತರಾತ್ಮನನ್ನು ಕೂಡ ಸ್ನೇಹಯುಕ್ತನನ್ನಾಗಿ ಮಾಡುತ್ತಲಿದ್ದಾನೆ. ಇದೇನು ನಿಮಿತ್ತವೋ ತಿಳಿಯಲಿಲ್ಲ; ಇದು ಆಶ್ಚರ್ಯವು, ಇದು ಆಶ್ಚರ್ಯವು. ಅಥವಾ ಲೋಕದಲ್ಲಿ ಸ್ನೇಹವು ನಿಮಿತ್ತವನ್ನಪೇಕ್ಷಿಸಿ ಉಂಟಾಗುವುದೆಂಬ ವಚನವು ಅಸತ್ಯವಾದ ಅರ್ಥವುಳ್ಳುದೇ ಸರಿ. ಮತ್ತೇನೆಂದರೆ–ಅಂತಃಕರಣದಲ್ಲಿರುವ ಪೇಳಲಶಕ್ಯವಾದ ಒಂದಾನೊಂದು ಕಾರಣವು ವಸ್ತುಗಳಂ ಅನ್ಯೋನ್ಯವಾಗಿ ಕೂಡಿಸುತ್ತಲಿದೆಯೇ ಹೊಱತು ಪ್ರೀತಿಗಳ ಪಿತೃತ್ವ ಪುತ್ರತ್ವ ಭ್ರಾತೃತ್ವ ಬಂಧುತ್ವಗಳೆಂಬ ಬಹಿರಂಗವಾದ ನಿಮಿತ್ತಗಳನ್ನಪೇಕ್ಷಿಸುವುದಿಲ್ಲ. ಅದು ಹೇಗೆಂದರೆ :–ಆಕಾಶದಲ್ಲಿ ಸೂರ್ಯನು ಉದಯಿಸಲು ಸರಸ್ಸಿನಲ್ಲಿ ಕಮಲವು ವಿಕಾಸವನ್ನೈದುತ್ತಲಿದೆ, ಚಂದ್ರನು ಉದಯಿಸಲು ಭೂಮಿಯಲ್ಲಿ ಚಂದ್ರಕಾಂತವೆಂಬ ಶಿಲೆಯು ದ್ರವಿಸುತ್ತಲಿದೆ; ಆ ಸೂರ್ಯಕಮಲಂಗಳಿಗೂ ಆ ಚಂದ್ರಕಾಂತಶಿಲೆಗಳಿಗೂ ಸಹ ಪಿತೃತ್ವಪುತ್ರತ್ವಾದಿ ಸಂಬಂಧಗಳಿಲ್ಲದಿದ್ದರೂ ಸೂರ್ಯಚಂದ್ರರ ದರ್ಶನದಿಂ ಕಮಲಕ್ಕೆ ಚಂದ್ರಕಾಂತಶಿಲೆಗೆ ಸಹ ಆ ರೀತಿ ಉಲ್ಲಾಸದಿಂ ವಿಕಾಸವು ದ್ರವಿಸುವುದು ಸಹ ಉಂಟಾಗುವುದಾದಕಾರಣ ವಸ್ತುಗಳಿಗೆ ಪರಸ್ಪರ ಪ್ರೇಮಾನುಬಂಧವುಂಟಾಗುವುದಱಲ್ಲಿ ಅಂತರಂಗದಲ್ಲಿರುವ ಒಂದಾನೊಂದು ವಾಸನಾವಿಶೇಷವೇ ಕಾರಣವಾಗುವುದೇ ಹೊಱತು ಮತ್ತೊಂದಲ್ಲ–ಎಂಬದಾಗಿ ಶ್ರೀರಾಮನು ನಿಶ್ಚಯಿಸುವನಾಗಲು; ಲವನು ಚಂದ್ರಕೇತುವಂ ಕುಱಿತು–" ಎಲೈ ಮಿತ್ರನೆ, ಈ ಮಹಾಪುರುಷನು ಯಾರು? " ಎಂದು ಪ್ರಶ್ನೆಗೈದನು. ಚಂದ್ರಕೇತುವು ಲವನಂ ಕುಱಿತು–ಎಲೈ ಪ್ರಿಯಮಿತ್ರನೆ, ಇವರು ನಮ್ಮ ತಂದೆಗಳು " ಎಂದು ಪೇಳಲು; ಲವನು ಚಂದ್ರಕೇತುವಂ ಕಱಿತು–" ಎಲೈ ರಾಜಪುತ್ರನೇ ನೀನು ನನ್ನಂ ಪ್ರಿಯಮಿತ್ರನೆಂದು ಕರೆದೆ

ಯಾದಕಾರಣ ಧರ್ಮದಿಂ ಇವರು ನನಗೂ ತಂದೆಗಳೇ ಸರಿ. ಮತ್ತೇನೆಂದರೆ :—ಪೂಜ್ಯರಾಗಿ ರಾಮಾಯಣವೆಂಬ ಮಹಾಕಾವ್ಯಕ್ಕೆ ಕಥಾನಾಯಕರಾದ ನಿಮ್ಮ ತಂದೆಗಳೆಂಬವರು ನಾಲ್ಕು ಮಂದಿಯಲ್ಲವೆ ? ಅವರೊಳಗೆ ಇವರು ಯಾರು ? ಪೇಳುವನಾಗು'' ಎಂದನು. ಚಂದ್ರಕೇತುವು ಲವನಂ ಕುಱಿತು—'' ಇವರೇ ನಮ್ಮ ದೊಡ್ಡ ತಂದೆಗಳಾಗಿ ತಿಳಿ '' ಎಂದು ನುಡಿಯಲು ; ಲವನು ಉಲ್ಲಾಸದಿಂ—'' ಅಹೋ ! ಸಾಕ್ಷಾದ್ರಘುಪತಿಯೇ ಈತನು. ನನ್ನ ಭಾಗ್ಯೋದಯದಿಂ ಇಂಥ ಮಹಾರಾಜದರ್ಶನವಾದುದಱಿಂದ ಇದು ಸುದಿವಸವಾಯಿತು '' ಎನುತ, ವಿನಯದೊಡನೆ ಕುತೂಹಲದೊಡನೆಯೂ ಸಹಿತನಾಗಿ ಸ್ವಾಮಿಯಂ ನೋಡಿ—'' ಎಲೈ ತಂದೆಯೆ, ವಾಲ್ಮೀಕಿಮುನಿಶಿಷ್ಯನಾದ ಲವನು ನಿಮ್ಮ ಪಾದಪದ್ಮಂಗಳಂ ವಂದಿಸುತ್ತಾನೆ '' ಎಂದು ನಮಿಸಲು ; ಶ್ರೀರಾಮನು ಲವನಂ ಕುಱಿತು—'' ಎಲೈ ಆಯುಷ್ಮಂತನೇ, ಬಾರೈ ಬಾರೈ '' ಎಂದು ಸ್ನೇಹದಿಂ ಆಲಿಂಗನವಂ ಮಾಡಿ—'' ಎಲೈ ಕುಮಾರನೆ, ನೀನು ನಮ್ಮಲ್ಲಿ ಬಹುವಿನಯವನ್ನಾಚರಿಸಿದೆ, ಬಾರೈ ; ಈ ಸುಕುಮಾರವಾದ ನಿನ್ನ ಶರೀರದಿಂ ನನ್ನಂ ದೃಢವಾಗಿ ಆಲಿಂಗನಂಗೈಯುವನಾಗು. ಎಲೈ, ಚಂದ್ರನಂತೆ ಪೊಳೆಯುವ ಮುಖವುಳ್ಳವನೇ, ಪರಿಪಕ್ವವಾದುದಱಿಂ ಪರಿಪೂರ್ಣವಾಗಿರುವ, ಕಮಲದ ಗರ್ಭದಲ್ಲಿರುವ ದಳಗಳಂತೆ ಪುಷ್ಟಿಯುಕ್ತವಾದ, ನುಣುಪಾಗಿ ಸುಕುಮಾರವಾಗಿಯೂ ಇರುವುದಾದಕಾರಣ ಶ್ರೀ ಚಂದ್ರನದ ದ್ರವದಂತೆ ಅತಿಶೀತಲವಾಗಿರುವ ನಿನ್ನ ಅಂಗದ ಸ್ಪರ್ಶವು ನನ್ನನ್ನಾನಂದಯುಕ್ತನನ್ನಾಗಿ ಮಾಡುತ್ತಲಿದೆ '' ಎಂದು ಪೇಳಲು ; ಲವನು ತನ್ನ ಮನಸ್ಸಿನಲ್ಲಿ ಇಂತೆಂದನು :—ಎಲೈ, ಈ ಮಹಾಪುರುಷರಿಗೆ ಕಾರಣವಿಲ್ಲದೆ ನನ್ನಲ್ಲಿ ಈ ರೀತಿಯಾಗಿ ಸ್ನೇಹವುಂಟಾಗಿದೆ. ನಾನಾದರೋ ಅಜ್ಞನಾಗಿ ಆಯುಧವಂ ಪರಿಗ್ರಹಿಸಿ ಯುದ್ಧದಲ್ಲಿ ಸನ್ನದ್ಧನಾದಕಾರಣ ನಾನು ಇಂಥ ಮಹಾತ್ಮರಿಗೋಸ್ಕರ ದ್ರೋಹವಂ ಮಾಡಿದೆನು—ಎಂದು ಚಿಂತಿಸಿ, ಪ್ರಕಟವಾಗಿ ಸ್ವಾಮಿಯಂ ಕುಱಿತು ಇಂತೆಂದನು :—'' ಎಲೈ ಪೂಜ್ಯರೇ, ತಂದೆಗಳಾದ ನೀವು ಈ ಲವನ ಮೂರ್ಖತ್ವವಂ ಕ್ಷಮಿಸುವರಾಗಬೇಕು '' ಎಂದು ಲವನು ಬಿನ್ನವಿಸಲು ; ಶ್ರೀರಾಮನು—'' ಎಲೈ ಕುಮಾರನೆ, ನೀನು ಏನು ಅಪರಾಧವಂ ಮಾಡಿದೆ ? '' ಎಂದು ಕೇಳಲು ; ಚಂದ್ರಕೇತುವು ಸ್ವಾಮಿಯಂ ಕುಱಿತು—'' ಎಲೈ ಪೂಜ್ಯರೇ, ನಮ್ಮ ಯಜ್ಞಾರ್ಥವಾಗಿರುವ ಅಶ್ವಕ್ಕೆ ಅನುಚರರಾಗಿ ಪೊಗಳುತ್ತ ಬರುವ ಭಟರ ಮುಖದಿಂ ತಮ್ಮ ಪ್ರತಾಪವಿಶೇಷಂಗಳಂ ಅಗ್ಗಳಿಸಿ ವರ್ಣಿಸುವುದಂ ಕೇಳಿ ಅದಂ ಸಹಿಸುವನಾಗದೆ ಈ ಕುಮಾರನು ವೀರವಾದವಂ ಮಾಡಿದನು '' ಎಂದು ಬಿನ್ನವಿಸಲು ; ಅದಂ ಕೇಳಿ ಶ್ರೀರಾಮನು ಚಂದ್ರಕೇತುವಂ ಕುಱಿತು—'' ಎಲೈ ಪುತ್ರನೆ, ಅನ್ಯರ ಪ್ರತಾಪವಂ ಸಹಿಸದೆ ಈ ವೀರವಾದವಂ ಮಾಡುವುದು ಕ್ಷತ್ರಿಯನಿಗೆ ಅಲಂಕಾರವಲ್ಲವೆ ! ಅದೆಂತೆನೆ :—ಲೋಕದಲ್ಲಿ ತೇಜೋವಂತನಾದ ಪುರುಷನು ಪರತೇಜಸ್ಸು ಹೊಱಗೆ ವ್ಯಾಪಿಸುವುದಂ ಸಹಿಸುವುದಿಲ್ಲವೆಂಬುದು ಆ ಶೂರನಿಗೆ ಸ್ವಭಾವವೇ ಸರಿ. ಆ ಗುಣವು ಸ್ವಭಾವಸಿದ್ಧವಾದುದಱಿಂದ ಕೃತ್ರಿಮವಲ್ಲ. ಅದು ಹೇಗೆಂದರೆ :—ಆಕಾಶದಲ್ಲಿ ಪೂಜ್ಯನಾದ ಸೂರ್ಯನು ತನ್ನ ಕಿರಣಗಳಿಂದ ಎಡೆಯಿಲ್ಲದಂತೆ ಪ್ರಕಾಶಿಸುವನಾದರೆ ಸೂರ್ಯಕಾಂತಮಣಿಯು ತಾನು ತಿರಸ್ಕರಿಸಲ್ಪಟ್ಟವನಂತೆ

ಜ್ವಲಿಸುವ ಜ್ವಾಲೆಗಳಂ ಬಿಡುವುದಿಲ್ಲವೆ ಏನು ?''. ಎಂದು ಹೇಳಲು ; ಚಂದ್ರಕೇತುವು ಸ್ವಾಮಿಯಂ ಕುಱಿತು–'' ಎಲೈ ಪೂಜ್ಯರೇ, ಕೋಪವೆಂಬುದು ಕೂಡ ಮಹಾ ವೀರನಾದ ಈ ಲವನಲ್ಲಿಯೇ ಶೋಭಿಸುವುದು. ಅದೆಂತೆನೆ :–ಪ್ರಿಯಮಿತ್ರನಾದ ಈ ಕುಮಾರನು ಪರಾಕ್ರಮವಂ ಮಾಡಿ ತನ್ನಿಂದ ಪ್ರಯೋಗಿಸಲ್ಪಟ್ಟ ಜೃಂಭಕಾಸ್ತ್ರದಿಂ ನಮ್ಮ ಸಮಸ್ತ ಸೇನೆಗಳಂ ಸ್ತಂಭಿಸಿದವನಾದನು. ತಂದೆಗಳಾದ ತಾವು ಈ ಸಮಸ್ತಸೇನೆಗಳಂ ನೋಡಬೇಕು '' ಎಂದು ಬಿನ್ನವಿಸಲು ; ಶ್ರೀ ರಾಮನು ಸೇನೆಗಳಂ ನೋಡಿ–'' ಎಲೈ ಕುಮಾರನಾದ ಲವನೇ, ನೀನು ನಿನ್ನ ಜೃಂಭಕಾಸ್ತ್ರವಂ ಉಪಸಂಹಾರಂಮಾಡು. ಎಲೈ ಚಂದ್ರಕೇತುವೆ, ಅಸ್ತ್ರಪ್ರಯೋಗದಿಂ ಚೇಷ್ಟಾರಹಿತಗಳಾಗಿ ಆಶ್ಚರ್ಯಯುಕ್ತಗಳಾಗಿಯೂ ಇರುವ ಈ ಸೇನೆಗಳಂ ಪ್ರಿಯವಚನಗಳಿಂ ಸಮಾಧಾನಪಡಿಸುವನಾಗು '' ಎಂದು ನಿಯಮಿಸಲು ; ಲವನು ಅದೇರೀತಿ ಅಸ್ತ್ರವಂ ಉಪಸಂಹಾರಂ ಮಾಡಲೋಸುಗ ಧ್ಯಾನವಂ ನಟಿಸುತ್ತಿರಲು ; ಆಗ ಚಂದ್ರಕೇತುವು–'' ಎಲೈ ತಂದೆಯೆ, ಆಜ್ಞಾಪ್ರಕಾರದಿಂ ಸೇನೆಗಳಂ ಸಂತೈಸುವನಾಗುತ್ತೇನೆ '' ಎಂದು ಬಿನ್ನವಿಸಿ, ಅಲ್ಲಿಂದ ಪೊಱಟನು. ಲವನು ಸ್ವಾಮಿಯಂ ಕುಱಿತು–'' ಎಲೈ ತಂದೆಯೆ, ಆಜ್ಞಾನುಸಾರವಾಗಿ ನಾನು ಜೃಂಭಕಾಸ್ತ್ರವಂ ಉಪಸಂಹಾರವಂ ಮಾಡಿದೆನು '' ಎಂದು ಬಿನ್ನವಿಸಲು ; ಶ್ರೀ ರಾಮನು–'' ಎಲೈ ಕುಮಾರನೆ, ರಹಸ್ಯಯುಕ್ತಗಳಾಗಿರುವ ಜೃಂಭಕಪ್ರಯೋಗಾಸ್ತ್ರಗಳು ಉಪಸಂಹಾರಾಸ್ತ್ರಗಳು ಸಹ ಭಾಗ್ಯವಿಶೇಷದಿಂ ಆಯುಷ್ಮಂತನಾದ ನಿನಗೂ ಕೂಡ ಉಪದೇಶಂಗೈಯಲ್ಪಟ್ಟುವಾಗಿ ಆಗಿವೆಯೊ ಏನು ? ಪೂರ್ವಮುನಿಗಳಾದ ಬ್ರಹ್ಮಾದಿಗಳು ಬ್ರಾಹ್ಮಣರಿಗೆ ಹಿತಾರ್ಥವಾಗಿ ಅನೇಕ ಸಂವತ್ಸರಸಹಸ್ರಂಗಳು ತಪಸ್ಸಂಮಾಡಿ ಆಬಳಿಕ ತಪೋರೂಪಂಗಳಾಗಿ ತಮ್ಮಲ್ಲಿರುವ ತೇಜಸ್ಸುಗಳೇ ಹೊಱಕ್ಕೆ ಬಂದು ಪ್ರತ್ಯಕ್ಷಗಳಾದುವೊ ಎಂಬಂತೆ ಇರುವ ಈ ಜೃಂಭಕಾಸ್ತ್ರಂಗಳಂ ಪ್ರತ್ಯಕ್ಷವಾಗಿ ಕಂಡರು. ಆಬಳಿಕ ಈ ಅಸ್ತ್ರಮಂತ್ರಪಾರಾಯಣೋಪನಿಷತ್ತಂ ಭಗವಂತನಾದ ಭೃಶಾಶ್ವಮುನಿಯು ಅನೇಕ ಸಹಸ್ರಸಂವತ್ಸರಂಗಳು ಶಿಷ್ಯನಾಗಿ ಸೇವೆಯಂ ಮಾಡುತ್ತಲಿರುವ ವಿಶ್ವಾಮಿತ್ರಮುನಿಗೋಸ್ಕರ ಉಪದೇಶವಂ ಮಾಡಿದನು. ಆಬಳಿಕ ಪೂಜ್ಯನಾದ ಆ ವಿಶ್ವಾಮಿತ್ರಮುನಿಯು ಈ ಅಸ್ತ್ರಮಂತ್ರಗಳಂ ನನಗೆ ಉಪದೇಶವಂ ಮಾಡಿದನೆಂಬದಾಗಿ ಇದು ಪೂರ್ವದಿಂ ಬಂದ ಉಪದೇಶಕ್ರಮವು. ಹೀಗಿರುವಲ್ಲಿ ಈ ಅಸ್ತ್ರಸಂಪ್ರದಾಯವು ನಿನಗೆ ಯಾರಿಂದ ಉಪದೇಶವಾಯಿತೆಂದು ನಾನು ಕೇಳುತ್ತೇನೆ '' ಎಂದು ಸ್ವಾಮಿಯು ಲವನಂ ಕುಱಿತು ಕೇಳಲು ; ಲವನು–'' ಎಲೈ ಪೂಜ್ಯನೆ, ನಮ್ಮಿಬ್ಬರಿಗೂ ಈ ಜೃಂಭಕಾಸ್ತ್ರಗಳು ಸ್ವತಏವ ಪ್ರಕಾಶಿಸಿದುವೇ ಹೊಱತು ಮತ್ತೊಬ್ಬರಿಂದ ಈ ಅಸ್ತ್ರೋಪದೇಶವಾಗಲಿಲ್ಲ '' ಎಂದು ಬಿನ್ನವಿಸಲು; ಶ್ರೀರಾಮನು ಲವನಂ ನೋಡಿ, ಆಲೋಚಿಸಿ– '' ಎಲೈ ಪುತ್ರನೆ, ಈ ಅಸ್ತ್ರಮಂತ್ರಸಂಪ್ರದಾಯವು ನಿಮಗೆ ಇಬ್ಬರಿಗೂ ಸ್ವತಃ ಸಿದ್ಧವಾಗಿರುವುದೆಂಬ ಅರ್ಥವು ಏಕೆ ಸಂಭವಿಸಬಾರದು ? ಏನೋ ಒಂದು ಉತ್ಕೃಷ್ಟವಾದ ಪುಣ್ಯದಿಂ ಜನಿಸಿದ ಮಹಿಮೆಯಾಗಿರುವುದು. ಇದಂತಿರಲಿ. 'ನಮ್ಮಿಬ್ಬರಿಗೂ' ಎಂದು ನೀನೇ ಹೇಳುತ್ತೀಯೆಯಾದಕಾರಣ ನಾನು ನೀವಿಬ್ಬರಾರೆಂದು ಕೇಳುತ್ತೇನೆ '' ಎಂದು

ಹೇಳಲು ; ಲವನು–" ಎಲೈ ತಂದೆಯೇ, ನಾವಿಬ್ಬರೂ ಯಮಳಜನ್ಮದಿಂ ಜನಿಸಿರುವ ಸಹೋದರರು " ಎಂದು ಬಿನ್ನವಿಸಲು ; ಶ್ರೀರಾಮನು–" ಎಲೈ ಕುಮಾರನೇ, ಹಾಗಾದರೆ ಎರಡನೆಯ ಕುಮಾರನು ಎಲ್ಲಿ ಇದ್ದಾನೆ ? " ಎಂದು ಪ್ರಶ್ನೆಗೈಯಲು ;

ಅಷ್ಟರೊಳಗೆ ನೇಪಥ್ಯದಲ್ಲಿ ಒಬ್ಬ ಕುಮಾರನು ಇಂತೆಂದನು :–ಎಲೈ ದಾಂಡ್ಯಾಯನನೆ, ಆಯುಷ್ಮಂತನಾದ ಲವನಿಗೆ ಭೂಪತಿಸೇನೆಗಳೊಡನೆ ಕೂಡ ಯುದ್ಧವು ನಡೆಯುತ್ತಲಿದೆ ಎಂದು ನೀನು ಪೇಳುತ್ತೀಯೆಯಲ್ಲ. ಅದು ಯಥಾರ್ಥವೆಂದು ಪೇಳುತ್ತೀಯೊ ಏನು ? ಹಾಗಾದರೆ ಈ ಲೋಕಗಳಲ್ಲಿ ರಾಜಶಬ್ದವೆಂಬುದು ಅಡಗಿಹೋದೀತು ; ಮತ್ತು ಕ್ಷತ್ರಿಯನ ಶಸ್ತ್ರಾಗ್ನಿಗಳು ಈಗ ಶಾಂತಿಯನ್ನೆಯ್ದುವುವು " ಎಂದು ಶೌರ್ಯದಿಂ ಗರ್ಜಿಸಲು ;

ಶ್ರೀರಾಮನು ಅದಂ ಕೇಳಿ–" ಎಲೈ ಕುಮಾರನೆ, ಇಂದ್ರನೀಲಮಾಣಿಕ್ಯದಂತೆ ಶ್ಯಾಮಲವರ್ಣನಾಗಿರುವ ಈ ಕುಮಾರನು ನನ್ನಂ ತನ್ನ ಧ್ವನಿಯಿಂದಲೇ ರೋಮಾಂಚಯುಕ್ತನಾಗಿರುವನಾದುದಱಿಂ ನೂತನವಾದ ನೀಲಮೇಘದ ಗಂಭೀರವಾದ ಗರ್ಜನದಿಂ ಆ ಕ್ಷಣದಲ್ಲೇ ಜನಿಸಿದ ಮೊಗ್ಗುಗಳಿಂ ವ್ಯಾಪಿಸಲ್ಪಟ್ಟಿರುವ ಕದಂಬವೃಕ್ಷದ ಎಲೆಯ ರೀತಿಯುಳ್ಳವನನ್ನಾಗಿ ಮಾಡುತ್ತಲಿದ್ದಾನೆ. ಇವನು ಯಾರು ? " ಎಂದು ಪ್ರಶ್ನೆಗೈಯಲು ; ಲವನು ಸ್ವಾಮಿಯಂ ಕುಱಿತು–" ಎಲೈ ಪೂಜ್ಯನೇ, ಕುಶನೆಂಬ ನಾಮಧೇಯವುಳ್ಳ ಪೂಜ್ಯನಾದ ಈತನು ನಮ್ಮಣ್ಣನಾದವನು. ಗುರುಗಳಾದ ವಾಲ್ಮೀಕಿಮುನಿಗಳ ಆಜ್ಞೆಯಿಂದ ಭರತಮುನಿಯ ಆಶ್ರಮದಿಂ ತಿರಿಗಿ ಬಂದನು " ಎಂದು ಬಿನ್ನವಿಸಿದನು. ಅದಂ ಕೇಳಿ ಶ್ರೀರಾಮನು ಕುತೂಹಲಯುಕ್ತನಾಗಿ–" ಎಲೈ ಲವನೆ, ಇವನು ನಿಮ್ಮ ಅಣ್ಣನಾದರೆ ಈ ಚಿರಂಜೀವಿಯಂ ಇಲ್ಲಿಗೆ ಕರೆವನಾಗು " ಎಂದು ಪೇಳುವನಾಗಲು ; ಲವನು " ಹಾಗೆ ಆಗಲಿ " ಎಂದು ಕುಶನಂ ಕರೆಯುವುದಕ್ಕೆ ಪೋಗುವನಾಗಲು ;

ಆಬಳಿಕ ಕುಶನು ರಂಗಸ್ಥಾನವಂ ಪ್ರವೇಶಿಸಿದವನಾಗಿ ಸಂತೋಷಧೈರ್ಯಂಗಳೊಡನೆ ಯುಕ್ತನಾಗಿ ಧನುಷ್ಟಂಕಾರವಂ ಮಾಡಿ ಇಂತೆಂದನು :–" ಎಲೈ, ಪೂಜ್ಯನಾದ ವೈವಸ್ವತಮನುವಂ ಮೊದಲುಗೊಂಡು ದೈತ್ಯರಿಂ ಉಪದ್ರವವುಂಟಾದಲ್ಲಿ ತ್ರಿಲೋಕಾಧಿಪತಿಯಾದ ಇಂದ್ರನಿಗೂ ಕೂಡ ಅಭಯಪ್ರದಾನವಂ ಮಾಡುವವರಾಗಿ, ಜಗತ್ತಿನಲ್ಲಿ ದುಷ್ಟರಂ ದಹಿಸಲೋಸುಗ ಕ್ಷತ್ರಿಯವಾದ ತಮ್ಮ ಪ್ರತಾಪವೆಂಬ ಅಗ್ನಿಯಂ ಜ್ವಲಿಸುವಂತೆ ಮಾಡುವವರಾಗಿ, ಸೂರ್ಯವಂಶೋತ್ಪನ್ನರಾಗಿಯೂ ಇರುವ ಇಂಥ ಅರಸುಗಳೊಡನೆ ನಮಗೆ ಯುದ್ಧವುಂಟಾದುದೆಯಾದರೆ ಅದಱಿಂ ಈಗ ಪ್ರಕಾಶಯುಕ್ತಗಳಾದ ಅಸ್ತ್ರಗಳ ಪ್ರಕಾಶಿಸುವ ಭಯಂಕರಗಳಾದ ಕಿರಣಗಳ ಜ್ವಾಲೆಗಳಿಂ ನೀರಾಜನಮಾಡಲ್ಪಟ್ಟಿಹೆದೆಯುಳ್ಳ ನನ್ನ ಈ ಧನುಸ್ಸು ಸಫಲವಾಗುವುದಲ್ಲವೆ ? " ಎಂದು ಪೇಳುತ ಶೌರ್ಯದಿಂ ವಕ್ರವಾಗಿ ಅಡಿಗಳನ್ನಿಡುವವನಾಗಲು ;

ಅದಂ ನೋಡಿ ಶ್ರೀರಾಮನು–ಎಲೈ, ಈ ಕ್ಷತ್ರಿಯ ಕುಮಾರನಲ್ಲಿ ಶೌರ್ಯಾತಿಶಯವು ಆಶ್ಚರ್ಯಕರವಾಗಿ ಇದೆ. ಅದೆಂತೆನೆ :–ಈ ಕುಮಾರನ ದೃಷ್ಟಿಯು ಮೂಱುಲೋಕಂಗಳ ಬಲಸಾರವಂ ತೃಣೀಕರಿಸುತ್ತಲಿದೆ, ಮತ್ತು ಇವನ ಪಾದಗತಿಯು ಧೈರ್ಯ

ಅಹಂಕಾರ ಇವುಗಳೊಡನೆ ಕೂಡಿದುದಱಿಂ ಭೂಮಿಯಂ ಪಾತಾಳಕ್ಕೆ ಅಡಗಿಸುವಂತೆ ತೋಱುತ್ತಲಿದೆಯಾದಕಾರಣ ಬಾಲ್ಯವಯಸ್ಸಿನಲ್ಲಿಯೂ ಪರ್ವತದಂತೆ ಮಹತ್ತಾಗಿರುವ ವೀರರಸವೇ ಈ ಕುಮಾರನ ರೂಪದಿಂ ಬರುತ್ತಲಿದೆಯೊ, ಹಾಗಲ್ಲದೆ ಗರ್ವವೇ ಈರೀತಿ ಬರುತ್ತಲಿದೆಯೊ–ಎಂದು ಆಶ್ಚರ್ಯಯುಕ್ತನಾಗಲು ;

ಲವನು ಕುಶನ ಸಮೀಪವನ್ನೈದಿ–" ಪೂಜ್ಯನು ಸರ್ವೋತ್ಕೃಷ್ಟನಾಗಿರಲಿ ! " ಎಂದು ಪೇಳಿದನು. ಕುಶನು ಲವನಂ ಕುಱಿತು–" ಎಲೈ ಆಯುಷ್ಮಂತನೇ, ಯುದ್ಧವು ಯುದ್ಧವು ಎಂಬ ಈ ವೃತ್ತಾಂತವೇನು? " ಎಂದು ಪ್ರಶ್ನೆಗೈಯಲು; ಲವನು ಕುಶನಂ ಕುಱಿತು–" ಎಲೈ ಅಣ್ಣನೆ, ಈ ಯುದ್ಧವೆಂಬುದು ಸ್ವಲ್ಪ ವ್ಯಾಪಾರವು. ಇದಂತಿರಲಿ. ಪೂಜ್ಯನಾದ ನೀನು ಉದ್ಧತಭಾವವಂ ಬಿಟ್ಟು ವಿನಯವಂ ಅಂಗೀಕರಿಸಬೇಕು " ಎಂದು ಪೇಳಿದನು. ಕುಶನು–" ಏನು ನಿಮಿತ್ತ ? " ಎಂದು ಕೇಳಲು ; ಲವನು–" ರಾಜಶ್ರೇಷ್ಠನಾದ ರಘುಪತಿಯು ಇಲ್ಲಿ ಬಂದು ಇದ್ದಾನೆ. ಆ ಮಹಾತ್ಮನು ನಮ್ಮಿಬ್ಬರಲ್ಲಿಯೂ ವಾತ್ಸಲ್ಯವಂ ಮಾಡುತ್ತಲಿದ್ದಾನೆ ; ಀುತ್ತು ನಿನ್ನಂ ನೋಡಬೇಕೆಂದು ಕುತೂಹಲಯುಕ್ತನಾಗಿದ್ದಾನೆ " ಎಂದು ಪೇಳಿದನು. ಅದಂ ಕೇಳಿ ಕುಶನು–" ಎಲೈ ಆಯುಷ್ಮಂತನೆ, ರಾಮಾಯಣ ಕಥಾನಾಯಕನಾದ ಬ್ರಾಹ್ಮಣಪೋಷಕನಾದ ಆ ಸ್ವಾಮಿಯು ಬಂದು ಇದ್ದಾನೆಯೊ ಏನು ? " ಎಂದು ಕೇಳಲು ; ಲವನು–" ಹೌದು, ಆ ರಘುಪತಿಯೇ ಬಂದು ಇದ್ದಾನೆ " ಎಂದು ಪೇಳಿದನು. ಕುಶನು–" ಎಲೈ ತಮ್ಮನೆ, ನಮ್ಮಿಂದ ಬಹುತರವಾಗಿ ಪ್ರಾರ್ಥಿಸತಕ್ಕ ಪುಣ್ಯಕರವಾದ ದರ್ಶನವುಳ್ಳವನು ಆ ಮಹಾತ್ಮನು, ಹೌದು. ಮತ್ತೇನೆಂದರೆ, ನಾವು ಯಾವ ಕ್ರಮದಿಂ ಆ ಮಹಾತ್ಮನಂ ದರ್ಶನಂಗೈಯುವರಾಗಬೇಕು, ಎಂದು ಚಿಂತಿಸುತ್ತೇನೆ " ಎನಲು ; ಲವನು–" ಎಲೈ ಪೂಜ್ಯನೆ, ಗುರುವಂ ಕಾಣುವಂತೆ ಈ ಮಹಾತ್ಮನಂ ಕಾಣಬೇಕು " ಎಂದನು. ಕುಶನು–" ಈರೀತಿ ಹೇಗೆ ನಡೆಯತಕ್ಕುದು ? " ಎಂದು ಚಿಂತಿಸಲು ; ಲವನು–" ಎಲೈ ಅಣ್ಣನೆ, ಈ ಉತ್ಕೃಷ್ಟಗುಣಶಾಲಿಯಾಗಿ ಸುಜನನಾಗಿ ಊರ್ಮಿಳಾದೇವೀಪುತ್ರನಾಗಿರುವ ಚಂದ್ರಕೇತುವೆಂಬ ರಾಜಪುತ್ರನು ಪ್ರಿಯಮಿತ್ರನೆಂದು ಸ್ನೇಹದಿಂ ನನ್ನಂ ಭಾವಿಸುತ್ತಲಿದ್ದಾನೆಯಾದುದಱಿಂ ಆ ಸಂಬಂಧದಿಂದ ಈ ರಾಜಶ್ರೇಷ್ಠನು ಧರ್ಮದಿಂ ನಮಗೂ ತಂದೆಯೇ ಸರಿ. ಇದಱಲ್ಲಿ ಸಂದೇಹವಿಲ್ಲ " ಎಂದು ಪೇಳಲು ; ಕುಶನು–" ಹಾಗಾದರೆ ಈಗ ಈ ಅರಸಿನಲ್ಲಿ ವಿನಯವನ್ನಾಚರಿಸುವುದು ದೋಷವಲ್ಲ " ಎಂದು ಪೇಳಿ, ಅಲ್ಲಿಂದ ಇಬ್ಬರೂ ಸ್ವಾಮಿಯ ಸಮೀಪವನ್ನೈದುವರಾಗಲು ; ಲವನು–" ಎಲೈ ಅಣ್ಣನೆ, ಆಕೃತಿಯಿಂ ಅಂಗವ್ಯಾಪಾರಂಗಳಿಂ ಗಾಂಭೀರ್ಯದಿಂದಲೂ ಚೆನ್ನಾಗಿ ಭಾವಿಸಲು ಯೋಗ್ಯಗಳಾಗಿ ಅನೇಕಪ್ರಕಾರಂಗಳಾಗಿ ಲೋಕೋತ್ತರಗಳಾಗಿಯೂ ಇರುವ ಉತ್ಕೃಷ್ಟಗಳಾದ ಚರಿತ್ರೆಗಳುಳ್ಳ ಈ ಮಹಾಪುರುಷನಂ ಪೂಜ್ಯನಾದ ನೀನು ನೋಡುವನಾಗು " ಎಂದನು.

ಆಬಳಿಕ ಕುಶನು ಸ್ವಾಮಿಯಂ ಚೆನ್ನಾಗಿ ನೋಡಿ–" ಎಲೈ, ಈ ಮಹಾಪುರುಷನ ರೂಪು ಅತಿಪ್ರಸನ್ನವಾಗಿ ಇದೆ. ಕಟಾಕ್ಷವೀಕ್ಷಣ ಮೊದಲಾದ ಅಂಗವ್ಯಾಪಾರವಿಶೇಷಂಗಳು ಕೂಡ ಅತ್ಯಂತಪಾವನವಾಗಿ ಇವೆ. ರಾಮಾಯಣವೆಂಬ ಮಹಾಕಾವ್ಯವಂ

ರಚಿಸಿರುವ ವಾಲ್ಮೀಕಿಮುನಿಯು ಇಂಥ ಉತ್ತಮಪುರುಷನಲ್ಲಿ ತನ್ನ ವಾಕ್ಯಂ ಸಮರ್ಪಿಸಿ ದನೆಂಬುದು ಯುಕ್ತವೇ ಸರಿ '' ಎಂದು ಆಶ್ಚರ್ಯಪಡುತ್ತ, ಸಮೀಪವನ್ನೈದಿ, '' ಎಲೈ ತಂದೆಯೇ, ವಾಲ್ಮೀಕಿಮುನಿಯ ಶಿಷ್ಯನಾದ ಕುಶನು ನಿಮ್ಮ ಚರಣಂಗಳಿಗೆ ಅಭಿವಾದ ನವಂ ಮಾಡುತ್ತಾನೆ '' ಎಂದು ಕುಶನು ವಂದಿಸಲು ; ಶ್ರೀರಾಮನು ಕುಶನಂ ಕುಱಿತು—'' ಎಲೈ ಆಯುಷ್ಮಂತನೆ, ಇಲ್ಲಿ ಬಾರೈ. ಅಮೃತದಿಂ ಪೂರಿಸಲ್ಪಟ್ಟ ಮೇಘದಂತೆ ಮಿಂಚುತ್ತಲಿರುವ ನಿನ್ನ ದೇಹವಂ ಆಲಿಂಗನಂಗೈಯಲೋಸುಗ ಈ ನಾನು ವಾತ್ಸಲ್ಯದಿಂ ಕುತೂಹಲಯುಕ್ತನಾಗುತ್ತಲಿದ್ದೇನೆ '' ಎನುತ, ಕುಶನಂ ಆಲಿಂಗನಂಗೈದು, ಸುಖದಿಂ ಪರವಶನಾಗಿ ಇಂತೆಂದನು :—'' ಎಲೈ, ಯಾವಕಾರಣದಿಂ ಪರಿಪೂರ್ಣವಾದ ಆನಂದದಿಂ ವ್ಯಾಕುಲವಾದ ಹೃದಯವು ದ್ರವಿಸುವುದಱಿಂ ಸರಸವಾದ ಈ ಕುಮಾರನ ದೃಢವಾದ ಆಲಿಂಗನವು ನನಗೆ ಹಿಮಸಾರವನ್ನು ಹಿಂಡಿದಂತೆ ಅತಿಶೀತಳವಾಗಿ ತಾಪವಂ ಪರಿಹರಿಸುವುದೊ ಅದುಕಾರಣ ಈ ಕುಮಾರನು ನನ್ನ ಸ್ನೇಹದಿಂ ಜನಿಸಿದ ದೇಹಸಾರವು ನನ್ನ ಅಂಗದಿಂ ಮತ್ತೊಂದು ಅಂಗವನ್ನೈದಿ ಅಲ್ಲಿಂದ ಹೊಱಕ್ಕೆ ಪ್ರಸರಿಸಿದಂತೆಯೂ ಮತ್ತು ದೇಹದ ಒಳಗೆ ಇರುವ ಒಂದು ಚೈತನ್ಯವಾದ ಧಾತುವು ಹೊಱಕ್ಕೆ ಆವಿರ್ಭವಿಸಿ ಈರೀತಿ ನಿಂತಿರುವುದೊ ಎನುತಲೂ ಬುದ್ಧಿಗೆ ತೋಱುತ್ತಲಿದ್ದಾನೆ. ಇದಕ್ಕೆ ನಿಮಿತ್ತವೇನೊ ? '' ಎಂಬದಾಗಿ ಶ್ರೀರಾಮನು ಮನಸ್ಸಿನಲ್ಲಿ ಚಿಂತಿಸುತ್ತಲಿರಲು ; ಲವನು—'' ಎಲೈ ಪೂಜ್ಯನೆ, ಈಗ ಮಧ್ಯಾಹ್ನವಾದುದಱಿಂ ಸೂರ್ಯನು ಲಲಾಟಸ್ಥಾನವಂ ತಪಿಸುವಂತೆ ಮಾಡುತ್ತಲಿದ್ದಾನೆಯಾದಕಾರಣ ತಂದೆಯಾದ ನೀನು ಈ ಸಾಲವೃಕ್ಷದ ಛಾಯೆಯಲ್ಲಿ ಒಂದು ಮುಹೂರ್ತಮಾತ್ರವು ಕುಳಿತು ವಿಶ್ರಮಿಸಿಕೊಳ್ಳುವನಾಗು '' ಎಂದು ಬಿನ್ನವಿಸಿದನು.

ಶ್ರೀರಾಮನು—'' ಎಲೈ ಪುತ್ರನೆ, ನಿನಗೆ ತೋಱಿದಂತೆ ಆಗಲಿ '' ಎಂದು ಅಲ್ಲಿಂದ ತಿರಿಗಿದವನಾಗಲು ; ಎಲ್ಲರೂ ಆ ವೃಕ್ಷಛಾಯೆಯಲ್ಲಿ ಮರ್ಯಾದಾನುಸಾರವಾಗಿ ಕುಳಿತವರಾಗುತ್ತಿರಲು ;

ಶ್ರೀರಾಮನು ಆ ಕುಮಾರರಂ ನೋಡಿ ತನ್ನ ಮನಸ್ಸಿನಲ್ಲಿ ಇಂತೆಂದು ಚಿಂತಿಸಿದನು— ಎಲೈ, ಈ ಬಾಲಕರಿಗೆ ವಿನಯಾತಿಶಯವು ಇರುವಂತೆ ನಿಂತಿರುವ ವೈಖರಿಯು ಕುಳಿತಿರುವ ವೈಖರಿಯು ಸಹ ಇವು ಮೊದಲಾಗಿರುವ ಸಾಮ್ರಾಜ್ಯಸೂಚಕಂಗಳಾದ ಭಾವಂಗಳು ಕುಶನಲ್ಲಿ ಲವನಲ್ಲಿ ಸಹ ಪ್ರಕಾಶಮಾನಗಳಾಗಿವೆ. ಮತ್ತು ಕಳಂಕರಹಿತನಾದ ಬಾಲಚಂದ್ರನಲ್ಲಿ ಯಾವ ರೀತಿ ಸ್ವಕೀಯಗಳಾದ ಕಿರಣಗಳು ಪ್ರತಿಕ್ಷಣದಲ್ಲಿಯೂ ರಮಣೀಯವಾದ ಕಾಂತಿಯಂ ವೃದ್ಧಿಯನ್ನೈದಿಸುವುವೊ ಆರೀತಿ ಈ ಕುಮಾರರ ದೇಹದಲ್ಲಿ ಲಕ್ಷ್ಮೀವಿಲಾಸಂಗಳು ಒಂದಂ ಬಿಟ್ಟು ಒಂದು ಇರದಂತೆ ಎಲ್ಲವೂ ಪರಸ್ಪರ ಕೂಡಿದಂಥವಾಗಿಯೇ ಪ್ರತಿಕ್ಷಣದಲ್ಲಿಯೂ ರಮಣೀಯವಾದ ಕಾಂತಿವಿಶೇಷವಂ ವೃದ್ಧಿಯನ್ನೈದಿಸುತ್ತಲಿವೆ. ಈ ಬಾಲಕರಲ್ಲಿ ಬಹುತರವಾಗಿ ರಘುಕುಲೋತ್ಪನ್ನರಾದ ಕುಮಾರರ ಲಕ್ಷಣಂಗಳನ್ನೇ ನಾನು ನೋಡುತ್ತೇನೆ. ಅದೆಂತೆನೆ :—ವೃಷಭನ ಹಿಳಲಿನಂತೆ ಅತ್ಯುನ್ನತಗಳಾದ ಹೆಗಲುಗಳುಳ್ಳ ಈ ಕುಶಲವರ ದೇಹವು ಯೌವನಯುಕ್ತವಾದ ಕಪೋತಪಕ್ಷಿಯ ಕಂಠದಂತೆ ಶ್ಯಾಮಲವರ್ಣವಾಗಿ, ದೃಷ್ಟಿವಿಲಾಸವು ಪ್ರಸನ್ನವಾಗಿರುವ ಸಿಂಹದ ದೃಷ್ಟಿಯಂತೆ ನಿಶ್ಚಲವಾಗಿ

ಇದೆ. ಇವರ ಧ್ವನಿಯೂ ಕೂಡ ಶುಭಕರವಾದ ಮೃದಂಗದ ಶಬ್ದದಂತೆ ಅತಿಗಂಭೀರವಾಗಿ ಇದೆ, ಎಂದು ಭಾವಿಸುತ್ತ, ಅವರಂ ಚೆನ್ನಾಗಿ ನೋಡಿ, ಪುನಃ ಇಂತೆಂದು ಚಿಂತಿಸಿದನು :– ಎಲೈ ಈ ಬಾಲಕರ ಆಕೃತಿಯು ನಮ್ಮ ವಂಶದಲ್ಲಿ ಜನಿಸಿದವರ ಲಕ್ಷಣಗಳಂ ಮಾತ್ರವೆ ಸೂಚಿಸುವುದಿಲ್ಲ; ಮತ್ತೇನೆಂದರೆ:–ಇವರಿಬ್ಬರಲ್ಲಿ ಇರುವ ಆಯಾಯ ಈ ಲಕ್ಷಣಗಳು ದೃಷ್ಟಿಸಿ ಚಾತುರ್ಯಗಳಿಂ ಊಹಿಸಿದರೆ ವ್ಯಕ್ತವಾಗಿ ಸೀತೆಯಲ್ಲಿರುವ ಲಕ್ಷಣಂಗಳಿಗೆ ಅನುರೂಪಾಗಿ ರುವಂತೆ ತೋಱುತ್ತಲಿವೆ. ಮತ್ತು ಇವರ ಮುಖವಂ ನೋಡಿದರೆ ನೂತನವಾದ ಕಮಲ ದಂತೆ ಪೊಳೆಯುವ ಪ್ರಿಯಳಾದ ಸೀತೆಯ ಮುಖವು ಪುನಃ ನನ್ನ ನೇತ್ರಗಳಿಗೆ ಪ್ರತ್ಯಕ್ಷವಾ ದಂತೆ ತೋಱುತ್ತಲಿದೆಯಲ್ಲವೆ ? ಅದೆಂತೆನೆ:–ಶುಭ್ರಗಳಾಗಿ ನಿರ್ಮಲಗಳಾಗಿಯೂ ಇರುವ ದಂತಗಳ ಕಾಂತಿಯಿಂ ಅತಿಸುಂದರವಾದ ಈ ಬಾಲಕರ ತುಟಿಗಳಿರುವ ರೀತಿಯು ಸೀತೆಯ ಮುಖದಲ್ಲಿ ಯಾವರೀತಿ ಇದೆಯೊ ಅದೇರೀತಿ ತೋಱುತ್ತಲಿದೆ ; ಪಾಶದಂತೆ ಇರುವ ಕರ್ಣಂಗಳು ಅದೇರೀತಿ ಇವೆ, ನೇತ್ರಂಗಳು ಮಾತ್ರ ಮಧ್ಯದಲ್ಲಿ ನೀಲವರ್ಣಗ ಳಾಗಿ ತುದಿಯಲ್ಲಿ ರಕ್ತವರ್ಣಗಳಾಗಿ ಇದ್ದರೂ, ಸೌಂದರ್ಯ ಗುಣಸಂಪತ್ತೆಲ್ಲವು ಅದೇ ರೀತಿ ಇರುವುದೇ ಹೊಱತು ಮತ್ತೊಂದಿಲ್ಲ ಎಂದು ಭಾವಿಸುತ, ಶ್ರೀರಾಮನು ಪುನಃ ಇಂತೆಂದು ಚಿಂತಿಸಿದನು :–ಎಲೈ, ಯಾವ ವಾಲ್ಮೀಕಿಮುನಿಯ ತಪೋವನದಲ್ಲಿ ಸೀತಾ ದೇವಿಯು ತ್ಯಾಗಂಗೈಯಲ್ಪಟ್ಟಳೊ ಆ ವಾಲ್ಮೀಕಿಮುನಿಯು ಇರುವ ತಪೋವನವೇ ಇದ ಲ್ಲವೆ ? ಮತ್ತು ಈ ಬಾಲಕರ ಆಕೃತಿಯು ಈರೀತಿ ಸೀತೆಯಂ ಪೋಲುವುದಾಗಿ ಇದೆ. ಇವರ ವಯಸ್ಸು ಹನ್ನೆರಡು ವರ್ಷಂಗಳಾಗಿ ಇದೆ. ಕಟಾಕ್ಷವೀಕ್ಷಣ ವೊದಲಾದ ಅಂಗ ವ್ಯಾಪಾರಂಗಳು ಈರೀತಿಯಲ್ಲಿವೆ. ಇದಲ್ಲದೆ ಈ ಬಾಲಕನು ನಮಗೆ ಜೃಂಭಕಾಸ್ತ್ರಗಳು ಸ್ವತಏವ ಪ್ರಕಾಶಮಾನಗಳಾಗಿ ಇವೆ ಎಂದು ಪೇಳಿದನು : ಎಂಬುದು ಯಾವುದುಂಟೊ ಅದಱಲ್ಲೂ ಒಂದು ಕಾರಣವಂ ಸ್ಮರಿಸುತ್ತೇನೆ. ಅದೇನೆಂದರೆ:–ಪೂರ್ವದಲ್ಲಿ ಪೂರ್ಣಗ ರ್ಭಿಣಿಯಾದ ಸೀತೆಯ ಮನಸ್ಸಂತೋಷಾರ್ಥವಾಗಿ ಚಿತ್ರಶಾಲೆಯಲ್ಲಿ ಬರೆದಿರುವ ನಮ್ಮ ಚರಿತ್ರವಂ ತೋಱಿಸುವ ಸಮಯದಲ್ಲಿ ಸೀತೆಯು ಜೃಂಭಕಾಸ್ತ್ರದೇವತೆಗಳಂ ನೋಡಿ, ಇವರಾರೆಂದು ಕೇಳಲು ; ನಾನು–" ಎಲೌ ಪ್ರಿಯಳೆ. ಇವರು ಜೃಂಭಕಾಸ್ತ್ರದೇವತೆ ಗಳು ; ಇವರಿಗೆ ನೀನು ವಂದಿಸುವಳಾಗು. ಸರ್ವಪ್ರಕಾರದಿಂದಲೂ ಈ ಅಸ್ತ್ರಗಳು ನಿನ್ನ ಪುತ್ರಜನನವನ್ನು ಅಪೇಕ್ಷಿಸಿಕೊಂಡು ಇರುವುವು " ಎಂದು ಸೀತೆಯಂ ಕುಱಿತು ಪೇಳಿದೆ ನಾದಕಾರಣ ಆ ನನ್ನ ಉಪದೇಶರೂಪವಾದ ಅನುಜ್ಞೆಯಿಂದ ಈ ಕುಮಾರರಿಗೆ ಸ್ವತಏವ ಈ ಅಸ್ತ್ರವಿದ್ಯೆಯು ತೋಱಿದಂಥದಾಗಿ ಇದ್ದೀತು. ಪೂರ್ವಿಕರಾದ ಋಷಿಗಳಿಗೂ ಕೂಡ ಗುರೂಪದೇಶವಂ ಹೊಱತು ಅಸ್ತ್ರಗಳು ಸ್ವಾಧೀನವಾಗವೆಂದು ನಾವು ಕೇಳಿದ್ದೆವಲ್ಲ ; ಆದುದಱಿಂ ಈರೀತಿ ತೋಱುವ ಸುಖದುಃಖಾತಿಶಯಗಳುಳ್ಳುದಾಗಿ ಮನಸ್ಸಿಗೆ ಒಂದು ನಿಶ್ಚಯವುಂಟಾಗಿದೆ. ಮತ್ತು ಈ ಬಾಲಕರು ಅವಳಿಗಳಾಗಿ ಇದ್ದಾರೆ–ಎಂಬ ಅರ್ಥದ ಲ್ಲಿಯೂ ನನಗೆ ಅತ್ಯಂತಸಮ್ಮತವಾಗಿ ಒಂದು ಕಾರಣವುಂಟು. ಅದೇನೆಂದರೆ :–ಸೀತೆಗೆ ಆಗ ಇದ್ದಂಥ ಗರ್ಭಿಣೀಭಾವವು ಎರಡು ಮಕ್ಕಳು ಗರ್ಭದಲ್ಲಿ ಇರುವಂತೆ ಚಿಹ್ನೆಗಳುಳ್ಳು ದಾಗಿ ಇದ್ದಿತಲ್ಲವೆ ? " ಎನುತ ಕಣ್ಣೀರೊಡಗೂಡಿ ಪುನಃ ಇಂತೆಂದನು :–" ಎಲೈ ಪರಿಚ

ಯವು ಅಧಿಕವಾದುದಱಿಂ ಸ್ನೇಹವು ಸರ್ವೋತ್ಕೃಷ್ಟವಾಗಿ ವೃದ್ಧಿಯನ್ನೈದಲು, ಏಕಾಂತಕಾಲದಲ್ಲಿ ವಿಶ್ವಾಸಯುಕ್ತಳಾಗಿ ಇದ್ದರೂ ಸ್ವಭಾವಸಿದ್ಧವಾಗಿರುವ ಲಜ್ಜೆಯಿಂದ ಚಂಚಲಗಳಾದ ನೇತ್ರವುಳ್ಳವಳಾಗಿ ಇರುವ ಸೀತೆಯ ಗರ್ಭಗ್ರಂಥಿಯು ನನ್ನ ಹಸ್ತದಿಂ ಸ್ಪೃಶಿಸಿ ನೋಡುವುದಱಿಂದ ಎರಡು ಬಗೆಯಾಗಿ ಇರುವುದನ್ನಾಗಿ ಮೊದಲು ನಾನು ತಿಳಿದೆನು. ಆಬಳಿಕ ಮತ್ತು ಕೆಲವು ದಿವಸಗಳಿಂದ ಆ ಸೀತೆಯೂ ಕೂಡ ತನ್ನ ಗರ್ಭಗ್ರಂಥಿಯು ಎರಡು ಬಗೆಯಾಗಿ ಇದೆ ಎಂದು ತಿಳಿದಳು'' ಎಂದು ಸ್ಮರಿಸಿ ದುಃಖಿತನಾಗಿ– ಎಲೈ ನಾನು ಈರೀತಿ ಏಕೆ ನಾನಾಪ್ರಕಾರವಾಗಿ ಚಿಂತಿಸಲಿ? ಈ ಬಾಲಕರಂ ಒಂದಾನೊಂದು ಉಪಾಯದಿಂ ಕೇಳಿ ತಿಳಿಯೋಣ ಎಂಬದಾಗಿ ಈ ರೀತಿ ಶ್ರೀರಾಮನು ಮನಸ್ಸಿನಲ್ಲಿ ಚಿಂತಿಸುತ್ತಿರಲು ; ಲವನು ಸ್ವಾಮಿಯಂ ಕುಱಿತು–'' ಎಲೈ ತಂದೆಯೇ, ಇದೇನು ಜಗತ್ತಿಗೆ ಮಂಗಳಕರವಾದ ನಿಮ್ಮ ಮುಖವು ಕಣ್ಣೀರುಗಳಿಂ ಹಿಮಬಿಂದುಗಳಿಂದ ನನೆಸಲ್ಪಟ್ಟ ಕಮಲದ ರೀತಿಯನ್ನೈದುತ್ತಲಿದೆ ?'' ಎಂದು ಪ್ರಶ್ನೆಗೆಯ್ಯಲು ; ಕುಶನು ಲವನಂ ಕುಱಿತು–'' ಎಲೈ ತಮ್ಮನೆ, ರಘುಕುಲಶ್ರೇಷ್ಠನಾದ ಈ ಪೂಜ್ಯನಿಗೆ ಸೀತಾದೇವಿಯ ವಿರಹದಿಂದ ಜಗತ್ತಿನಲ್ಲಿ ಯಾವುದು ದುಃಖಕರವಾಗುವುದಿಲ್ಲ? ಸಕಲವೂ ದುಃಖಕಾರಣವೇ ಆಗುತ್ತಲಿದೆ. ಲೋಕದಲ್ಲಿ ಪುರುಷನಿಗೆ ಇಷ್ಟವಾದ ಪತ್ನಿಯು ನಾಶವನ್ನೈದಿದರೆ ಜಗತ್ತೆಲ್ಲವೂ ಅರಣ್ಯವಾಗಿ ತೋಱುತ್ತಲಿರುವುದಲ್ಲವೆ? ಅದಱಲ್ಲಿಯೂ ಸ್ವಾಮಿಗೆ ಸೀತಾವಿಷಯದಲ್ಲಿರುವ ಸ್ನೇಹವು ಸರ್ವಾತಿಶಯವಾದುದು. ಈಗ ಉಂಟಾಗಿರುವ ವಿರಹವಾದರೋ ಪಾರವಿಲ್ಲದೆ ಇರುವಂಥದು. ಹೀಗಿರುವಲ್ಲಿ ನೀನು ರಾಮಾಯಣದ ಅರ್ಥವಂ ತಿಳಿಯದವನಂತೆ ಸ್ವಾಮಿಯಂ ಈರೀತಿ ದುಃಖನಿಮಿತ್ತವೇನೆಂದು ಏಕೆ ಕೇಳುತ್ತೀಯೋ'' ಎಂದು ಪೇಳಿದನು. ಶ್ರೀರಾಮನು ಆ ಕುಶನ ವಚನವಂ ಕೇಳಿ ತನ್ನ ಮನಸ್ಸಿನಲ್ಲಿ– ಎಲೈ, ಈ ಕುಶನ ವಚನವಂ ಕೇಳಲಾಗಿ, ಸೀತೆ ಯಾರೋ ಇವನು ಯಾರೋ ಎಂದು ತಟಸ್ಥಭಾವವೇ ತೋಱುವುದೇ ಹೊಱತು ಸೀತೆಗೂ ಈ ಕುಮಾರರಿಗೂ ಮಾತೃಪುತ್ರಭಾವವು ತೋಱುವುದಿಲ್ಲ. ಹೀಗಿರುವಲ್ಲಿ ಈಗ ನಾನು ಈ ಬಾಲಕರಂ ಉಪಾಯದಿಂ ಕೇಳಿ ಮನಸ್ಸಿಗೆ ತೋಱಿದ ಅರ್ಥವಂ ನಿಶ್ಚೈಸತಕ್ಕುದಲ್ಲ. ಎಲೈ ಮೂಢವಾದ ಹೃದಯವೇ, ಆಕಸ್ಮಿಕವಾಗಿ ಏನೋ ತೋಱಿದ ಇಷ್ಟಾರ್ಥವಂ ಊಹಿಸುವುದಱಲ್ಲಿ ನಿನಗೆ ಅಧಿಕಾರವು ಏನು ಇದೆ? ಈರೀತಿ ಭೇದಿಸಲ್ಪಟ್ಟ ಹೃದಯವೇದನಾತಿಶಯವುಳ್ಳವನಾಗಿ ನಾನು ಈ ಶಿಶುಗಳಿಂದಲೂ ಕೂಡ ದಯಾವಿಷಯನಾಗಿ ಮಾಡಲ್ಪಡುತ್ತೇನೆ. ಆಗಲಿ, ಪ್ರಕೃತದಲ್ಲಿ ಈ ದುಃಖಪ್ರಸ್ತಾಪವಂ ಮಱೆಮಾಡುತ್ತೇನೆ ಎಂದು ಮನಸ್ಸಿನಲ್ಲಿ ಚಿಂತಿಸಿ, ಬಳಿಕ ಪ್ರಕಟವಾಗಿ ಕುಶಲವರಂ ಕುಱಿತು–''ಎಲೈ ಆಯುಷ್ಮಂತರೆ, ಪೂಜ್ಯನಾದ ವಾಲ್ಮೀಕಿಮುನಿಯ ಮುಖದಿಂದ ಆವಿರ್ಭವಿಸಿದ ಸರಸ್ವತೀಪ್ರವಾಹವಾಗಿ ರಾಮಾಯಣ ರಾಮಾಯಣವೆಂಬದಾಗಿ ಸೂರ್ಯವಂಶವಂ ವರ್ಣಿಸುವ ಒಂದು ಮಹಾಕಾವ್ಯವು ಇದೆ ಎಂದು ನಾವು ಕೇಳುತ್ತಲಿದ್ದೇವೆ. ಈಗ ನಾನು ಕುತೂಹಲದಿಂ ಆ ಕಾವ್ಯದಲ್ಲಿ ಸ್ವಲ್ಪ ಕೇಳಬೇಕೆಂದು ಇಚ್ಛೈಸುತ್ತಲಿದ್ದೇನೆ'' ಎಂದು ಶ್ರೀರಾಮನು ಪೇಳಲು ; ಕುಶನು ಸ್ವಾಮಿಯಂ ಕುಱಿತು–''ಎಲೈ ಪೂಜ್ಯನೆ, ಆ ರಾಮಾಯಣದಲ್ಲಿ ನಾವು ಸಕಲಸಂದರ್ಭವಂ ಆವೃತ್ತಿಯಂ ಮಾಡಲಿಲ್ಲ.

ಅದಱಲ್ಲಿ ಬಾಲಕಾಂಡದ ಕೊನೆಯಲ್ಲಿರುವ ಎರಡು ಶ್ಲೋಕಗಳು ಸ್ಮೃತಿಗೆ ಬಂದುವು'' ಎಂದು ಬಿನ್ನವಿಸಲು; ಶ್ರೀರಾಮನು-''ಎಲೈ ಬಾಲಕರಿರಾ, ಆ ಶ್ಲೋಕಂಗಳಂ ಪೇಳಿ'' ಎಂದು ಆಜ್ಞಾಪಿಸಲಾಗಿ ; ಕುಶನು ಆಯೆರಡು ಶ್ಲೋಕಂಗಳ ಅರ್ಥವಂ ವಿಜ್ಞಾಪಿಸಿದನು. ಅದೆಂತೆನೆ :-ಆಜನ್ಮ ಪರಿಶುದ್ಧಳಾದ ಸೀತಾದೇವಿಯು ಶ್ರೀರಾಮನಿಗೆ ತಮ್ಮ ತಂದೆಯಾದ ದಶರಥಮಹಾರಾಯನಿಂ ವಿವಾಹವಂ ಮಾಡಿಸಲ್ಪಟ್ಟ ಪತ್ನಿಯೆಂಬ ಅಭಿಮಾನದಿಂ ಇಷ್ಟಳಾಗಿರುವಳು. ಮತ್ತು ಸೌಶೀಲ್ಯ ಮೊದಲಾದ ಆತ್ಮಗುಣಗಳಿಂ ಸೌಂದರ್ಯ ಮೊದಲಾದ ದೇಹಗುಣಗಳಿಂದಲೂ ಸೀತಾದೇವಿಯಲ್ಲಿ ಶ್ರೀರಾಮನಿಗೆ ಪ್ರೀತಿಯು ಅತ್ಯಂತವಾಗಿ ಬಳೆಯುತ್ತಲಿರುವುದು. ಅದೇ ರೀತಿ ಸೀತಾದೇವಿಗೆ ಶ್ರೀರಾಮನು ಪ್ರಾಣಗಳಿಗಿಂತಲೂ ಅತಿ ಪ್ರಿಯನಾದವನು. ಈ ಸೀತಾರಾಮರಿಬ್ಬರಿಗೂ ಪರಸ್ಪರವಾಗಿರುವ ಪ್ರೇಮಾತಿಶಯವಂ ಅವರಿಬ್ಬರ ಹೃದಯವೇ ಬಲ್ಲದು ಹೊಱತು ಮತ್ತೊಬ್ಬರಱಿಯರು-ಎಂಬದಾಗಿ ಕುಶನು ಆ ಶ್ಲೋಕಾರ್ಥಗಳಂ ಶ್ರವಣಂಗೈಸಲು ; ಶ್ರೀರಾಮನು ಅದಂ ಕೇಳಿ ಇಂತೆಂದನು :-

'' ಎಲೈ, ಈ ಶ್ಲೋಕಾರ್ಥಗಳ ಶ್ರವಣದಿಂ ಹೃದಯಕ್ಕೆ ಉಂಟಾದ ಮರ್ಮಚ್ಛೇದವು ಕಟಕಟಾ ! ಅತಿದುಸ್ಸಹವಾಗಿ ಇದೆ. ಹಾ ! ಎಲೌ ಪ್ರಿಯಳೇ ! ಪೂರ್ವದಲ್ಲಿ ನಾವು ಇದೇ ರೀತಿ ಪರಸ್ಪರ ಪ್ರೇಮಾನುಬಂಧದಿಂ ಏಕಹೃದಯರಾಗಿ ಇದ್ದೆವಲ್ಲವೆ! ಕಟಕಟಾ ! ಎಲೌ ಪ್ರೀಯಳೆ ! ನಿನ್ನ ಸಂಸಾರವೃತ್ತಾಂತಗಳು ಕೊನೆಮೊದಲು ಇಲ್ಲದಿರುವ ವಿರಹವುಳ್ಳವಾದಕಾರಣ ಸ್ಮರಿಸಿಕೊಳ್ಳುವುದಕ್ಕೆ ಮಾತ್ರವೇ ವಿಷಯಗಳಾದುವಲ್ಲಾ ! ನಮಗೆ ಪುನಃ ಅಂಥ ಆನಂದವುಂಟಾಗುವುದೆಲ್ಲಿ ? ಇನ್ನು ಸರ್ವಾತಿಶಯವಾದ ವಿಶ್ವಾಸದಿಂ ಪರಿಪೂರ್ಣವಾದ ಆ ಪರಸ್ಪರ ಪ್ರೇಮಾತಿಶಯವೆಲ್ಲಿ ಸಂಭವಿಸೀತು ! ಇನ್ನು ಪಾರವಿಲ್ಲದಿರುವ ಕುತೂಹಲರಸಗಳು ಎಲ್ಲಿ ಘಟಿಸುವುವು ! ಸುಖದಶೆಯಲ್ಲಾದರೂ ದುಃಖದಶೆಯಲ್ಲಾದರೂ ಆರೀತಿ ಹೃದಯಗಳೆರಡೂ ಒಂದಾಗಿರುವುದು ಎಲ್ಲಿ ಸಂಭವಿಸೀತು ! ಇವುಗಳಲ್ಲಿ ಒಂದು ಸಂಭವಿಸಲಾಱದಾದಕಾರಣ ನಮ್ಮ ಸಂಸಾರವೃತ್ತಾಂತಗಳೆಲ್ಲವೂ ಸ್ಮರಿಸುವುದಕ್ಕೆ ಮಾತ್ರವೇ ಯೋಗ್ಯಗಳಾದುವು ! ಹಾಗಾದರೂ ಈ ದುಷ್ಟವಾದ ಪ್ರಾಣವು ಈ ದೇಹದಲ್ಲಿ ಚಲಿಸುತ್ತಲಿದೆಯೆ ಹೊಱತು ನಾಶವನ್ನೈದುವುದಿಲ್ಲ. ಅಹೊ ! ಇದು ಕಷ್ಟವಲ್ಲವೆ ! ಅದೇನೆಂದರೆ :-ಪ್ರಿಯಳಾದ ಸೀತೆಯ ಅನೇಕ ಸಹಸ್ರಂಗಳಾದ ಗುಣಗಳಂ ಕ್ರಮದಿಂ ವಿಕಾಸಂಗೈಯುವುದಱಲ್ಲಿ ಉದ್ಯುಕ್ತವಾಗಿರುವುದಾದಕಾರಣ ಯಾವ ಕಾಲವೇ ದುಸ್ಸಹವಾಗಿರುವುದೊ ಈ ಶ್ಲೋಕಾರ್ಥದ ಶ್ರವಣದಿಂ ಸಹಿಸಲಶಕ್ಯವಾದ ಅಂಥ ಕಾಲವನ್ನೇ ಈಗ ನಾವು ಸ್ಮರಿಸಿಕೊಂಡೆವು. ಯಾವ ಕಾಲದಲ್ಲಿ ಸ್ವಲ್ಪವಾಗಿ ಮೊಳೆಯುತ್ತಲಿರುವ ಸೀತೆಯ ಮೊಗ್ಗುಗಳಂತೆ ಇರುವ ಆ ಕುಚಗಳು ಕೆಲವು ದಿವಸಗಳಿಂದ ವಿಸ್ತರಿಸಿಕೊಂಡಂಥವಾದುವೊ, ಮತ್ತು ಯಾವ ಕಾಲದಲ್ಲಿ ಯೌವನವು ಸ್ನೇಹವು ಉತ್ಸಾಹವು ಸಹ-ಇವುಗಳ ಸಂಬಂಧದಿಂ ಪ್ರಬಲವಾಗಿರುವ ಮನ್ಮಥನು ಹೃದಯದಲ್ಲಿ ಪ್ರೌಢವ್ಯಾಪಾರವುಳ್ಳವನಾಗಿ ದೇಹದಲ್ಲಿ ಮನೋಹರವಾಗಿಯೂ ಪ್ರಕಾಶಿಸುತ್ತಲಿರುವನೋ ಅಂಥ ಆ ಕಾಲವನ್ನೇ ಈಗ ನಾವು ಸ್ಮರಿಸಿದೆವು-ಎಂಬದಾಗಿ ಶ್ರೀರಾಮನು ಮನಸ್ಸಿನಲ್ಲಿ ಪೂರ್ವ ಸುಖವಂ ಸ್ಮರಿಸುತ್ತಲಿರಲು ; ಲವನು ಸ್ವಾಮಿಯಂ ಕುಱಿತು-'' ಎಲೈ ಪೂಜ್ಯ

ನೆ, ರಾಮಾಯಣದಲ್ಲಿ ಚಿತ್ರಕೂಟಪರ್ವತದಲ್ಲಿರುವ ಮಂದಾಕಿನಿಯೆಂಬ ನದಿಯ ತೀರದಲ್ಲಿ ವಿಹರಿಸುವ ಕಾಲದಲ್ಲಿ ಸೀತೆಯಂ ಕುಱಿತು ರಘುಪತಿಯು ಪೇಳಿದ ಈ ಶ್ಲೋಕಾರ್ಥವಂ ನೀನು ಕೇಳಬೇಕು. ಅದೇನೆಂದರೆ :—ಎಲೌ ಸೀತೆಯೇ, ಯಾವ ಶಿಲೆಗೆ ಸುತ್ತಲೂ ನಾಗಕೇಸರವೆಂಬ ವೃಕ್ಷವು ತನ್ನ ಪುಷ್ಪಗಳಂ ವರ್ಷಿಸಿದಂತೆ ಇರುವುದೊ, ಮಂಚದಂತೆ ವಿಶಾಲವಾಗಿರುವ ಆ ಶಿಲೆಯು ನೀನು ಪವಡಿಸಲೋಸುಗ ಹಾಸಿರುವಂತೆ ಇದೆ : ನೋಡು '' ಎಂದಾಗಿ ಲವನು ಶ್ಲೋಕಾರ್ಥವಂ ವಿವರಿಸಲು ; ಅದಂ ಕೇಳಿ ಶ್ರೀರಾಮನು ಲಜ್ಜೆಯೊಡನೆ ಹಾಸ್ಯದೊಡನೆ ಸ್ನೇಹದೊಡನೆಯೂ ದೈನ್ಯದೊಡನೆಯೂ ಕೂಡಿದವನಾಗಿ—ಎಲೈ, ಶಿಶುಗಳೆಂಬವರು ಅತಿಮೂಢರಲ್ಲವೆ ? ಅವಱಲ್ಲಿಯೂ ಇವರು ವಿಶೇಷದಿಂ ಅರಣ್ಯಚಾರಿಗಳು ; ಆದುದಱಿಂ ಏನೂ ಅಱಿಯರು—ಎಂದು ಮನಸ್ಸಿನಲ್ಲಿ ಚಿಂತಿಸುತ್ತ,—'' ಹಾ ! ಎಲೌ ಸೀತೆಯೆ ! ಆ ಚಿತ್ರಕೂಟಕ್ರೀಡಾಸಮಯದಲ್ಲಿರುವ ವಿಶ್ವಾಸಾತಿಶಯಪ್ರಸ್ತಾಪವಂ ನೀನು ಸ್ಮರಿಸುವೆಯೊ ಇಲ್ಲವೊ ! ಕಟಕಟ ! ಇದು ದುಷ್ಟವು. ಎಲೌ ಪ್ರಿಯಳೇ ! ಆ ಸಮಯದಲ್ಲಿ ಸ್ವೇದಜಲದಿಂ ಶೀತಳವಾಗಿ ಮಂದಾಕಿನಿಯೆಂಬ ನದಿಯಲ್ಲಿ ತರಂಗಗಳಲ್ಲಿ ಸಂಚರಿಸುವುದಱಿಂ ಮಂದಗಮನವುಳ್ಳ ವಾಯುವಿನಿಂದ ಚಲಿಸುತ್ತಲಿರುವ ಮುಂಗುರುಳುಗಳಿಂ ವ್ಯಾಪ್ತವಾದ, ಅರ್ಧಚಂದ್ರನಂತೆ ಪೊಳೆಯುವ ಲಲಾಟಸ್ಥಾನವುಳ್ಳುದಾಗಿ ಕುಂಕುಮಚಿಹ್ನವಿಲ್ಲದುದಾಗಿ ಪ್ರಕಾಶಿಸುವ ಗಂಡಸ್ಥಳವುಳ್ಳುದಾಗಿ ಆಭರಣಗಳಂ ತೆಗೆದಿದ್ದರೂ ಅತಿಸುಂದರವಾದ ಪಾಶದಂತೆ ಇರುವ ಕರ್ಣಗಳಿಂದ ಮನೋಹರವಾಗಿಯೂ ಇರುವ ನಿನ್ನ ಮುಖವಂ ಈಗ ನಾನು ಚೆನ್ನಾಗಿ ಭಾವಿಸುತ್ತೇನೆ '' ಎನುತ್ತ, ಸ್ತಂಭಿಸಲ್ಪಟ್ಟವನಂತೆ ದೈನ್ಯದೊಡಗೂಡಿ—ಎಲೈ, ನೋಡಿದೆಯಾ. ಅತಿ ದೂರದೇಶದಲ್ಲಿ ಇದ್ದರೂ ತನಗೆ ಇಷ್ಟವಾದ ಜನವು ಬಹುಕಾಲ ಬಾರಿಬಾರಿಗೂ ಮನಸ್ಸಿನಲ್ಲಿ ಧ್ಯಾನಿಸುವುದಱಿಂ ನಿರ್ಮಿಸಲ್ಪಟ್ಟುದಾಗಿ ಎದುರಿಗೆ ಬಂದು ನಿಂತಿರುವಂತೆ ಚಿತ್ತಕ್ಕೆ ಸಮಾಧಾನವಂ ಮಾಡುತ್ತಲಿದೆಯೆ ಹೊಱತು ಮತ್ತೊಂದಿಲ್ಲ. ಆದರೂ ಪುರುಷನಿಗೆ ಪತ್ನೀವಿರಹವುಂಟಾದಲ್ಲಿ ಜಗತ್ತೆಲ್ಲವೂ ಜೀರ್ಣವಾದ ಅರಣ್ಯದಂತೆ ತೋಱುವುದು ; ಆ ಬಳಿಕ ಹೃದಯವು ಹೊಟ್ಟಿನ ರಾಶಿಯಲ್ಲಿ ಪಾಕಂಗೈಯಲ್ಪಟ್ಟಂತೆಯೂ ಇರುವುದು— ಎಂಬದಾಗಿ ಶ್ರೀರಾಮನು ಚಿಂತಿಸುತ್ತಲಿರಲು ;

ಅಷ್ಟಱೊಳಗೆ ನೇಪಥ್ಯದಲ್ಲಿ ಒಬ್ಬ ಪುರುಷನು—'' ವಸಿಷ್ಠಮುನಿಯು ವಾಲ್ಮೀಕಿ ಮುನಿಯು ದಶರಥಮಹಾರಾಯನ ಪತ್ನಿಯರುಗಳು ಜನಕರಾಯನು ಅರುಂಧತೀದೇವಿಯೂ ಸಹ ಈ ವೃದ್ಧಜನರೆಲ್ಲರೂ ಬಾಲಕರಾದ ಚಂದ್ರಕೇತುಲವರುಗಳ ಯುದ್ಧವಂ ಕೇಳಿ ಭಯಯುಕ್ತರಾಗಿ, ಆಬಳಿಕ ಮನಸ್ಸುಮಾತ್ರವು ತ್ವರೆಪಡುತ್ತಲಿದ್ದರೂ ಆಶ್ರಮದ್ವಾರವಾಗಿರುವುದಱಿಂ ಜರೆಯಿಂ ವ್ಯಾಪ್ತಗಳಾದ ಅಂಗಗಳೊಡನೆ ಯುಕ್ತರಾಗಿ ಸಡಿಲುತ್ತಲಿರುವ ಜಟಾಬಂಧವುಳ್ಳವರಾಗಿ ಮೆಲ್ಲಮೆಲ್ಲನೆ ಬರುತ್ತಲಿದ್ದಾರೆ'' ಎಂದು ಪೇಳಿದನು.

ಆದಂ ಕೇಳಿ ಶ್ರೀರಾಮನು ಇಂತೆಂದನು :—'' ಎಲೈ, ಇದೇನು ! ಭಗವತಿಯಾದ ಅರುಂಧತೀದೇವಿಯು ವಸಿಷ್ಠರು ನಮ್ಮ ಮಾತೃಜನರು ಜನಕರಾಯನು ಸಹ ಈ ಆಶ್ರಮದಲ್ಲಿಯೇ ಇದ್ದಾರೆ ! ಈ ದುರ್ದಶಾವಿಶೇಷದಲ್ಲಿ ನಾನು ಈ ಜನರಂ ಎಂತು

ನೋಡಲಿ!'' ಎಂದು ದೀನಭಾವದಿಂ ನೋಡಿ—ಎಲೈ, ಪೂಜ್ಯನಾದ ಜನಕರಾಯನೂ ಕೂಡ ಇಲ್ಲಿಗೆ ಬಂದನಾದಕಾರಣ ಅಲ್ಪಭಾಗ್ಯನಾದ ನಾನು ವಜ್ರಾಯುಧದಿಂದ ಪ್ರಹರಿಸಲ್ಪಟ್ಟವನಂತೆ ಆದೆನು. ರಘುವಂಶಸ್ಥರಿಗೂ ಜನಕವಂಶಸ್ಥರಿಗೂ ಪರಸ್ಪರ ಸಂಬಂಧವುಂಟಾದುದು ಬಹುಶ್ಲಾಘ್ಯವಾಯಿತೆಂದು ಸಂತೋಷಯುಕ್ತನಾಗಿರುವ, ಜ್ಯೇಷ್ಠರಾದ ವಸಿಷ್ಠಾದಿಗಳೊಡನೆ ಮಕ್ಕಳ ವಿವಾಹೋತ್ಸವವಂ ನೋಡಿ ಸಂತೋಷಯುಕ್ತನಾಗಿರುವ, ಅಂಥ ಜನಕರಾಯನಂ ಅಂಥ ತಂದೆಗಳ ಸಮಾಗಮವಂ ಸಹ ನೋಡಿ, ಈಗ ಪೂರ್ಣಗರ್ಭಿಣಿಯಾಗಿರುವ ಸೀತೆಗೆ ಇಂಥ ಮಹಾವಿಪತ್ತು ಉಂಟಾಗಿರುವುದಱಿಂ ದ್ರೋಹಿಯಾಗಿ ನಮ್ಮ ತಂದೆಗೆ ಮಿತ್ರನಾದ ಪುತ್ರೀಶೋಕದಿಂ ಸಂತಪ್ತನಾದ ಇಂಥ ಜನಕರಾಯನಂ ನೋಡುವೆನಾದರೂ ಈಗ ಏಕೆ ನಾನು ಸಹಸ್ರಪ್ರಕಾರವಾಗಿ ಸೀಳಿ ಪೋಗುವನಾಗಲಿಲ್ಲ! ಅಥವಾ ಮಹಾ ಕಠಿನಚಿತ್ತನಾದ ರಾಮನಿಗೆ ಯಾವುದು ಅಸಾಧ್ಯವು? ಎಂದು ಶ್ರೀರಾಮನು ಚಿಂತಿಸುತ್ತಲಿರಲು ;

ಪುನಃ ನೇಪಥ್ಯದಲ್ಲಿ ಒಬ್ಬ ಪುರುಷನು ಇಂತೆಂದನು :—'' ಎಲೈ, ಇದು ಮಹಾಕಷ್ಟವು! ಪೂರ್ವದಂತೆ ಏಕಪ್ರಕಾರವಾಗಿರುವ ಕಟಾಕ್ಷವೀಕ್ಷಣ ಮೊದಲಾದ ವ್ಯಾಪಾರಗಳಿಂದ ಮಾತ್ರವೇ ಉಳಿದಿರುವ ಕಾಂತಿಯುಳ್ಳ ಇಂಥ ವ್ಯಸನಯುಕ್ತನಾಗಿರುವ ರಘುಪತಿಯಂ ಆಕಸ್ಮಿಕವಾಗಿ ನೋಡಿ ಮೊದಲು ಈತನು ರಾಮನೆಂದು ತಿಳಿದು ಇರುವ ಜನಕರಾಯನಿಂದ ಈತನು ನಿಮ್ಮ ಪುತ್ರನಾದ ರಾಮನೆಂದು ತಿಳುಹಿಸಲ್ಪಟ್ಟವರಾಗಿ ಕೌಸಲ್ಯಾದೇವಿ ಮೊದಲಾದ ಮಾತೃಜನರು ಬಹುಕಾಲದಿಂ ಪುತ್ರವಿರಹಯುಕ್ತರಾಗಿ ಈಗ ಇಂಥ ವ್ಯಸನಯುಕ್ತನಾಗಿ ಕೃಶನಾಗಿರುವ ರಾಮನಂ ನೋಡಿದುದಱಿಂದ ಮೂರ್ಛೆಯನ್ನೈದುತ್ತಾರೆ'' ಎಂದು ಪೇಳಲು ;

ಅದಂ ಕೇಳಿ ಶ್ರೀರಾಮನು ಗುರುಜನರಂ ಕುಱಿತು—'' ಹಾ! ಪೂಜ್ಯನೇ! ಹಾ ತಾಯಿಗಳಿರಾ! ಕೇಳಿ : ಜನಕಕುಲಸ್ಥರಾದ ಅರಸುಗಳಿಗೂ ರಘುಕುಲಸ್ಥರಾದ ಅರಸುಗಳಿಗೂ ಸಹ ಯಾವ ಸೀತೆಯು ಕುಲಕ್ಕೆ ಸರ್ವಮಂಗಳಸ್ವರೂಪಳಾಗಿ ಇದ್ದಳೊ ಅಂಥ ಸೀತೆಯಲ್ಲಿಯೂ ನಿರ್ದಯನಾದಕಾರಣ ಪರಮಪಾತಕಿಯಾದ ನನ್ನಲ್ಲಿಯೂ ನಿಮಗೆ ದಯವುಂಟಾಗಿರುವುದು ವ್ಯರ್ಥವೇ ಸರಿ'' ಎನುತ್ತ, '' ಆಗಲಿ, ಈ ಪೂಜ್ಯರಂ ಕಾಣಿಸಿಕೊಳ್ಳೋಣ'' ಎಂದು ಶ್ರೀರಾಮನು ವೃಕ್ಷಮೂಲಪ್ರದೇಶದಿಂ ಮೇಲಕ್ಕೆ ಎದ್ದವನಾಗಲು ;

ಕುಶ ಲವರು ಶ್ರೀರಾಮನಂ ಕುಱಿತು—'' ಪೂಜ್ಯನು ಇತ್ತ ಇತ್ತ ಚಿತ್ತವಿಸಬೇಕು'' ಎಂದು ಬಿನ್ನವಿಸಲು ;

ದೈನ್ಯದಿಂ ವ್ಯಾಕುಲರಾಗಿ ಎಲ್ಲರೂ ತಿರಿಗಿದವರಾಗಿ ನಡೆದರು.

ಷಷ್ಠಾಂಕತಾತ್ಪರ್ಯಂ ಸಮಾಪ್ತಂ.

## ॥ ಸಪ್ತಮಾಂಕಂ ॥

ಆ ಬಳಿಕ ಏಳನೆಯ ದಿವಸದಲ್ಲಿ ಪುನಃ ಸಾಮಾಜಿಕರು ಸಪ್ತಾಂಗಗಳೊಡಗೂಡಿರುವ ಸಭಾಸ್ಥಾನವಂ ಪ್ರವೇಶಂಗೈದು ನಾಟಕಾಭಿನಯವಂ ನೋಡಲೋಸುಗ ಕುತೂಹಲದಿಂ ಉದ್ಯುಕ್ತರಾಗಲು ;

ಸೂತ್ರಧಾರನು ನಟನು ಸಹ ಇವರು ಮೊದಲಾದ ಭರತಕುಲಸ್ಥರು ರಂಗಸ್ಥಾನವಂ ಪ್ರವೇಶಂಗೈದು ಸಭಾಪ್ರಾರ್ಥನೆಯು ಪುಷ್ಪಾಂಜಲಿಯು ಮೊದಲಾದ ಪೂರ್ವರಂಗವಂ ನೆರವೇಱಿಸಿ ಗಾನಪೂರ್ವಕವಾಗಿ ತಂತಮ್ಮ ವ್ಯಾಪಾರಂಗಳಲ್ಲಿ ಉದ್ಯುಕ್ತರಾಗಿ ನೇಪಥ್ಯಾಭಿಮುಖರಾಗಿ ನಿಂತಿರುವರಾಗಲು ;

ಆ ಬಳಿಕ ಲಕ್ಷ್ಮಣಸ್ವಾಮಿಯು ನೇಪಥ್ಯದಿಂ ರಂಗಸ್ಥಾನವಂ ಪ್ರವೇಶಂಗೈದು ಇಂತೆಂದನು :–" ಎಲೈ, ಪೂಜ್ಯನಾದ ವಾಲ್ಮೀಕಿಮುನಿಯು ಏನು ಕಾರಣ ಬ್ರಾಹ್ಮಣರು ಕ್ಷತ್ರಿಯರು ಪುರಜನರು ದೇಶಗಳಲ್ಲಿರುವ ಜನರುಗಳು ಸಹ–ಇವರೊಡಗೂಡಿರುವ ಸಮಸ್ತ ಪ್ರಜೆಗಳಂ ನಮ್ಮಂ ಸಹ ಕರೆಯಿಸಿದವನಾಗಿ, ತನ್ನ ಪ್ರಭಾವವಿಶೇಷದಿಂ ದೇವತೆಗಳು ಅಸುರರು ಪಶುಗಳು ಚರಾಚರಂಗಳಾದ ಪ್ರಾಣಿಗಳು ಸಹ–ಇವರ ಸಮೂಹವೆಲ್ಲವೂ ತನ್ನ ಸನ್ನಿಧಿಯನ್ನೈದುವಂತೆ ಮಾಡಿದನೊ, ಆ ರಹಸ್ಯವು ತಿಳಿಯಲಿಲ್ಲ. ಇದಲ್ಲದೆ ನಮ್ಮಣ್ಣನಾದ ಸ್ವಾಮಿಯು ನನ್ನಂ ಕುಱಿತು–ಎಲೈ ಲಕ್ಷ್ಮಣನೆ, ಪೂಜ್ಯನಾದ ವಾಲ್ಮೀಕಿ ಮುನಿಯು ಅಪ್ಸರಸ್ತ್ರೀಯರುಗಳಿಂ ಅಭಿನಯಿಸಲ್ಪಡುವ ತನ್ನಿಂದ ರಚಿಸಲ್ಪಟ್ಟ ಈ ನಾಟಕಪ್ರಬಂಧವಂ ನೋಡುವುದಕ್ಕೋಸ್ಕರ ನಮ್ಮಂ ಸನ್ನಿಧಿಗೆ ಬರುವಂತೆ ಆಜ್ಞಾಪಿಸಿ ಇದ್ದಾನೆಯಾದಕಾರಣ ನೀನೇ ಈ ಗಂಗಾತೀರದಲ್ಲಿರುವ ರಂಗಸ್ಥಾನವನ್ನೈದಿ ಸಕಲಸಾಮಾಜಿಕರಿಗೂ ರಮಣೀಯಗಳಾದ ಸ್ಥಾನಂಗಳಂ ನಿರ್ಮಿಸುವಂತೆ ಮಾಡುವನಾಗು–ಎಂದು ಆಜ್ಞಾಪಿಸಿದನು. ನಾನು ಪೂಜ್ಯನಾದ ಆ ಸ್ವಾಮಿಯ ಆಜ್ಞೆಯಿಂ ದೇವತೆಗಳ ಸಮೂಹಕ್ಕೆ ಸಹ ಯಥಾಯೋಗ್ಯವಾಗಿ ಸ್ಥಾನವಿಶೇಷಗಳಂ ಕಲ್ಪಿಸಿದವನಾದೆನು. ಈ ನಮ್ಮಣ್ಣನಾದ ಸ್ವಾಮಿಯಾದರೋ ರಾಜ್ಯಾಧಿಪತಿಯಾಗಿ ಇದ್ದರೂ ಕಷ್ಟವಾದ ಮುನಿವ್ರತವಂ ಧರಿಸಿ ವಾಲ್ಮೀಕಿಮಹಾಮುನಿಯಲ್ಲಿರುವ ಗುರುಭಕ್ತಿಯಿಂದ ಈ ಗಂಗಾತೀರಕ್ಕೆ ಬರುತ್ತಲಿದ್ದಾನೆ " ಎಂದು ಪೇಳಲು ;

ಆಗ ಶ್ರೀರಾಮನು ರಂಗಸ್ಥಾನವಂ ಪ್ರವೇಶಿಸಿ ಲಕ್ಷ್ಮಣನಂ ಕುಱಿತು–" ಎಲೈ ಆಯುಷ್ಮಂತನಾದ ಲಕ್ಷ್ಮಣನೇ, ರಂಗಸ್ಥಾನದಲ್ಲಿ ಪ್ರಮುಖರಾದವರೆಲ್ಲರೂ ಬಂದು ಇದ್ದಾರೆಯೊ ಏನು ? " ಎಂದು ಪ್ರಶ್ನೆಮಾಡಿದನು. ಅದಂ ಕೇಳಿ ಲಕ್ಷ್ಮಣಸ್ವಾಮಿಯು ಸ್ವಾಮಿಯಂ ಕುಱಿತು–" ಎಲೈ ಪೂಜ್ಯನೆ, ಸಮಸ್ತಸಾಮಾಜಿಕರು ಬಂದು ಕುತೂಹಲಯುಕ್ತರಾಗಿ ಇದ್ದಾರೆ " ಎಂದು ಬಿನ್ನವಿಸಲು ; ಶ್ರೀರಾಮನು ಲಕ್ಷ್ಮಣನಂ ಕುಱಿತು– " ಎಲೈ ತಮ್ಮನೆ, ಕುಶಲವರೆಂಬ ಈ ಕುಮಾರರಲ್ಲಿ ನೀನು ಪುತ್ರನಾದ ಚಂದ್ರಕೇತುವಿ

ನಲ್ಲಿರುವ ಪ್ರೀತಿಗೆ ಸಮಾನವಾದ ಪ್ರೀತಿಯನ್ನಿಡುವನಾಗು '' ಎಂದು ಪೇಳಿದನು. ಅದಂ ಕೇಳಿ ಲಕ್ಷ್ಮಣನು ಶ್ರೀರಾಮನಂ ಕುಱಿತು–'' ಎಲೈ ಪೂಜ್ಯನೆ, ಮಹಾಪ್ರಭುವಾದ ನಿನಗೆ ಈ ಕುಮಾರರಲ್ಲಿ ಸ್ನೇಹವುಂಟಾಗಿರುವುದೇ ನಮಗೆ ಪ್ರಮಾಣವೆಂದು ನಾವೂ ಅದೇ ರೀತಿಯಿಂ ಈ ಬಾಲಕರಲ್ಲಿ ಪ್ರೀತಿಯಂ ಮಾಡುತ್ತೇವೆ. ಪೂಜ್ಯನಾದ ಸ್ವಾಮಿಯು ಇಲ್ಲಿ ಹಾಕಿರುವ ರಾಜಾಸನದಲ್ಲಿ ಕುಳಿತವನಾಗಬೇಕು '' ಎಂದು ಬಿನ್ನವಿಸಿದುದಱಿಂ ಸ್ವಾಮಿಯು ರಾಜಾಸನದಲ್ಲಿ ಕುಳಿತವನಾಗಲು ; ಸಮಸ್ತ ಸಾಮಾಜಿಕರು ಯಥಾಯೋಗ್ಯವಾಗಿ ತಮ್ಮ ತಮ್ಮ ಸ್ಥಾನಂಗಳಲ್ಲಿ ಕುಳಿತಂಥವರಾದರು.

ಆಗ ಶ್ರೀರಾಮನು ಭರತಾಚಾರ್ಯನಾದ ಸೂತ್ರಧಾರನಂ ಕುಱಿತು–'' ನಾಟಕಾಭಿನಯವಂ ಮಾಡಲೋಸುಗ ಪ್ರಸ್ತಾಪವಂ ಗೈವನಾಗು '' ಎಂದು ಆಜ್ಞಾಪಿಸಿದನು.

ಆ ಬಳಿಕ ಸೂತ್ರಧಾರನು ರಂಗಸ್ಥಾನವಂ ಪ್ರವೇಶಿಸಿ ಇಂತೆಂದು ಬಿನ್ನವಿಸಿದನು :–'' ಪೂಜ್ಯನಾಗಿ ಸತ್ಯಾರ್ಥವಾದಿಯಾಗಿಯೂ ಇರುವ ವಾಲ್ಮೀಕಿಮುನಿಯು ಸ್ಥಾವರ ಜಂಗಮ ರೂಪವಾದ ಜಗತ್ತಂ ಕುಱಿತು ಇಂತೆಂದು ಆಜ್ಞಾಪಿಸುತ್ತಾನೆ. ಅದೇನೆಂದರೆ :–ನಾನು ತಪೋದೃಷ್ಟಿಯಿಂ ಚೆನ್ನಾಗಿ ಭಾವಿಸಿ ಲೋಕಪಾವನವಾಗಿ ವಚನಾಮೃತವಾಗಿ ಕರುಣಾದ್ಭುತರಸಗಳೊಡನೆ ಯುಕ್ತವಾಗಿಯೂ ಇರುವ ಯಾವ ಈಯೊಂದು ನಾಟಕ ಗ್ರಂಥವಂ ರಚಿಸಿ ಇದ್ದೇನೆಯೊ, ಅದಱಲ್ಲಿ ನೀವೆಲ್ಲರೂ ಸುಸತ್ಕಾವ್ಯವೆಂಬ ಗೌರವದಿಂ ಏಕಾಗ್ರಚಿತ್ತರಾಗಿ ಈ ನಾಟಕಾಭಿನಯವಂ ನೋಡಬೇಕು '' ಎಂಬದಾಗಿ, ಸೂತ್ರಧಾರನು ವಾಲ್ಮೀಕಿಯ ಆಜ್ಞಾವಚನವಂ ಬಿನ್ನವಿಸಲು ;

ಅದಂ ಕೇಳಿ ಶ್ರೀರಾಮನು ಸಾಮಾಜಿಕರಂ ಕುಱಿತು–'' ಎಲೈ ವಿದ್ವಾಂಸರೇ, ಕೇಳಿ. ಈ ವಾಲ್ಮೀಕಿಮುನಿಯ ಆಜ್ಞಾವಚನಕ್ಕೆ ಅಭಿಪ್ರಾಯವೇನೆಂದರೆ :–ಲೋಕದಲ್ಲಿ ಮಹರ್ಷಿಗಳು ಸೂಕ್ಷ್ಮವಾದ ಧರ್ಮಸ್ವರೂಪವಂ ಪ್ರತ್ಯಕ್ಷವಾಗಿ ಕಂಡಿರುವರಾದಕಾರಣ ಆ ಮಹರ್ಷಿಗಳ ವಚನಂಗಳು ಸತ್ಯವಾದ ಅರ್ಥವಂ ವಹಿಸಿರುವುವಾದುದಱಿಂದ ಎಲ್ಲಾದರೂ ಅಸತ್ಯಗಳಾಗುವುವೆಂದು ಶಂಕಿಸತಕ್ಕವಲ್ಲವೆಂಬದಾಗಿ ತಾತ್ಪರ್ಯವು '' ಎಂದು ಶ್ರೀರಾಮನು ವಾಲ್ಮೀಕಿವಚನಾಭಿಪ್ರಾಯವಂ ನಿರೂಪಿಸಲು ;

ಅಷ್ಟಱೊಳಗೆ ನೇಪಥ್ಯದಲ್ಲಿ–'' ಹಾ ! ಪೂಜ್ಯರಿಗೆ ಪುತ್ರನಾದ ಕುಮಾರನಾದ ಲಕ್ಷ್ಮಣನೇ ! ಒಬ್ಬಳಾಗಿ ಪ್ರಾಪ್ತವಾದ ಪ್ರಸವವೇದನೆಯುಳ್ಳವಳಾಗಿಯೂ ಇರುವ ನನ್ನಂ ವ್ಯಾಘ್ರವೊದಲಾದ ದುಷ್ಟಮೃಗಗಳು ಅಪೇಕ್ಷಿಸುತ್ತಲಿವೆಯಾದಕಾರಣ, ಕಟಕಟಾ ! ಅಲ್ಪಭಾಗ್ಯಳಾದ ಈ ನಾನು ಗಂಗೆಯಲ್ಲಿ ದೇಹವಂ ಬಿಡುತ್ತೇನೆ '' ಎಂದು ಪೇಳಲು ;

ಅದಂ ಕೇಳಿ ಲಕ್ಷ್ಮಣನು–'' ಎಲೈ, ಕಟಕಟ ! ಇದೇನೊ ಮತ್ತೊಂದು ಕಷ್ಟವು ಘಟಿಸಿತು ? '' ಎಂದು ಚಿಂತಾಯುಕ್ತನಾಗಲು ;

ಸೂತ್ರಧಾರನು ಇಂತೆಂದನು :–'' ಎಲೈ ಸಾಮಜಿಕರೆ, ಭೂಪುತ್ರಿಯಾದ ಸೀತಾದೇವಿಯು ಅರಸಾದ ರಘುಪತಿಯಿಂ ಮಹತ್ತಾದ ಅರಣ್ಯದಲ್ಲಿ ತ್ಯಜಿಸಲ್ಪಟ್ಟವಳಾಗಿ ಪ್ರಸವವೇದನಾಯುಕ್ತವಾದ ತನ್ನ ದೇಹವಂ ಗಂಗಾದೇವಿಯಲ್ಲಿ ಬಿಡುತ್ತಲಿದ್ದಾಳೆ '' ಎಂದು ನಾಟಕಕಥಾಪ್ರಸ್ತಾಪವಂ ಮಾಡಿ ಪೊಱಟವನಾಗಲು ;

ಅದಂ ಕೇಳಿ ಶ್ರೀರಾಮನು ದುಃಖವೇಗದೊಡಗೂಡಿ–" ಎಲೌ ಪ್ರಿಯಳೇ, ಎಲೌ ಪ್ರಿಯಳೇ! ಗಂಗೆಯಲ್ಲಿ ದೇಹವಂ ಬಿಡಬೇಡ, ಬಿಡಬೇಡ. ಕ್ಷಣಮಾತ್ರ ವಿಳಂಬವಂ ಮಾಡು" ಎಂದು ಸೀತೆಯಂ ಕುಱಿತು ಪೇಳಲು ; ಆಗ ಲಕ್ಷ್ಮಣನು ನೋಡಿ–" ಎಲೈ ಪೂಜ್ಯನೆ, ಎಲೈ ಪೂಜ್ಯನೆ, ಇದು ನಾಟಕವು" ಎಂದು ಬಿನ್ನವಿಸಲು ; ಶ್ರೀರಾಮನು– "ಹಾ! ದಂಡಕಾರಣ್ಯದಲ್ಲಿ ಪ್ರಿಯಸಖಿಯಾಗಿ ಇದ್ದ ಸೀತೆಯೇ! ರಾಮನಿಂದ ಇಂಥ ದುರ್ದಶೆಯು ಪ್ರಾಪ್ತವಾಯಿತಲ್ಲವೆ!" ಎಂದನು. ಲಕ್ಷ್ಮಣನು ಸ್ವಾಮಿಯಂ ಕುಱಿತು– "ಎಲೈ ಪೂಜ್ಯನೆ, ನೀನು ಚಿತ್ತವಂ ಸಂತೈಸಿದವನಾಗಿ ಈ ನಾಟಕಾಭಿನಯವಂ ನೋಡಬೇಕು" ಎಂದು ಬಿನ್ನವಿಸಲು ; ಶ್ರೀರಾಮನು–" ಎಲೈ ಲಕ್ಷ್ಮಣನೆ, ವಜ್ರದಂತೆ ಅತಿಕಠಿನವಾದ ಈ ನಾನು ಈ ನಾಟಕಾಭಿನಯವಂ ನೋಡಲೋಸುಗ ಸನ್ನದ್ಧನಾಗಿ ಇದ್ದೇನೆ." ಎಂದು ಪೇಳಿದನು.

ಆಬಳಿಕ ಒಂದೊಂದು ಶಿಶುವಂ ತಮ್ಮ ತಮ್ಮ ತೊಡೆಗಳಲ್ಲಿ ಮಲಗಿಸಿಕೊಂಡು ಲಾಲಿಸುತ್ತಿರುವ ಗಂಗಾಭೂದೇವಿಗಳಿಂ ಉಭಯಪಾರ್ಶ್ವದಲ್ಲಿಯೂ ಅವಲಂಬಿಸಲ್ಪಟ್ಟ ವಳಾಗಿ ಮೂರ್ಛಾಯುಕ್ತಳಾದ ಸೀತೆಯು ರಂಗಸ್ಥಾನವಂ ಪ್ರವೇಶಿಸಿದವಳಾಗಲು ;

ಶ್ರೀರಾಮನು ನೋಡಿ–" ಎಲೈ ಲಕ್ಷ್ಮಣನೆ, ಎಲೈ ಲಕ್ಷ್ಮಣನೆ, ಎತ್ತಲಿಂದಲೊ ತಿಳಿಯದಂತೆ ವ್ಯಾಪಿಸುವ ಅಂಧಕಾರದಲ್ಲಿ ಪ್ರವೇಶಿಸುವನಂತೆ ಆಗುತ್ತಲಿದ್ದೇನೆಯಾದು ದಱಿಂ ನೀನು ನನ್ನನ್ನವಲಂಬಿಸುವನಾಗು" ಎಂದು ಪೇಳಿದನು.

ಆಗ ಗಂಗಾಭೂದೇವಿಗಳಿಬ್ಬರೂ ಮೂರ್ಛಿತಳಾದ ಸೀತೆಯಂ ಕುಱಿತು–" ಎಲೌ ಮಗಳೆ, ಚಿತ್ತವಂ ಸಂತೈಸುವಳಾಗು. ಭಾಗ್ಯವಿಶೇಷದಿಂ ನೀನು ಜಲಮಧ್ಯದಲ್ಲಿ ರಘುಕುಲೋದ್ಧಾರಕರಾದ ಪುತ್ರರಂ ಪೆತ್ತವಳಾದೆಯಾದಕಾರಣ ನೀನು ವೃದ್ಧಿಯನ್ನೈದುತ್ತೀಯೆ" ಎಂದು ಪೇಳಿದ ವಚನವಂ ಕೇಳಿ ಸೀತೆಯು ಸಮಾಧಾನಪಟ್ಟವಳಾಗಿ–" ಎಲೌ ಪುಣ್ಯವಶದಿಂ ನಾನು ಪುತ್ರರಂ ಪೆತ್ತೆ. ಹಾ! ಕಾಂತನೇ!" ಎಂದು ಮೂರ್ಛಿತಳಾದಳು.

ಆಗ ಲಕ್ಷ್ಮಣನು ಸ್ವಾಮಿಯ ಪಾದಗಳಲ್ಲಿ ಬಿದ್ದವನಾಗಿ–" ಎಲೈ ಪೂಜ್ಯನೇ, ಪುಣ್ಯಾತಿಶಯದಿಂ ರಘುವಂಶದಲ್ಲಿ ಶುಭಕರವಾದ ಸಂತಾನವು ಜನಿಸಿತಾದಕಾರಣ ನಾವು ವೃದ್ಧಿಯನ್ನೈದುತ್ತೇವೆ" ಎನುತ, ಸ್ವಾಮಿಯಂ ನೋಡಿ–" ಎಲೈ ಪೂಜ್ಯನಾದ ಸ್ವಾಮಿಯು ನೇತ್ರಗಳಲ್ಲಿ ಶೋಕಗಳಿಂ ವ್ಯಾಕುಲವಾಗಿ ಉಕ್ಕಿ ಹೊಱಡುವ ಬಾಷ್ಪಜಲವುಳ್ಳವನಾಗಿ ಮೂರ್ಛಿತನೇ ಆದನಲ್ಲ! ಕಟಕಟ! ಏನು ಮಾಡತಕ್ಕುದು?" ಎನುತ ಬೀಸಣಿಗೆಯಲ್ಲಿ ಬೀಸುತ್ತಿರಲು ;

ಗಂಗಾಭೂದೇವಿಗಳಿಬ್ಬರೂ ಸೀತೆಯಂ ಕುಱಿತು–" ಎಲೌ ಮಗಳೆ, ಚಿತ್ತವಂ ಸಂತೈಸು, ಸಂತೈಸು" ಎಂದು ಉಪಚಾರವಂ ಮಾಡುತ್ತಿರಲು ; ಸೀತಾದೇವಿಯು ಸಮಾಧಾನಪಟ್ಟವಳಾಗಿ–" ಎಲೌ, ನೀವು ಯಾರು? ನನ್ನಂ ಬಿಡಿ" ಎಂದಳು. ಆಗ ಭೂದೇವಿಯು ಸೀತೆಯಂ ಕುಱಿತು–" ಎಲೌ ಮಗಳೆ, ಈಕೆ ಈ ರಘುಕುಲದೇವತೆಯಾದ ಗಂಗಾದೇವಿಯು" ಎಂದು ತಿಳಿಸಲು, ಅದಂ ಕೇಳಿ ಸೀತೆಯು–" ಎಲೌ ಭಗವತಿಯೇ, ನಿನಗೆ ನಮಿಸುವೆನು" ಎಂದು ಪೇಳಲು, ಗಂಗಾದೇವಿಯು–" ಎಲೌ ಪುತ್ರಿಯೆ, ನಿನ್ನ

ಸುಚರಿತೆಗೆ ಉಚಿತವಾದ ಕಲ್ಯಾಣಸಮೃದ್ಧಿಯಂ ಪಡೆಯುವಳಾಗು" ಎಂದು ಅನುಗ್ರಹಿಸಿದಳು.

ಅದಂ ಕೇಳಿ ಲಕ್ಷ್ಮಣನು–"ನಾವು ಅನುಗ್ರಹಿಸಲ್ಪಟ್ಟೆವು." ಎಂದು ಭಾವಿಸಿದನು.

ಗಂಗಾದೇವಿಯು–"ಎಲೌ ಪುತ್ರಿಯೆ, ಈಕೆಯು ನಿಮ್ಮ ತಾಯಾದ ಪೂಜ್ಯಳಾದ ಭೂದೇವಿಯು" ಎಂದು ತಿಳುಹಲು; ಸೀತಾದೇವಿಯು ಭೂದೇವಿಯಂ ಕುಱಿತು– "ಎಲೌ ತಾಯೆ, ನಾನು ಇಂಥ ದುರ್ದಶೆಯನ್ನೈದಿದವಳಾಗಿ ನಿನ್ನ ದೃಷ್ಟಿವಿಷಯಳಾದೆನು, ಕಟಕಟಾ!" ಎಂದಳು. ಭೂದೇವಿಯು–"ಎಲೌ ಪುತ್ರಿಯೆ, ಬಾ, ಬಾ" ಎನುತ, ಇಬ್ಬರೂ ಪರಸ್ಪರವಾಗಿ ಆಲಿಂಗನವಂ ಮಾಡಿಕೊಂಡು ಮೂರ್ಛಿತರಾದರು.

ಅದಂ ನೋಡಿ ಲಕ್ಷ್ಮಣನು ಸಂತೋಷಯುಕ್ತನಾಗಿ–"ಎಲೈ, ಪೂಜ್ಯಳಾದ ಸೀತೆಯು ಆ ಪ್ರಸವವೇದನಾಕಾಲದಲ್ಲಿ ಗಂಗಾಭೂದೇವಿಗಳೊಡನೆ ಕೂಡಿದಳಲ್ಲವೆ" ಎಂದು ಸಂತೋಷಪಟ್ಟನು. ಶ್ರೀರಾಮನು–"ಎಲೈ, ಭಾಗ್ಯವಿಶೇಷದಿಂ ಇದೇನೊ ಒಂದು ಕಾರಣಾಂತರವಿದೆ" ಎಂದು ಭಾವಿಸಿದನು.

ಗಂಗಾದೇವಿಯು ಪುತ್ರೀಸ್ನೇಹದಿಂ ಮೂರ್ಛಿತಳಾದ ಭೂದೇವಿಯಂ ನೋಡಿ ಇಂತೆಂದಳು :–"ಎಲೈ, ಪ್ರಪಂಚವನ್ನೇ ತನ್ನಲ್ಲಿ ವಹಿಸಿಕೊಂಡು ಸಮಸ್ತವಂ ಸಹಿಸುವ ಪೂಜ್ಯಳಾದ ಭೂದೇವಿಯು ಕೂಡ ಈಗ ವ್ಯಥೆಪಡುವಳಾದಕಾರಣ ಪುತ್ರೀಸ್ನೇಹವೆಂಬುದು ಬಹುಪ್ರಬಲವಾದುದು. ಅಥವಾ ಎಂಥವರಾದರೆ ಏನು? ಚೈತನ್ಯಯುಕ್ತವಾಗಿರುವ ಪ್ರಾಣಿಗಳಿಗೆ ಸರ್ವಸಾಧಾರಣವಾಗಿ ದೇಹದಲ್ಲಿರುವ ಮೂಢವಾದ ಮನೋಗ್ರಂಥಿಯು ಸುಖದುಃಖರೂಪವಾದ ಸಂಸಾರಕ್ಕೆ ಮೂಲಕಾರಣವಾಗಿ ಸಮಸ್ತರಂ ಉಪದ್ರವಪಡಿಸುತ್ತಲಿದೆ" ಎಂದು ಪೇಳುತ್ತ, ಗಂಗಾದೇವಿಯು ಭೂದೇವಿಯಂ ಕುಱಿತು–"ಎಲೌ ಸಖಿಯಾದ ಭೂದೇವಿಯೆ, ಎಲೌ ಮಗಳಾದ ಸೀತೆಯೆ, ಸಮಾಧಾನಪಡುವಳಾಗು ಸಮಾಧಾನಪಡುವಳಾಗು" ಎಂದು ಉಪಚರಿಸಲು; ಭೂದೇವಿಯು ಗಂಗಾದೇವಿಯಂ ಕುಱಿತು–"ಎಲೌ ದೇವಿಯೆ, ನಾನು ಇಂಥ ಸೀತೆಯಂ ಪೆತ್ತವಳಾಗಿ ಎಂತು ಮನಸ್ಸಂ ಸಮಾಧಾನಪಡಿಸಲಿ! ಎಲೌ ತಾಯೆ, ಈ ಮಗಳಾದ ಸೀತೆಯು ರಾವಣಗೃಹದಲ್ಲಿ ದುಷ್ಟರಾದ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಬಹುಕಾಲ ವಾಸವಂ ಮಾಡಿದುದಂ ನಾನು ಸಹಿಸಿದೆನು. ಈಗ ಈ ಸೀತೆಯಂ ಪತಿಯು ತ್ಯಾಗಂಗೈದನೆಂಬ ಈಯೆರಡನೆಯ ದುಃಖವಾದರೊ ನನ್ನಿಂದ ಸಹಿಸಲು ಶಕ್ಯವಲ್ಲವು" ಎಂದು ಪೇಳಲು; ಗಂಗಾದೇವಿಯು ಭೂದೇವಿಯಂ ಕುಱಿತು–"ಎಲೌ ಪುಣ್ಯವತಿಯೇ, ಕಷ್ಟದಶೆಯಂ ಕಲ್ಪಿಸಬೇಕೆಂದು ಸಂಕಲ್ಪಿಸಿ ಬರುವ ದೈವದ ಮಾರ್ಗಗಳಂ ಮುಚ್ಚುವುದಕ್ಕೆ ಲೋಕದಲ್ಲಿ ಯಾವನು ಸಮರ್ಥನಾದಾನು?" ಎಂದು ಪೇಳಿದಳು. ಭೂದೇವಿಯು ಗಂಗೆಯಂ ಕುಱಿತು–"ಎಲೌ ಭಾಗೀರಥಿಯೇ, ನಿಮ್ಮ ರಾಮಚಂದ್ರನಿಗೆ ಇದೆಲ್ಲವೂ ಯುಕ್ತವಾಗಿ ತೋಱಿಯಿದೆ. ಬಾಲ್ಯವಯಸ್ಸಿನಲ್ಲಿ ಬಾಲಕನಾದ ತಾನು ಅಗ್ನಿಸಾಕ್ಷಿಕವಾಗಿ ಸೀತೆಯಂ ಗ್ರಹಿಸಿದನು. ಅದೂ ಪ್ರಮಾಣವಲ್ಲ, ವಸಿಷ್ಠಮುನಿಯು ಪ್ರಮಾಣವಲ್ಲ, ವಂಶವು ಪ್ರಮಾಣವಲ್ಲ" ಎಂದು ಪೇಳಲು; ಸೀತೆಯು ಸ್ವಾಮಿ

ಯಂ ಕುಱಿತು–"ಹಾ! ಪೂಜ್ಯರಿಗೆ ಪುತ್ರನಾದ ಕಾಂತನೇ! ಈಗ ನಾನು ನಿನ್ನಂ ಸ್ಮರಿಸುತ್ತೇನೆ" ಎಂದಳು. ಅದಂ ಕೇಳಿ ಭೂದೇವಿಯು–"ಎಲೌ ಮಗಳೆ, ಕಟಕಟಾ! ನಿನಗೆ ಕಾಂತನು ಯಾರು?" ಎಂದು ಪೇಳಲು; ಸೀತೆಯು ಲಜ್ಜಾಯುಕ್ತಳಾಗಿ ಕಣ್ಣೀರೊಡನೆಯೂ ಕೂಡಿ–"ತಾಯಿಯಾದ ಭೂದೇವಿಯು ಹೇಗೆ ಪೇಳಿದಳು?" ಎಂದಳು.

ಶ್ರೀರಾಮನು ಆ ಭೂದೇವಿಯ ವಚನವಂ ಕೇಳಿ–"ಎಲೌ ತಾಯಿಯಾದ ಭೂದೇವಿಯೇ, ಕಾಂತನೆಂಬ ನಾನು ಇಂಥವನಾಗಿ ಇದ್ದೇನೆ" ಎಂದು ವ್ಯಸನಪಡುವನಾಗಲು.

ಗಂಗಾದೇವಿಯು ಭೂದೇವಿಯಂ ಕುಱಿತು–"ಎಲೌ ಪೂಜ್ಯಳಾದ ಭೂದೇವಿಯೇ, ನೀನು ಸಂಸಾರಕ್ಕೆ ಶರೀರವಾಗುತ್ತಲಿದ್ದೀಯೆ. ಅದೇನು ಕಾರಣ ನೀನು ತಿಳಿಯದವಳಂತೆ ಅಳಿಯನಾದ ರಾಮಭದ್ರನಲ್ಲಿ ಕೋಪಯುಕ್ತಳಾಗುತ್ತಲಿದ್ದೀಯೆ? ಸೀತೆಯು ದುಷ್ಟನಾದ ರಾವಣನ ಗೃಹದಲ್ಲಿ ಬಹುಕಾಲ ವಾಸಮಾಡಿದವಳೆಂದು ದುಸ್ತರವಾದ ಅಪಕೀರ್ತಿಯು ರಾಜ್ಯದಲ್ಲಿ ವ್ಯಾಪಿಸಿತು. ಅಗ್ನಿಶುದ್ಧಿಯು ಆಗಲಿಲ್ಲವೆ ಎಂದರೆ, ಈ ದೇಶದಲ್ಲಿರುವ ಜನರು ಬಹುದೂರದಲ್ಲಿರುವ ಲಂಕಾದ್ವೀಪದಲ್ಲಿ ನಡೆದಿರುವ ಅಗ್ನಿಶುದ್ಧಿ ಎಂತು ಯಥಾರ್ಥವೆಂದು ತಿಳಿದಾರು? ಮತ್ತು ಯಾವ ತೆಱದಿಂದಲಾದರೂ ಲೋಕದಲ್ಲಿರುವ ಸಮಸ್ತ ಪ್ರಜೆಗಳ ಮನೋರಂಜನವಂ ಮಾಡುವುದು ಯಾವುದುಂಟೊ ಅದು ಇಕ್ಷ್ವಾಕುವಂಶಸ್ಥರಾದ ಅರಸುಗಳಿಗೆ ಕುಲಧರ್ಮವಾಗಿರುವುದು. ಅದು ಕಾರಣ ಇಂಥ ವಿಷಮಸಂಧಿಯಲ್ಲಿ ಕುಮಾರನಾದ ರಾಮಭದ್ರನು ಏನು ಮಾಡಿಯಾನು?" ಎಂದು ಪೇಳಲು;

ಆ ಗಂಗಾವಚನವಂ ಕೇಳಿ ಲಕ್ಷ್ಮಣನು–"ಎಲೆ, ದೇವತೆಗಳು ತತ್ವಾರ್ಥವಂ ತಿಳಿಯುವುದಱಲ್ಲಿ ತಡೆಯಿಲ್ಲದಿರುವ ಮನಃಪ್ರಕಾಶವುಳ್ಳವರಲ್ಲವೆ?" ಎಂದನು.

ಗಂಗಾದೇವಿಯು ಭೂದೇವಿಯಂ ಕುಱಿತು–"ಎಲೌ ತಾಯೆ, ಆದಾಗ್ಯೂ ನೀನು ಕ್ಷಮಿಸುವಳಾಗು, ನಿನಗೆ ಕೈಮುಗಿವೆನು" ಎಂದು ಪೇಳಿದಳು.

ಅದಂ ನೋಡಿ ಶ್ರೀರಾಮನು ಗಂಗೆಯಂ ಕುಱಿತು–"ಎಲೌ ತಾಯೆ, ನೀನು ನನಗೆ ಭಗೀರಥಕುಲದಲ್ಲಿ ಅನುಗ್ರಹವಂ ಪ್ರಕಾಶವಂ ಮಾಡಿದೆ" ಎಂದು ಪೇಳಲು;

ಭೂದೇವಿಯು ಗಂಗೆಯಂ ಕುಱಿತು–"ಎಲೌ ತಾಯೆ, ನಾನು ನಿರಂತರದಲ್ಲಿಯೂ ಪ್ರಸನ್ನಳಾಗಿಯೇ ಇದ್ದೇನೆ. ಮತ್ತೇನೆಂದರೆ–ಮಕ್ಕಳಲ್ಲಿರುವ ಸ್ನೇಹವೇಗವು ಅನುಭವ ಮುಖದಲ್ಲಿ ಅತಿದುಸ್ಸಹವಾದುದು. ರಾಮಭದ್ರನಿಗೆ ಸೀತೆಯಲ್ಲಿರುವ ಸ್ನೇಹವಂ ನಾನು ಅಱಿಯೆನೆಂಬುದಿಲ್ಲ. ರಾಮಭದ್ರನು ಸಂತಾಪವನ್ನೈದುತ್ತಲಿರುವ ಮನಸ್ಸಿನಿಂದಲೇ ದೈವಗತಿಯಿಂ ಸೀತೆಯಂ ತ್ಯಾಗಂಗೈದು ಹೃದಯದಲ್ಲಿ ಅತಿದುಃಖಿತನಾಗಿದ್ದರೂ ಲೋಕೋತ್ತರವಾದ ಧೈರ್ಯದಿಂದಲೂ ಪ್ರಜೆಗಳ ಪುಣ್ಯವಿಶೇಷಗಳಿಂದಲೂ ಜೀವಿಸುತ್ತಲಿದ್ದಾನೆ" ಎಂದು ಪೇಳಿದಳು.

ಶ್ರೀರಾಮನು ಆ ಭೂದೇವಿಯ ವಚನವಂ ಕೇಳಿ,–"ಗುರುಜನರು ಮಕ್ಕಳಲ್ಲಿ ದಯಾಯುಕ್ತರಾಗಿರುವರಲ್ಲವೆ" ಎಂದನು.

ಸೀತೆಯು ದುಃಖಿಸುತ್ತ ಅಂಜಲಿಬದ್ಧವಂ ಮಾಡಿಕೊಂಡು–"ಎಲೌ ತಾಯಾದ ಭೂದೇವಿಯೇ, ನನ್ನಂ ನಿನ್ನ ಅಂಗಗಳಲ್ಲಿ ಲಯವನ್ನೈದಿಸುವಳಾಗು" ಎಂದು ಪ್ರಾರ್ಥಿಸುತ್ತ ಇರುವಳಾಗಲು;

ಅದಂ ಕೇಳಿ ಶ್ರೀರಾಮನು–ಭೂದೇವಿಯು ಏನು ಉತ್ತರವಂ ಕೊಡುವಳೋ ? ಎಂದು ಚಿಂತಿಸಿದನು.

ಆಗ ಗಂಗಾದೇವಿಯು ಸೀತಾವಚನವಂ ಕೇಳಿ–"ಎಲೌ ಮಗಳೆ, ದೋಷವಿಲ್ಲ, ದೋಷವಿಲ್ಲ. ನೀನು ಭೂಮಿಯಲ್ಲಿ ಲಯವನ್ನೈದುವವಳಾಗದೆ ಅನೇಕ ಸಂವತ್ಸರಂಗಳು ಪ್ರಕಾಶಮಾನಳಾಗಿರು " ಎಂದು ಆಶೀರ್ವಾದವಂ ಮಾಡಿದಳು. ಭೂದೇವಿಯು–" ಎಲೌ ಮಗಳೆ, ನೀನು ನನ್ನಲ್ಲಿ ದೇಹವಂ ಲಯವನ್ನೈದಿಸುವುದಱಲ್ಲಿ ಮನಸ್ಸನ್ನಿಡಬೇಡ ; ಈ ಪುತ್ರರಲ್ಲಿ ದೃಷ್ಟಿಯನ್ನಿಡುವಳಾಗು " ಎನಲು ; ಸೀತೆಯು " ಎಲೌ ತಾಯೆ, ಅನಾಥ ರಾದ ಈ ಮಕ್ಕಳಿಂ ಫಲವೇನು ? " ಎಂದಳು.

ಆ ವಚನವಂ ಕೇಳಿ ಶ್ರೀರಾಮನು–" ಎಲೈ ಹೃದಯವೇ, ನೀನು ಸೀತಾಮು ಖದಿಂ ಇಂಥ ವಚನವಂ ಕೇಳಿದರೂ ದೃಢವಾಗಿ ಇದ್ದೀಯೆಯಾದಕಾರಣ ನೀನು ವಜ್ರಮ ಣಿಯಾಗಿಯೇ ಇರುವೆ" ಎಂದು ಸಂತಾಪಪಟ್ಟನು.

ಗಂಗಾದೇವಿಯು ಸೀತಾವಚನವಂ ಕೇಳಿ–" ಎಲೌ ಮಗಳೆ, ಈ ನಿನ್ನ ಪುತ್ರರು ಪಾಲಕರೊಡನೆ ಯುಕ್ತರಾದಾಗ್ಯೂ ನೀನು ಎಂತು ಅನಾಥರೆಂದು ಪೇಳುವೆ ?" ಎನಲು ; ಸೀತೆಯು–" ಎಲೌ ಪೂಜ್ಯಳೆ, ಭಾಗ್ಯಹೀನಳಾದ ನನಗೆ ಸನಾಥತ್ವವೆಂಬುದು ಎಂಥದು ?" ಎಂದು ನುಡಿದಳು. ಆಗ ಗಂಗಾಭೂದೇವಿಗಳಿಬ್ಬರೂ ಸೀತೆಯಂ ಕುಱಿತು–" ಎಲೌ ಪುತ್ರಿಯೇ, ಜಗನ್ಮಂಗಳಸ್ವರೂಪಳಾಗಿರುವ ನಿನ್ನಂ ನೀನು ಎಂತು ಅವಮಾನವಂ ಮಾಡುತ್ತಲಿದ್ದೀಯೆ ? ನಿನ್ನ ಸಂಬಂಧದಿಂ ನಾವು ಕೂಡ ಅತ್ಯಂತಲೋ ಕಪಾವನರಾಗಿ ಇದ್ದೇವಲ್ಲ." ಎಂದು ಸಂತೈಸುವರಾಗಲು ;

ಲಕ್ಷ್ಮಣನು ಸ್ವಾಮಿಯಂ ಕುಱಿತು–" ಎಲೈ ಪೂಜ್ಯನೆ, ಗಂಗಾಭೂದೇವಿಯರ ವಚನವಂ ಕೇಳು " ಎಂದನು. ಶ್ರೀರಾಮನು–" ಎಲೈ ಲಕ್ಷ್ಮಣನೇ, ಇದೇರೀತಿ ವಚ ನಂಗಳಂ ಲೋಕವೂ ಕೇಳಲಿ ! " ಎನಲು ;

ಅಷ್ಟಱಲ್ಲೇ ನೇಪಥ್ಯದಲ್ಲಿ ಮಹತ್ತಾದ ಕೋಲಾಹಲಧ್ವನಿಯು ಬಳೆಯಿತು.

ಅದಂ ಕೇಳಿ ಶ್ರೀರಾಮನು–" ಇದೇನೊ ಒಂದು ಅತ್ಯಾಶ್ಚರ್ಯಕರವು " ಎಂದು ನೋಡಿದನು.

ಸೀತೆಯು–" ಎಲೌ, ಇದೇನು ಅಂತರಿಕ್ಷವು ಕೋಲಾಹಲಧ್ವನಿಗಳಿಂ ವ್ಯಾಪಿಸಲ್ಪ ಟ್ಟುದಾಗಿ ಜ್ವಲಿಸುತ್ತಲಿದೆ " ಎಂದು ನೋಡಲು ; ಗಂಗಾಭೂದೇವಿಗಳಿಬ್ಬರೂ ನೋಡಿ– " ಆಃ ! ತಿಳಿಯಿತು. ಅದೇನೆಂದರೆ–ಯಾವ ಅಸ್ತ್ರಗಳಿಗೆ ಭೃಶಾಶ್ವಮುನಿಯು ವಿಶ್ವಾ ಮಿತ್ರಮುನಿಯು, ವಿಶ್ವಾಮಿತ್ರನಿಯು ರಾಮನು, ಎಂಬದಾಗಿ ಗುರುಸಂಪ್ರದಾಯವುಂ ಟಾಗಿರುವುದೊ ಆ ಅಸ್ತ್ರಗಳೆಲ್ಲವೂ ಜೃಂಭಕಾಸ್ತ್ರಗಳೊಡಗೂಡಿ ಆವಿರ್ಭವಿಸುತ್ತ ಲಿವೆ " ಎಂದರು.

ನೇಪಥ್ಯದಲ್ಲಿ ಅಸ್ತ್ರದೇವತೆಗಳು ಸೀತೆಯಂ ಕುಱಿತು–" ಎಲೌ ಸೀತಾದೇವಿಯೆ, ನಾವು ನಿನಗೆ ನಮಿಸುವೆವು. ಮೊದಲು ಅಂತಃಪುರದಲ್ಲಿ ಚಿತ್ರವಂ ನೋಡುವಕಾಲದಲ್ಲಿ ಯಾವ ನಿಮ್ಮ ಕುಮಾರರಿಗೆ ಗರ್ಭದಲ್ಲಿ ಇರುವಾಗಲೇ ರಘುಪತಿಯು ನಮ್ಮಂ ಉಪದೇ

ಶವಂ ಮಾಡಿದನೋ ಈಗ ಆ ನಿನ್ನ ಪುತ್ರರಾದ ಈ ಶಿಶುಗಳು ನಮಗೆ ಆಶ್ರಯಸ್ಥಾನವ ಲ್ಲವೆ ?'' ಎಂದರು.

ಆ ಅಸ್ತ್ರದೇವತೆಗಳ ವಚನವಂ ಕೇಳಿ ಸೀತೆಯು—'' ಎಲೈ, ಭಾಗ್ಯವಶದಿಂ ಇವ ರೆಲ್ಲರೂ ಅಸ್ತ್ರದೇವತೆಗಳು, ಪ್ರತ್ಯಕ್ಷವಾದರು '' ಎಂದು ನೋಡಿ—'' ಎಲೈ ಕಾಂತ ನಾದ ಸ್ವಾಮಿಯೆ, ಈಗಲೂ ನಿನ್ನ ಪ್ರಸಾದಗಳು ಪ್ರಕಾಶಿಸುತ್ತಲಿವೆ '' ಎಂದಳು.

ಲಕ್ಷ್ಮಣನು ಸ್ವಾಮಿಯಂ ಕುಱಿತು—'' ಎಲೈ ಪೂಜ್ಯನೆ, ಆ ಚಿತ್ರದರ್ಶನ ಕಾಲ ದಲ್ಲಿ ಸೀತೆಯಂ ಕುಱಿತು—ಎಲೌ ಪ್ರಿಯಳೆ, ಸರ್ವಪ್ರಕಾರದಿಂದಲೂ ಈ ಅಸ್ತ್ರಗಳು ನಿನ್ನ ಗರ್ಭದಲ್ಲಿರುವ ಪುತ್ರರನ್ನು ಆಶ್ರಯಿಸುವುವೆಂದು ನೀನು ಪೇಳಿದೆಯಲ್ಲವೆ ?'' ಎಂದು ಜ್ಞಾಪಿಸಿದನು.

ಆ ಬಳಿಕ ಗಂಗಾಭೂದೇವಿಗಳು ಅಸ್ತ್ರದೇವತೆಗಳಂ ಕುಱಿತು—'' ಎಲೈ ಉತ್ಕೃ ಷ್ಟರಾದ ಅಸ್ತ್ರದೇವತೆಗಳಿರಾ, ನಾವು ನಿಮಗೆ ನಮಸ್ಕರಿಸುವೆವು. ನಿಮ್ಮ ಪರಿಗ್ರಹದಿಂ ನಾವು ಧನ್ಯರಾದೆವು. ಕಾಲವಿಶೇಷದಲ್ಲಿ ನೀವು ಈ ಬಾಲಕರಿಂ ಧ್ಯಾನಂಗೈಯಲ್ಪಟ್ಟವ ರಾಗಿ ಇವರಿಗೆ ಪ್ರತ್ಯಕ್ಷವಾಗಬೇಕು. ನಿಮಗೆ ಶುಭವುಂಟಾಗಲಿ !'' ಎಂದು ಪೇಳಿದರು.

ಅದಂ ಕೇಳಿ ಶ್ರೀರಾಮನು—'' ಎಲೈ ಕರುಣಾರಸತರಂಗಗಳು ವ್ಯಾಕುಲಗಳಾಗಿ ಆಶ್ಚರ್ಯಾನಂದರಸಗಳೊಡಗೂಡಿರುವುದಱಿಂ ಶಿಥಿಲಗಳಾಗಿ ನನಗೆ ಈಗ ಒಂದಾನೊಂದು ದಶೆಯನ್ನುಂಟುಮಾಡುತ್ತಲಿವೆ '' ಎನಲು ;

ಗಂಗಾಭೂದೇವಿಗಳು ಸೀತೆಯಂ ಕುಱಿತು—'' ಎಲೌ ಮಗಳೆ, ಸಂತೋಷಪಡು ವಳಾಗು, ಸಂತೋಷಪಡುವಳಾಗು. ಈಗ ನಿನ್ನ ಪುತ್ರರು ಈ ಅಸ್ತ್ರದೇವತಾಪರಿಗ್ರ ಹದಿಂ ರಾಮಭದ್ರನಿಗೆ ಸಮಾನರಾದರು '' ಎಂದು ಪೇಳಿದರು. ಅದಂ ಕೇಳಿ ಸೀತೆಯು— '' ಎಲೌ ಪೂಜ್ಯಳೆ, ಈಬಾಲಕರಿಗೆ ಕ್ಷತ್ರಿಯರಿಗೆ ಯೋಗ್ಯವಾದ ವಿದ್ಯೆಯಂ ಅಭ್ಯಾಸವಂ ಮಾಡಿಸುವರಾರು ?'' ಎಂದು ಪೇಳಲು ;

ಶ್ರೀರಾಮನು ಸೀತಾವಚನವಂ ಕೇಳಿ—'' ಎಲೈ ನಮ್ಮ ರಘುವಂಶಕ್ಕೆ ವಸಿಷ್ಠನೇ ಆಚಾರ್ಯನಾಗಿ ಇದ್ದಾಗ್ಯೂ ಈಗ ಸೀತೆಯು ಕೂಡ ನನ್ನ ಪುತ್ರರಿಗೆ ವಿದ್ಯಾಭ್ಯಾಸವಂ ಮಾಡುವುದಕ್ಕೆ ಆಚಾರ್ಯನನೊಬ್ಬನಂ ಪಡೆಯಲಿಲ್ಲವಲ್ಲ, ಕಟಕಟಾ !'' ಎಂದು ವ್ಯಸನ ಪಟ್ಟನು.

ಗಂಗಾದೇವಿಯು ಸೀತೆಯಂ ಕುಱಿತು—'' ಎಲೌ ಮಗಳೆ, ಈ ಪುತ್ರರ ವಿದ್ಯಾ ಭ್ಯಾಸವಿಷಯವಾಗಿ ಈ ಚಿಂತೆಯು ನಿನಗೆ ಏಕೆ ? ಈ ಬಾಲಕರು ಸ್ತನ್ಯಪಾನವಂ ಬಿಡು ವವರಾಗಲು, ನಾನು ಈ ಪುತ್ರರಂ ವಿದ್ಯಾಭ್ಯಾಸನಿಮಿತ್ತವಾಗಿ ಪೂಜ್ಯನಾದ ವಾಲ್ಮೀಕಿ ಮುನಿಗೆ ಒಪ್ಪಿಸುತ್ತೇನೆ. ಆ ವಾಲ್ಮೀಕಿಮುನಿಯೇ ನಿನ್ನ ಪುತ್ರರಿಗೆ ಬ್ರಾಹ್ಮಣಕ್ಷತ್ರಿಯರಿಗೆ ಉಚಿತವಾದ ಕರ್ಮವಂ ಮಾಡುತ್ತಾನೆ. ಜನಕವಂಶವು ರಘುವಂಶವು ಸಹ ಈ ಉಭ ಯವಂಶಂಗಳಿಗೂ ಯಾವ ರೀತಿ ವಸಿಷ್ಠಬೃಹಸ್ಪತಿಗಳೆಂಬ ಋಷಿಗಳು ಆಚಾರ್ಯರಾಗಿ ಇರುವರೊ ಅದೇ ರೀತಿ ವಾಲ್ಮೀಕಿಮುನಿಯು ಕೂಡ ಈ ಉಭಯವಂಶಗಳಿಗೂ ಆಚಾ ರ್ಯನಾಗಿ ಇರುವನಲ್ಲವೆ ?'' ಎಂದು ಪೇಳಲು ;

ಅದಂ ಕೇಳಿ ಶ್ರೀರಾಮನು—"ಪೂಜ್ಯಳಾದ ಗಂಗೆಯು ಚೆನ್ನಾಗಿ ಆಲೋಚಿಸಿದಳು" ಎಂದು ಪೇಳಲು; ಲಕ್ಷ್ಮಣನು ಸ್ವಾಮಿಯಂ ಕುಱಿತು—"ಎಲೈ ಪೂಜ್ಯನೆ, ನಾನು ಯಥಾರ್ಥವಾಗಿ ಪೇಳುವೆನು. ಆಯಾಯ ಉಪಾಯಂಗಳಿಂ ಈ ಕುಶಲವರೇ ಪುತ್ರರೆಂದು ಊಹಿಸುತ್ತೇನೆ. ಈ ಕುಮಾರರಲ್ಲವೆ ಜನ್ಮಸಿದ್ಧವಾಗಿರುವೆ ಅಸ್ತ್ರಸಂಪ್ರದಾಯವುಳ್ಳವರು; ವಾಲ್ಮೀಕಿಮುನಿಯನ್ನೈದಿರುವವರು. ಇದಲ್ಲದೆ ಪೂಜ್ಯನಾದ ನಿನ್ನ ಆಕೃತಿಗೆ ಸಮಾನವಾದ ಆಕೃತಿಯುಳ್ಳವರು. ಮತ್ತು ಶೌರ್ಯಶಾಲಿಗಳು. ಹನ್ನೆರಡು ವರ್ಷ ವಯಸ್ಸುಳ್ಳವರು. ಆದುದಱಿಂ ಇವರೇ ಪುತ್ರರೆಂದು ಊಹಿಸುತ್ತೇನೆ" ಎಂದು ಪೇಳಿದನು. ಅದಂ ಕೇಳಿ ಶ್ರೀರಾಮನು—"ಎಲೈ ಲಕ್ಷ್ಮಣನೇ, ಈರೀತಿ ಭ್ರಮಿಸುತ್ತಲಿರುವ ಹೃದಯವುಳ್ಳವನಾಗಿ ನಾನೂ ಅತಿಮೂಢನಾಗುತ್ತೇನೆ" ಎನಲು;

ಭೂದೇವಿಯು ಸೀತೆಯಂ ಕುಱಿತು—"ಎಲೌ ಮಗಳೆ, ನನ್ನೊಡನೆ ಬಾ. ಪಾತಾಳಲೋಕವಂ ಪರಿಶುದ್ಧವನ್ನಾಗಿ ಮಾಡುವೆ" ಎಂದು ಪೇಳಿದಳು.

ಆ ವಚನವಂ ಕೇಳಿ ಶ್ರೀರಾಮನು—"ಎಲೌ ಪ್ರಿಯಳೆ, ಇಲ್ಲಿಂದ ಲೋಕಾಂತರವನ್ನೈದಿದೆಯಾ? ಕಟಕಟಾ!" ಎನಲು;

ಸೀತೆಯು ಭೂದೇವಿಯಂ ಕುಱಿತು—"ಎಲೌ ತಾಯೆ, ನಿನ್ನ ಅಂಗಗಳಲ್ಲಿ ನನ್ನಂ ಲಯವನ್ನೈದಿಸುವಳಾಗು. ನಾನು ಈ ಲೋಕಾಪಮಾನವಂ ಸಹಿಸಲಾಱೆನು" ಎಂದು ನುಡಿದಳು.

ಅದಂ ಕೇಳಿ ಲಕ್ಷ್ಮಣನು—ಈ ಸೀತಾವಚನಕ್ಕೆ ಭೂದೇವಿಯು ಏನು ಉತ್ತರವಂ ಕೊಡುವಳೋ, ಎಂದು ಚಿಂತಿಸಿದನು.

ಭೂದೇವಿಯು—"ಎಲೌ ಮಗಳೆ, ನನ್ನ ಆಜ್ಞೆಯಿಂ ಈ ಶಿಶುಗಳಾದ ನಿನ್ನ ಪುತ್ರರು ಸ್ತನ್ಯಪಾನವಂ ಬಿಡುವ ಪರ್ಯಂತವೂ ಕಾಲವಂ ನಿರೀಕ್ಷಿಸುವಳಾಗು. ಆಬಳಿಕ ನಿನ್ನ ಬುದ್ಧಿಗೆ ಹೇಗೆ ರುಚಿಸುವುದೊ ಆರೀತಿ ನಾನು ಮಾಡುತ್ತೇನೆ" ಎಂದು ಸೀತೆಯಂ ಸಮಾಧಾನಪಡಿಸಿದಳು. ಗಂಗಾದೇವಿಯು—"ಭೂದೇವಿಯ ವಚನದ ರೀತಿ ಮಾಡತಕ್ಕದು" ಎಂದು ಸಮ್ಮತಿಸಿದಳು.

ಈರೀತಿ ಗಂಗಾಭೂದೇವಿಗಳು ಪರಸ್ಪರ ಆಲೋಚಿಸಿ ಸೀತೆಯೊಡಗೂಡಿ ಪಾತಾಳಲೋಕವನ್ನೈದಿದವರಾದರು.

ಶ್ರೀರಾಮನು ಚಿಂತಿಸಿ—"ಇಷ್ಟು ತಿಳಿದು, ಎಲೌ ಪರಿಶುದ್ಧವಾದ ಚರಿತ್ರೆಯುಳ್ಳ ಸೀತೆಯೆ, ನೀನು ಲೋಕಾಂತರದಲ್ಲಿ ವಾಸವಂ ಮಾಡುವಳಾದೆಯಾ? ಕಟಕಟಾ!" ಎನುತ ಮೂರ್ಛೆಯನ್ನೈದಲು; ಆಗ ಲಕ್ಷ್ಮಣನು—"ಹಾ! ಪೂಜ್ಯನಾದ ಮಹಾನುಭಾವನಾದ ವಾಲ್ಮೀಕಿಮುನಿಯೆ, ಸಲಹುವನಾಗು, ಸಲಹುವನಾಗು. ನಿನ್ನ ಕಾವ್ಯಕ್ಕೆ ಈತನೇ ತಾತ್ಪರ್ಯವಿಷಯವಾದ ಅರ್ಥವಲ್ಲವೆ?" ಎಂದನು.

ಅಷ್ಟಱಲ್ಲೇ ನೇಪಥ್ಯದಲ್ಲಿ ಒಬ್ಬನು ಇಂತೆಂದನು:—"ಎಲೈ, ಈ ಸ್ಥಾನದಿಂದ ವಾದ್ಯಂಗಳನ್ನೆಲ್ಲವಂ ಅತ್ತಲೆಸೆಯುವರಾಗಿ; ಎಲೊ ಎಲೊ, ಚರಾಚರಸ್ವರೂಪಂಗಳಾದ ಪ್ರಾಣಿಗಳು ಮನುಷ್ಯರು ದೇವತೆಗಳು ಸಹ ವಾಲ್ಮೀಕಿಮುನಿಯಿಂ ಪ್ರತಿಜ್ಞೆಮಾಡಲ್ಪಟ್ಟ

ಪಾವನವಾದ ಒಂದು ಆಶ್ಚರ್ಯಕರವಾದ ಅರ್ಘವಂ ಈಗ ನೋಡುವರಾಗಲಿ!'' ಎಂಬ ದಾಗಿ ನೇಪಥ್ಯದಲ್ಲಿ ಉಗ್ಗಳಿಸಲು;

ಲಕ್ಷ್ಮಣನು ನೋಡಿ. ''ಇದೇನು ಗಂಗಾಜಲವು ಮಥಿಸಿದಂತೆ ಕ್ಷೋಭವಾಗುತ್ತಲಿದೆ! ಆಕಾಶವು ಮುನಿಗಳಿಂ ವ್ಯಾಪಿಸಲ್ಪಟ್ಟಿತು! ಮತ್ತು ಪೂಜ್ಯಳಾದ ಸೀತೆಯು ಗಂಗಾಭೂದೇವಿಗಳೊಡಗೂಡಿ ಜಲದಿಂ ಮೇಲಕ್ಕೆ ಬರುತ್ತಲಿದ್ದಾಳೆ! ಇದೇನು ಆಶ್ಚರ್ಯವು!'' ಎಂದನು.

ಪುನಃ ನೇಪಥ್ಯದಲ್ಲಿ–'' ಎಲೌ ಜಗತ್ಪೂಜ್ಯಳಾದ ಅರುಂಧತಿಯೆ, ನೀನು ನಮ್ಮಿಬ್ಬರಂ ಗಂಗಾಭೂದೇವಿಗಳೆಂದು ತಿಳಿಯುವಳಾಗು. ನಾವಿಬ್ಬರೂ ಪುಣ್ಯಶೀಲಳಾಗಿಯೂ ಸೊಸೆಯಾಗಿಯೂ ಇರುವ ಈ ಸೀತೆಯನ್ನೊಪ್ಪಿಸುತ್ತೇವೆ'' ಎಂಬದಾಗಿ ಪೇಳಲ್ಪಟ್ಟ ವಚನವಂ ಕೇಳಿ, ಲಕ್ಷ್ಮಣನು ಆಶ್ಚರ್ಯಪಡುತ್ತ–'' ಎಲೈ ಪೂಜ್ಯನಾದ ಸ್ವಾಮಿಯೇ, ನೋಡುನೋಡು.'' ಎಂದು ಪೇಳಿ, ''ಕಟಕಟಾ! ಈಗಲೂ ಸ್ವಾಮಿಯ ಮೂರ್ಛೆಯು ತಿಳಿಯಲಿಲ್ಲವೆ?'' ಎಂದನು.

ಆ ಬಳಿಕ ಅರುಂಧತೀದೇವಿಯು ಸೀತೆಯು ಸಹ ರಂಗಸ್ಥಾನವನ್ನೈದಿದವರಾಗಲು; ಆಗ ಅರುಂಧತೀದೇವಿಯು ಸೀತಾದೇವಿಯಂ ಕುಱಿತು–'' ಎಲೌ ಸೊಸೆಯೇ, ಜನಕರಾಯನ ಪುತ್ರಿಯೆ, ತ್ವರೆಮಾಡು ತ್ವರೆಮಾಡು. ಇನ್ನುಮೇಲೆ ನನ್ನ ಆಜ್ಞೆಯಿಂದ ಈ ದೀನಭಾವವಂ ಬಿಟ್ಟು ವೇಗದಿಂ ಬಂದು ಸಂತಾಪಹರವಾದ ಸ್ಪರ್ಶವುಳ್ಳ ನಿನ್ನ ಹಸ್ತದಿಂ ಸ್ಪರ್ಶಿಸಿ ನನ್ನ ಪುತ್ರನಾದ ಈ ರಾಮಭದ್ರನಂ ಜೀವವಂತನಂ ಮಾಡು'' ಎಂದು ಆಜ್ಞಾಪಿಸಲು; ಸೀತಾದೇವಿಯು ತತ್‌ಕ್ಷಣದಲ್ಲಿ ತ್ವರೆಯೊಡಗೂಡಿದವಳಾಗಿ ಬಂದು ತನ್ನ ಅತಿಸುಕುಮಾರವಾದ ಹಸ್ತಕಮಲದಿಂ ಶ್ರೀರಾಮನಂ ಸ್ಪರ್ಶಿಸುವಳಾಗಿ, ''ಪೂಜ್ಯರಿಗೆ ಪುತ್ರನಾದ ಸ್ವಾಮಿಯಾದ ಕಾಂತನು ಚಿತ್ತವಂ ಸಂತೈಸಬೇಕು, ಚಿತ್ತವಂ ಸಂತೈಸಬೇಕು'' ಎಂದು ಉಪಚರಿಸಿದಳು. ಆ ಕ್ಷಣದಲ್ಲಿ ಸ್ವಾಮಿಯು ಸೀತಾಹಸ್ತಸ್ಪರ್ಶವಿಶೇಷದಿಂ ಮೂರ್ಛೆದಿಳಿದು ಪರಮಾನಂದಭರಿತನಾಗಿ–ಇದೇನೈ! ಎಂದು ಆಶ್ಚರ್ಯಪಡುತ್ತ, ಭಾವಿಸಿ ನೋಡಿ, ಆನಂದಾಶ್ಚರ್ಯಗಳೊಡಗೂಡಿ, ''ಇದೇನು, ಸೀತೆಯು ಬಂದು ಇದ್ದಾಳೆ!'' ಎನುತ, ಅಷ್ಟಱೊಳಗೆ ನೋಡಿ ಲಜ್ಜಾಯುಕ್ತನಾಗಿ–'' ಎಲೈ, ಇದೇನು ತಾಯಾದ ಅರುಂಧತೀದೇವಿಯೂ ಬಂದು ಇದ್ದಾಳೆ! ಋಷ್ಯಶೃಂಗಮುನಿಯು ಮೊದಲಾದ ನಮ್ಮ ಗುರುಜನರೆಲ್ಲರೂ ಬಂದು ಇದ್ದಾರೆ!'' ಎಂದು ಸಂತೋಷಿಸಲು; ಆಗ ಅರುಂಧತೀದೇವಿಯು ಶ್ರೀರಾಮನಂ ನೋಡಿ–''ಎಲೈ ಪುತ್ರನೆ, ಈ ದೇವಿಯೇ ನಿಮ್ಮ ಕುಲದೇವತೆಯಾದ ಭಾಗೀರಥಿಯು, ಪ್ರಸನ್ನಳಾಗಿ ಬಂದು ಇದ್ದಾಳೆ'' ಎಂದು ನಿರೂಪಿಸಲು;

ನೇಪಥ್ಯದಲ್ಲಿ–'' ಎಲೈ ಜಗತ್ಪತಿಯಾದ ಶ್ರೀರಾಮಭದ್ರನೇ, ಪೂರ್ವದಲ್ಲಿ ಅಂತಃಪುರದಲ್ಲಿ ಚಿತ್ರದರ್ಶನಕಾಲದಲ್ಲಿ ನನ್ನಂ ಕುಱಿತು ಪೇಳಿದ ವಚನವಂ ಸ್ಮರಿಸಿಕೊಳ್ಳುವನಾಗು. ಆಗ ನೀನು ನನ್ನಂ ಕುಱಿತು–ಎಲೌ ತಾಯೆ, ಈ ನಿನ್ನ ಸೊಸೆಯಾದ ಗರ್ಭಿಣಿಯಾದ ಸೀತೆಯಲ್ಲಿ ಅರುಂಧತೀದೇವಿಯಂತೆ ಕ್ಷೇಮವಂ ಚಿಂತಿಸು–ಎಂದು ಬಿನ್ನವಿಸಿದುದಱಿಂ ನಾನು ಈ ಸೀತೆಯಂ ರಕ್ಷಿಸಿದೆನು. ಅದುಕಾರಣ ಈಗ ನಾನು ಋಣವಿಮುಕ್ತಳಾಗುತ್ತೇನೆ'' ಎಂದು ಗಂಗೆಯು ಪೇಳಿದಳು.

ಅರುಂಧತೀದೇವಿಯು—" ಎಲೈ ಪುತ್ರನೆ, ಈಕೆಯೇ ನಿನ್ನ ಅತ್ತೆಯಾದ ಭೂದೇವಿಯು " ಎಂದು ನಿರೂಪಿಸಲು ;

ನೇಪಥ್ಯದಲ್ಲಿ—" ಎಲೈ ಆಯುಷ್ಮಂತನಾದ ರಾಮಭದ್ರನೆ, ನೀನು ಲೋಕಾಪವಾದನಿಮಿತ್ತವಾಗಿ ನನ್ನ ಪುತ್ರಿಯಾದ ಸೀತೆಯಂ ತ್ಯಾಗಂಗೈಯುವ ಸಮಯದಲ್ಲಿ ನನ್ನಂ ಕುಱಿತು ಪೇಳಿದ ವಚನವಂ ಸ್ಮರಿಸಿಕೊಳ್ಳುವನಾಗು. ಆಗ ನೀನು—ಎಲೌ ಪೂಜ್ಯಳಾದ ಭೂದೇವಿಯೇ, ತನ್ನ ಚರಿತ್ರದಿಂ ಶ್ಲಾಘ್ಯಳಾಗಿ ಜನಕರಾಯನ ಪುತ್ರಿಯಾದ ನಿನ್ನ ಗರ್ಭದಲ್ಲಿ ಜನಿಸಿರುವ ಈ ನಿನ್ನ ಮಗಳಂ ನೋಡಿ ಸಲಹುವಳಾಗೆಂದು ಪೇಳಿದುದಱಿಂದ ಈಗ ನಾನು ಅದೇರೀತಿ ಸೀತೆಯಂ ಪಾಲಿಸಿದವಳಾದುದಱಿಂ ನಾನು ಪ್ರಭುವಾದ ನಿನ್ನ ವಚನವಂ ಸಾರ್ಥಕವನ್ನಾಗಿ ಮಾಡಿದೆನು " ಎಂಬ ಭೂದೇವಿಯ ವಚನವಂ ಕೇಳಿ ಶ್ರೀರಾಮನು—" ಎಲೌ ಪೂಜ್ಯಳಾದ ಭೂದೇವತೆಯೇ, ನಾನು ಅಪರಾಧವಂ ಮಾಡಿದವನಾದಾಗ್ಯೂ ಪುತ್ರಸಮನಾದುದಱಿಂ ದಯಾಪಾತ್ರನಾಗುತ್ತೇನೆ " ಎಂದು ಪೇಳಿ ಭೂದೇವಿಗೆ ವಂದಿಸಿದನು.

ಆಗ ಅರುಂಧತೀದೇವೀಯು ವಾಲ್ಮೀಕಿಮುನಿಯ ಆಜ್ಞೆಯಿಂ ಗಂಗಾತೀರದಲ್ಲಿ ಕೂಡಿರುವ ಸಮಸ್ತ ಜನರಂ ಕುಱಿತು—" ಎಲೊ ಪುರಜನರುಗಳಿರಾ, ಎಲೊ ದೇಶದಲ್ಲಿರುವ ಜನರುಗಳಿರಾ, ನೀವು ಈ ಅರ್ಥವಂ ಕೇಳುವರಾಗಬೇಕು. ಅದೇನೆಂದರೆ :— ಈ ಗಂಗಾಭೂದೇವಿಗಳಿಂದ ಈರೀತಿ ಶ್ಲಾಘಿಸಲ್ಪಡುವಳಾಗಿ ಅರುಂಧತಿಯಾದ ನನ್ನಿಂದಲೂ ಒಪ್ಪಿಸಲ್ಪಟ್ಟವಳಾಗಿ, ಮತ್ತು ಪೂರ್ವದಲ್ಲಿ ಭಗವಂತನಾದ ಅಗ್ನಿಯಿಂ ಆ ಮಹಾಸಭೆಯಲ್ಲಿ ವರ್ಣಿಸಲ್ಪಟ್ಟ ತನ್ನ ಚರಿತ್ರವುಳ್ಳವಳಾಗಿ, ಬ್ರಹ್ಮದೇವರು ಮೊದಲಾದ ಸಮಸ್ತ ದೇವತೆಗಳಿಂದಲೂ ಸ್ತುತಿಸಲ್ಪಟ್ಟವಳಾಗಿ, ಸೂರ್ಯವಂಶಕ್ಕೆ ಸೊಸೆಯಾಗಿ, ಯಜ್ಞಭೂಮಿಯಲ್ಲಿ ಜನಿಸಿದವಳಾಗಿ, ಜನಕರಾಯನ ಪುತ್ರಿಯಾಗಿಯೂ ಇರುವ ಈ ಸೀತೆಯಂ ನೀವು ಪರಿಗ್ರಹಿಸುವರಾಗಬೇಕು. ಸಾಂಪ್ರತ ಈ ಅರ್ಥದಲ್ಲಿ ನಿಮಗೆ ಎಂತು ತೋಱುತ್ತಲಿದೆ ? " ಎಂದು ನೀರೂಪಿಸಲು ;

ಅದಂ ಕೇಳಿ ಲಕ್ಷ್ಮಣನು—" ಎಲೈ, ಈರೀತಿಯಾಗಿ ಅರುಂಧತೀದೇವಿಯಿಂ ಧಿಕ್ಕರಿಸಲ್ಪಟ್ಟವರಾಗಿ, ಪುರಜನರು ದೇಶದಲ್ಲಿರುವ ಜನರು ಚರಾಚರಂಗಳಾದ ಪ್ರಾಣಿಗಳ ಸಮೂಹವು ಕೂಡ ಪೂಜ್ಯನಾದ ಸ್ವಾಮಿಯಂ ಕುಱಿತು ನಮಸ್ಕರಿಸುತ್ತಲಿದ್ದಾರೆ. ಮತ್ತು ಅಷ್ಟದಿಕ್ಪಾಲಕರು ಸಪ್ತರ್ಷಿಗಳು ಸಹ ಪುಷ್ಪವರ್ಷವಂ ಕರೆಯುತ್ತಲಿರುವರಾಗಿ ಸ್ವಾಮಿಯಾದ ಅಣ್ಣನಂ ಸೇವಿಸುತ್ತಲಿದ್ದಾರೆ " ಎಂದು ಸಂತೋಷಪಟ್ಟನು.

ಅರುಂಧತಿಯು ಸ್ವಾಮಿಯಂ ಕುಱಿತು—" ಎಲೈ ರಾಮಭದ್ರನೆ, ನೀನು ನಿನ್ನ ಈ ಅಶ್ವಮೇಧಯಾಗದಲ್ಲಿ ಪತ್ನಿಯಾಗಿರುವ ಸುವರ್ಣಮಯವಾದ ಸೀತಾಪ್ರತಿಕೃತಿಗೆ ಮೂಲಪ್ರತಿಯಾಗಿ ಪುಣ್ಯವತಿಯಾಗಿ ಪ್ರಿಯಳಾಗಿಯೂ ಇರುವ ಈ ಸೀತೆಯಂ ಧರ್ಮಾನುಸಾರವಾಗಿ ಪೂರ್ವದಂತೆ ಧರ್ಮಕ್ಕೆ ಸಾಧನಭೂತಳನ್ನಾಗಿ ಅಜ್ಞಾಪಿಸುವನಾಗು " ಎಂದು ನಿರೂಪಿಸಲು ; ಶ್ರೀರಾಮನು ಗುರುಪತ್ನಿಯ ಅಜ್ಞಾವಚನವಂ ಕೇಳಿ, " ಎಲೌ ತಾಯೆ, ಪೂಜ್ಯಳಾದ ನೀನು ಯಾವ ರೀತಿ ಅಜ್ಞಾಪಿಸುವೆಯೊ ಆರೀತಿ ನಾನು ಆಚರಿಸುತ್ತೇನೆ "

ಎಂದು ಪೇಳಿದನು. ಅದಂ ಕೇಳಿ ಲಕ್ಷ್ಮಣನು—" ಈಗ ನಾನು ಕೃತಾರ್ಥನಾಗುತ್ತೇನೆ " ಎಂದು ಸಂತೋಷಿಸಿದನು. ಆಗ ಸೀತೆಯು ಸ್ವಾಮಿಯ ವಚನವಂ ಕೇಳಿ, " ಪುನಃ ನಾನು ಜೀವಿಸಿದೆನು " ಎಂದಳು. ಲಕ್ಷ್ಮಣನು ಸೀತೆಯಂ ಕುಱಿತು—" ಲಕ್ಷ್ಮಣನು ವಂದಿಸುತ್ತಾನೆ " ಎಂದು ಪೇಳಿ, ಸೀತೆಗೆ ವಂದಿಸಿದನು. ಆಗ ಸೀತೆಯು ಲಕ್ಷ್ಮಣನಂ ಕುಱಿತು—" ಎಲೈ ಪೂಜ್ಯರಿಗೆ ಪುತ್ರನಾದವನೇ, ಇದೇ ರೀತಿ ನೀನು ನನಗೆ ಹಿತಚಿಂತ ಕನಾಗಿ ಚಿರಂಜೀವಿಯಾಗು " ಎಂದು ಆಶೀರ್ವಾದವಂ ಮಾಡಿದಳು.

ಆಬಳಿಕ ಅರುಂಧತಿಯು ವಾಲ್ಮೀಕಿಮುನಿಯಂ ಕುಱಿತು—" ಎಲೈ ಮಹರ್ಷಿಯೇ, ಸೀತಾಗರ್ಭದಲ್ಲಿ ಜನಿಸಿರುವ ಕುಶಲವರಂ ಈಗ ರಾಮಭದ್ರನಿಗೆ ಒಪ್ಪಿಸುವನಾಗು " ಎಂದು ಪೇಳಿ ಅರುಂಧತೀದೇವಿಯು ಅಲ್ಲಿಂದ ಪೋಱಟವಳಾಗಲು ; ರಾಮಲಕ್ಷ್ಮಣರಿರ್ವರು ಗುರುಪತ್ನಿಯ ವಚನವಂ ಕೇಳಿ—" ಎಲೈ, ಭಾಗ್ಯವಶದಿಂ ನಾವು ಊಹಿಸಿದಂತೆಯೇ ಆಯಿತು " ಎಂದು ಸಂತೋಷಪಟ್ಟರು. ಆಗ ಸೀತೆಯು ಮಹಾತಿಶಯದಿಂ " ಪುತ್ರರು ಎಲ್ಲಿ ಇದ್ದಾರೆ ? " ಎಂದು ಪ್ರಶ್ನೆಗೈದಳು.

ಆಬಳಿಕ ವಾಲ್ಮೀಕಿಮುನಿಯು ಕುಶಲವರು ಸಹ ರಂಗಸ್ಥಾನವನ್ನೈದಿದವರಾಗಲು ;

ವಾಲ್ಮೀಕಿಮುನಿಯು ಕುಶಲವರಂ ಕುಱಿತು—" ಎಲೈ ಆಯುಷ್ಮಂತರೇ, ಕೇಳಿ. ಈ ರಘುಪತಿಯಾದ ಸ್ವಾಮಿಯು ನಿಮಗೆ ತಂದೆಯು ; ಈ ಲಕ್ಷ್ಮಣನು ನಿಮ್ಮ ಚಿಕ್ಕ ತಂದೆಯು ; ಈ ಸೀತೆಯು ನಿಮ್ಮ ತಾಯಿ ; ರಾಜರ್ಷಿಯಾದ ಈ ಜನಕರಾಯನು ನಿಮಗೆ ಮಾತಾಮಹನು " ಎಂದು ನಿರೂಪಿಸಲು ; ಸೀತೆಯು ಸಂತೋಷದೊಡನೆ ಕಾರುಣ್ಯದೊಡನೆಯೂ ಅಭಿಪ್ರಾಯದೊಡನೆಯೂ ಸಹ ಕೂಡಿದವಳಾಗಿ ಜನಕರಾಯನಂ ಕಂಡು—"ಎಲೈ, ನಮ್ಮ ತಂದೆಯೂ ಇಲ್ಲಿ ಬಂದು ಇದ್ದಾನೆ." ಎಂದಳು. ಆಗ ಕುಶಲವರು—" ಹಾ ತಾಯೆ ! ಹಾ ತಂದೆಯೆ ! ಹಾ ಹಾ ! ಮಾತಾಮಹನೆ ! " ಎಂದು ಕರೆಯುತ, ಆ ಪೂಜ್ಯರ ಸಮೀಪವನ್ನೈದುವವರಾಗಲು ; ರಾಮಲಕ್ಷ್ಮಣರು ಸಂತೋಷಾತಿಶಯದಿಂ ಅವರಿಬ್ಬರಂ ಆಲಿಂಗನವಂ ಮಾಡಿ—" ಪುತ್ರರಾದ ನೀವಿಬ್ಬರು ನಮ್ಮನ್ನು ಹೊಂದಿದಿರಲ್ಲವೆ " ಎಂದು ಆದರಿಸಿದರು. ಸೀತೆಯು ಪುತ್ರರಂ ಕುಱಿತು—" ಎಲೈ ಮಗುವಾದ ಲವನೆ, ನನ್ನ ಸಮೀಪಕ್ಕೆ ಬಾರೈ ; ಎಲೈ ಮಗುವಾದ ಕುಶನೆ, ಇಲ್ಲಿ ಬಾರೈ. ಬಹುಕಾಲಕ್ಕಾಗಿ ಲೋಕಾಂತರದಿಂ ಬಂದಿರುವ ತಾಯಾದ ನನ್ನಂ ನೀವು ಆಲಿಂಗನಂಗೈಯುವರಾಗಿ " ಎಂದು ಪೇಳಲು ; ಕುಶಲವರು ಅದೇರೀತಿ ತಾಯಾದ ಸೀತೆಯಂ ಆಲಿಂಗನಂಗೈಯುವರಾಗಿ—" ನಾವು ಕೃತಾರ್ಥರಾದೆವು " ಎಂದರು. ಸೀತೆಯು ವಾಲ್ಮೀಕಿಮುನಿಯಂ ಕುಱಿತು—" ಎಲೈ ಪೂಜ್ಯನಾದ ಮಹರ್ಷಿಯೇ, ನಾನು ನಿಮಗೆ ವಂದಿಸುವೆನು " ಎಂದು ನಮಿಸಿದಳು. ವಾಲ್ಮೀಕಿಮುನಿಯು ಸೀತೆಯಂ ಕುಱಿತು—" ಎಲೌ ಮಗಳೆ, ಇದೇರೀತಿ ಪತಿಪುತ್ರರೊಡಗೂಡಿ ಸಾಮ್ರಾಜ್ಯವನ್ನೈದಿ ದೀರ್ಘಾಯುಷ್ಮಂತಳಾಗು " ಎಂದು ಆಶೀರ್ವಾದವಂ ಮಾಡುತ್ತಿರಲು ;

ಅಷ್ಟಱೊಳಗೆ ನೇಪಥ್ಯದಲ್ಲಿ—" ಎಲೈ, ಸ್ವಾಮಿಯ ಆಜ್ಞಾಧಾರಕನಾದ ಶತ್ರುಘ್ನನು ಲವಣಾಸುರನಂ ಸಂಹರಿಸಿ ಆವನ ಸಂಸ್ಥಾನವಾದ ಮಧುರಾಪುರಕ್ಕೆ ಅಧಿಪತಿಯಾಗಿ ಬಂದು ಇದ್ದಾನೆ " ಎಂದು ಪೇಳಲು ;

ಅದಂ ಕೇಳಿ ಲಕ್ಷ್ಮಣನು—" ಎಲೈ, ದೈವಾನುಕೂಲ್ಯವುಂಟಾದಲ್ಲಿ ಶುಭಗಳನ್ನನುಸರಿಸಿಕೊಂಡು ಮತ್ತೂ ಶುಭಗಳು ಇದೇರೀತಿ ಪ್ರಾಪ್ತಗಳಾಗುವುವು " ಎಂದು ಹೇಳಿದನು. ಶ್ರೀರಾಮನು—" ಈ ರೀತಿ ಸಮಸ್ತ ಶುಭವು ಪ್ರಾಪ್ತವಾದರೂ ಇದಂ ನಾನು ನಂಬುವುದಿಲ್ಲ. ಅಥವಾ ಇಂತೆಂದು ಹೇಳುವುದು ಏಕೆ? ಸಂಪತ್ತುಗಳ ಸ್ವಭಾವವೇ ಇಂಥದಲ್ಲವೆ? " ಎಂದು ಹೇಳುತ್ತಿರಲು;

ವಾಲ್ಮೀಕಿಮುನಿಯು ಸ್ವಾಮಿಯಂ ಕುಱಿತು—" ಎಲೈ ರಾಮಭದ್ರನೆ, ಮತ್ತು ಯಾವ ಇಷ್ಟಾರ್ಥವನ್ನು ನಾನು ನಿನಗೆ ಸಮರ್ಪಿಸುವನಾಗಲಿ? ಹೇಳುವನಾಗು " ಎಂದು ನಿರೂಪಿಸಿದವನಾಗಲು; ಶ್ರೀರಾಮನು ವಾಲ್ಮೀಕಿಮುನಿಯಂ ಕುಱಿತು—" ಎಲೈ ಮಹರ್ಷಿಯೆ, ನನಗೆ ಇದಕ್ಕಿಂತಲೂ ಅತ್ಯಂತವಾಗಿ ಇಷ್ಟವಾದ ಅರ್ಥವು ಮತ್ತೇನು ಇದೆ? ಆದರೂ ಈ ಭರತಾಚಾರ್ಯವಚನವು ನಿಮ್ಮನುಗ್ರಹದಿಂ ಸತ್ಯವಾಗಲಿ.

ಅದೆಂತೆನೆ:—ಯಾವ ಈ ಕಥೆಯು ತಾಯಿಯಂತೆಯೂ ಗಂಗೆಯಂತೆಯೂ ಪಾಪಂಗಳಂ ಪರಿಹರಿಸಿ ಜನರಂ ಪರಿಶುದ್ಧರನ್ನಾಗಿ ಮಾಡುವುದೊ; ಶ್ರೇಯಸ್ಸುಗಳಂ ವೃದ್ಧಿಯನ್ನೈದಿಸುವುದೊ; ಮತ್ತು ಯಾವ ಕಥೆಯು ಜಗತ್ತಿಗೆ ಮಂಗಳಕರವಾಗಿ ಮನೋಹರವಾಗಿಯೂ ಇರುವುದೊ, ಶಬ್ದಬ್ರಹ್ಮಸ್ವರೂಪವಂ ತಿಳಿದಿರುವ ಅಭಿಜ್ಞನಾದ ಭವಭೂತಿಯೆಂಬ ಮಹಾಕವಿಯ ವಾಕ್ಕೀ ಈರೀತಿ ನಾಟಕಕಥಾರೂಪವಾಗಿ ಪರಿಣಮಿಸಿ ಇರುವುದಾದಕಾರಣ ಅಭಿನಯಂಗಳಿಂ ಪ್ರಕಾಶಂಗೈಯಲ್ಪಟ್ಟ ಅರ್ಥಸ್ವರೂಪವುಳ್ಳುದೊ, ಅಂಥ ಈ ಕಥೆಯಂ ಲೋಕದಲ್ಲಿ ವಿದ್ವಾಂಸರು ಚೆನ್ನಾಗಿ ಭಾವಿಸುವವರಾಗಲಿ!

ಎಂದು ಹೇಳಿದ ಬಳಿಕ ರಂಗಸ್ಥಾನದಿಂದ ಎಲ್ಲರೂ ತಿರಿಗಿದವರಾಗಿ ಪೊಱಟರು.

ಸಪ್ತಮಾಂಕತಾತ್ಪರ್ಯಂ ಸಮಾಪ್ತಂ.

---

ಉತ್ತರ ರಾಮಚರಿತ್ರಕಥೆ ಸಂಪೂರ್ಣಮಾದುದು.

PRINTED AT THE WESLEYAN MISSION PRESS, MYSORE—1924.

# ಶೋಧನಪತ್ರ

| ಪುಟ. | ಪಙ್ತಿ. | ಶೋಧಿತ ಭಾಗ | ಪುಟ. | ಪಙ್ತಿ. | ಶೋಧಿತ ಭಾಗ |
|---|---|---|---|---|---|
| ೬ | ೨೮ | ಪ್ರಾಪ್ತಗಳಾಗು | ೩೩ | ೩೨ | ಆಸಕ್ತ |
| ೧೧ | ೩೧ | ಸಮೀಪ | ೪೦ | ೯ | ಪುಟ್ಟುವ |
| ೧೩ | ೧ | ಚಿತ್ರವಂ | ೪೬ | ೨೦ | ಆಯುಷ್ಮಂತ |
| ೧೩ | ೨೩ | ಭಯಗ್ರಸ್ತ | ೪೬ | ೨೩ | ಆಶ್ಚರ್ಯ |
| ೧೫ | ೨೯ | ಪರಿಮಳಯುಕ್ತ | ೪೬ | ೨೬ | ಕೋಮಲಗಳಾದ |
| ೨೦ | ೨೦ | ಇಂಥ | ೫೦ | ೨೭ | ದಸೆ |
| ೨೦ | ೨೫ | ನಿಮಿತ್ತವಾಗಿ | ೫೨ | ೧೮ | ದಸೆ |
| ೨೦ | ೩೩ | ದೋಷ | ೭೭ | ೮ | ಪೂಜ್ಯರೇ |
| ೨೪ | ೨೮ | ಉಪಚಾರವನ್ನಾಚರಿಸಿ | ೮೨ | ೨೨ | ಹಿಂದಕ್ಕೆ |
| ೨೬ | ೩೨ | ತಪಸ್ವಿನಿ | ೯೨ | ೩ | ಜ್ವಲಿಸುತ್ತ |
| ೩೩ | ೧೬ | ಪೊದೆಗಳಿಂ | ೧೦೪ | ೬ | ಎಂಬದಾಗಿ ಲವನು |
| ೩೩ | ೨೨ | ತೀಕ್ಷ್ಣವಾಗಿ | ೧೦೮ | ೨೩ | ಪುಣ್ಯಾತಿಶಯ |

# ಕರ್ಣಾಟಕ ಕಾವ್ಯಕಲಾನಿಧಿ ಗ್ರಂಥಗಳ ಪಟ್ಟಿ.

| ಕವಿಯ ಕಾಲ ಕ್ರಿ. ಶ. | ಕವಿಯೂ ಗ್ರಂಥವೂ | ಕ್ರಯ | | |
|---|---|---|---|---|
| | | ರೂ. | ಆ. | ಪೈ. |
| | **ಚಂಪೂ ಗ್ರಂಥಗಳು :—** | | | |
| 993 | ಮಹಾಕವಿ ರನ್ನನ ಗದಾಯುದ್ಧ .. .. | 1 | 6 | 0 |
| 993 | ಮಹಾಕವಿ ರನ್ನನ ಅಜಿತತೀರ್ಥಕರ ಪುರಾಣ ತಿಲಕಂ | 1 | 9 | 0 |
| 1105 | ಅಭಿನವಪಂಪ ಅಥವಾ ನಾಗಚಂದ್ರನ ಮಲ್ಲಿನಾಥಪುರಾಣಂ | | | |
| 1145 | ದುರ್ಗಸಿಂಹನ ಪಂಚತಂತ್ರಂ (ಸಟಿಪ್ಪಣಂ) . | 3 | 0 | 0 |
| 1165 | ಹರಿಹರದೇವನ ಗಿರಿಜಾಕಲ್ಯಾಣ . | | | |
| 1170 | ಕವಿಕುಂಜರಾಭಿದ ನೇಮಿಚಂದ್ರನ ಲೀಲಾವತೀ ಪ್ರಬಂಧಂ.. | 3 | 8 | 0 |
| 1170 | ,, ಅರ್ಧನೇಮಿ ಪುರಾಣಂ | 1 | 9 | 0 |
| 1189 | ಅಗ್ಗಳದೇವನ ಚಂದ್ರಪ್ರಭಪುರಾಣಂ—ಅಗ್ಗಳ ಲೀಲಾವತಿ . | 4 | 0 | 0 |
| 1209 | ಕರ್ಣಾಟಕ ಕವಿ ಚಕ್ರವರ್ತಿ ಜನ್ನನ ಶಾಸನಗಳ ಸಂಗ್ರಹ .. | 0 | 2 | 6 |
| 1209 | ,, ಯಶೋಧರ ಚರಿತೆ, ಸಟಿಪ್ಪಣಂ | 1 | 2 | 0 |
| 1235 | ಕಮಲಭವನ ಶಾಂತೀಶ್ವರ ಪುರಾಣಂ . | 4 | 8 | 0 |
| 1235 | ಆಂಡಯ್ಯನ ಕಬ್ಬಿಗರ ಕಾವಂ, ಸಟಿಪ್ಪಣಂ . .. | | | |
| 1300 | ಚಾವುಂಡರಾಯನ ಅಭಿನವ ದಶಕುಮಾರ ಚರಿತೆ . | 3 | 10 | 0 |
| 1528 | ಅಭಿನವ ವಾದಿವಿದ್ಯಾನಂದನ ಕಾವ್ಯಸಾರಂ . . | 2 | 4 | 0 |
| 1700 | ತಿರುಮಲೆಯಾರ್ಯನ ಚಿಕದೇವರಾಜ ವಿಜಯಂ . . | 2 | 4 | 0 |
| 1700 | ಚಿಕುಪಾಧ್ಯಾಯನ ದಿವ್ಯಸೂರಿ ಚರಿತೆ . . | 1 | 2 | 0 |
| 1700 | ಗೋಪಾಲಪ್ರಸಾದಿಯ ಚಿಕದೇವೇಂದ್ರ ವಂಶಾವಳಿ . | 0 | 4 | 6 |
| | **ಷಟ್ಪದೀ ಗ್ರಂಥಗಳು :—** | | | |
| 1165 | ರಾಘವಾಂಕನ ಹರಿಶ್ಚಂದ್ರಕಾವ್ಯ (ವಾರ್ಧಿಕ) .. | | | |
| 1369 | ಗುಬ್ಬಿ ಮಲ್ಲಣಾರ್ಯನ ಭಾವ ಚಿಂತಾರತ್ನಂ (ವಾರ್ಧಿಕ) .. | | | |
| 1424 | ಭಾಸ್ಕರನ ಜೀವಂಧರ ಚರಿತೆ (ಭಾಮಿನಿ) . .. | 2 | 4 | 0 |
| 1509 | ಮಂಗರಸನ ಜಯನೃಪಕಾವ್ಯ (ಪರಿವರ್ಧಿನಿ) .. | 2 | 8 | 0 |
| 16 ಶ. | ಕನಕದಾಸನ ನಳಚರಿತ್ರೆ (ಭಾಮಿನಿ) . .. | 0 | 12 | 0 |
| 16 ಶ. | ಗುರುಲಿಂಗವಿಭುವಿನ ಭಿಕ್ಷಾಟನ ಚರಿತೆ ಸವ್ಯಾಖ್ಯಾನ (ವಾರ್ಧಿಕ) | 1 | 0 | 0 |
| 16 ಶ. | ಕುಮಾರ ವಾಲ್ಮೀಕಿಯ ಮೈರಾವಣನ ಕಾಳೆಗ (ಭಾಮಿನಿ) | | | |
| 17 ಶ. | ತಿರುಮಲೆವೈದ್ಯನ ಉತ್ತರ ರಾಮಾಯಣಂ (ಭಾಮಿನಿ) .. | 2 | 4 | 0 |
| 19 ಶ. | ಮಹಾಲಕ್ಷ್ಮಿಯ ಶ್ರೀರಾಮ ಪಟ್ಟಾಭಿಷೇಕಂ (ವಾರ್ಧಿಕ) .. | 1 | 0 | 0 |

| ಕ್ರಿ. ಶ. | | ರೂ. | ಆ. | ಪೈ. |
|---|---|---|---|---|
| 17 ಶ. | ಗೋಪಕವಿಯ ನಂದೀಮಹಾತ್ಮ್ಯಂ (ವಾರ್ಧಿಕ) .. | 1 | 0 | 0 |
| 18 ಶ. | ಕೋನಯ್ಯನ ಗಯಚರಿತ್ರೆ (ಭಾಮಿನಿ) .. .. | 2 | 14 | 0 |
| | **ಗದ್ಯ ಗ್ರಂಥಗಳು :—** | | | |
| 17 ಶ. | ತಿರುಮಲೆಯಾರ್ಯನ ಚಿಕದೇವರಾಯ ವಂಶಾವಳಿ ; ಹಳಗನ್ನಡ | 1 | 8 | 0 |
| 17 ಶ. | ಚಿಕುಪಾಧ್ಯಾಯನ ವಿಷ್ಣುಪುರಾಣ, ೧, ೪, ೫, ನೆ ಅಂಶಗಳು | 3 | 4 | 0 |
| 17 ಶ. | ಕನ್ನಡ ವಚನ ಕಾದಂಬರಿ—ಪೂರ್ವಭಾಗ .. .. | 0 | 15 | 0 |
| 17 ಶ. | ಭಾಳಲೋಚನನ ಬತ್ತೀಸಪುತ್ತಳಿ ಕಥೆಗಳು .. .. | 1 | 4 | 0 |
| 19 ಶ. | * ಮುದ್ದಣ್ಣನ ಶ್ರೀರಾಮಾಶ್ವಮೇಧಂ (ಹಳಗನ್ನಡ) .. | | | |
| 19 ಶ. | ಅದ್ಭುತರಾಮಾಯಣಂ (ಸಟಿಪ್ಪಣ) ,, .. .. | 0 | 12 | 0 |
| | **ನಾಟಕ :—** | | | |
| 17 ಶ. | ಸಿಂಗರಾರ್ಯನ ಮಿತ್ರವಿಂದಾಗೋವಿಂದ ನಾಟಕಂ .. | 1 | 0 | 0 |
| | **ನಾಟಕಗದ್ಯಾನುವಾದಗಳು :—** | | | |
| 18 ಶ. | ಉತ್ತರ ರಾಮಚರಿತ್ರಕಥೆ .. . .. | 1 | 8 | 0 |
| 19 ಶ. | ಮುಮ್ಮಡಿ ಕೃಷ್ಣರಾಜ ಒಡೆಯರ ಶಾಕುಂತಳ ನವೀನ ಟೀಕೆ | 1 | 12 | 0 |
| 19 ಶ. | ,, ವತ್ಸರಾಜ ಕಥೆ—ಪೂರ್ವಭಾಗ (ರತ್ನಾವಳೀ ಕಥೆ) | 2 | 0 | 0 |
| 19 ಶ. | ,, ಪ್ರಬೋಧಚಂದ್ರೋದಯ (1-3 ಅಂಕಗಳು) . | 0 | 12 | 0 |
| | **ಶತಕಗಳು :—** | | | |
| 1165 | ಹರಿಹರ ದೇವನ ಪಂಪಾಶತಕಂ.. . . | 0 | 3 | 6 |
| | ಸುಭಾಷಿತ ಮುಕ್ತಕಶತಕಂ (ಸಂಕಲಿತ) . . | 0 | 3 | 6 |
| 17 ಶ. | * ಕವಿಹಂಸರಾಜನ ರತ್ನಾಕರ ಶತಕ .. | | | |
| 17 ಶ. | * ರತ್ನಾಕರ ಕವಿಯ ಅಪರಾಜಿತೇಶ್ವರ ಶತಕ .. | | | |
| 19 ಶ. | ಶ್ರೀವಾಸನ ವರ್ಷ ವರ್ಧಂತೀ ಶತಕ (ವಾರ್ಧಿಕ ಷಟ್ಪದಿ) .. | 0 | 3 | 6 |
| | **ಅಲಂಕಾರ ಗ್ರಂಥಗಳು :—** | | | |
| 1150 | ಉದಯಾದಿತ್ಯಾಲಂಕಾರಂ .. .. .. | 0 | 3 | 0 |
| 17 ಶ. | * ತಿರುಮಲೆಯಾರ್ಯನ ಅಪ್ರತಿಮ ವೀರಚರಿತೆ .. . | | | |
| | **ರಸಗ್ರಂಥ :—** | | | |
| 12 ಶ. | * ಕವಿಕಾಮನ ಶೃಂಗಾರರತ್ನಾಕರ .. .. | | | |
| | **ನಿಘಂಟುಗಳು :—** | | | |
| 15 ಶ. | * ಕರ್ಣಾಟಕ ನಿಘಂಟು .. .. | | | |
| 15 ಶ. | ಚತುರಾಸ್ಯ ನಿಘಂಟು .. .. | 0 | 4 | 6 |
| 15 ಶ. | ಶಬ್ದಸಾರ ನಿಘಂಟು (ಗದ್ಯ) .. .. .. | 0 | 4 | 6 |
| 17 ಶ. | ಸೂರ್ಯಕವಿಯ ಕವಿಕಂಠ ಹಾರ . .. .. | 0 | 7 | 0 |

| ಕ್ರಿ. ಶ. | | ರೂ. | ಅ. | ಪೈ. |
|---|---|---|---|---|
| 17 ಶ. | ಕರ್ಣಾಟಕ ಸಂಜೀವನವೆಂಬ ಬಿಟಕುಳನಿಘಂಟು .. | 0 | 2 | 6 |
| | **ಛಂದಸ್ಸು :—** | | | |
| 990 | ನಾಗವರ್ಮನ ಛಂದೋಂಬುಧಿ, ಸಟಿಪ್ಪಣ .. . | 1 | 8 | 0 |
| 18 ಶ. | ನಂದಿಕವಿಯ ನಂದಿಛಂದಸ್ಸು, ಸವಿವರಣಂ . | 0 | 7 | 0 |
| | **ವ್ಯಾಕರಣ :—** | | | |
| 12 ಶ. | ನಾಗವರ್ಮನ ಶಬ್ದಸ್ಮೃತಿ (ಅಸಮಗ್ರ) | 0 | 12 | 0 |
| | **ಸಾಂಗತ್ಯದ ಹಾಡು :—** | | | |
| 16 ಶ. | ಕನಕದಾಸನ ಮೋಹನ ತರಂಗಿಣಿ | 2 | 8 | 0 |
| 16 ಶ. | ಪ್ರಧಾನಿ ತಿರುಮಲಾರ್ಯನ ಕರ್ಣ ವೃತ್ತಾಂತಕಥೆ | 0 | 8 | 0 |
| 17 ಶ. | * ಸಂಚಿಹೊನ್ನಮ್ಮನ ಹದಿಬದೆಯ ಧರ್ಮ . | | | |
| 17 ಶ. | ಕೃಷ್ಣಗೋಪೀವಿಲಾಸ ಅಥವಾ ಕೃಷ್ಣಬಾಲಲೀಲೆ | 0 | 8 | 0 |
| 17 ಶ. | ನಂಜಕವಿಯ ಕಪೋತವಾಕ್ಯಂ . | 0 | 1 | 0 |
| | **ಕೀರ್ತನೆಗಳು :—** | | | |
| 17 ಶ. | ಚಿಕದೇವರಾಯನ ಗೀತಗೋಪಾಲ ಪ್ರಬಂಧ .. | 0 | 12 | 0 |
| 17 ಶ. | * ಭಗವದ್ಗೀತಾರ್ಥ ಪ್ರತಿಪಾದನ (ಪ್ರಾಚೀನ ಟೀಕಾಸಹಿತ) | | | |
| 18 ಶ. | ಗಜೇಂದ್ರಮೋಕ್ಷ (ದ್ವಿಪದಿ, ಉದಯರಾಗ) .. . | 0 | 1 | 0 |
| 18 ಶ. | ಧ್ರುವಚರಿತ್ರೆ (ಉದಯರಾಗ, ವಾರ್ಧಿಕಷಟ್ಪದಿ) .. | 0 | 1 | 0 |
| | **ಮತಗ್ರಂಥಗಳು :—ಗದ್ಯ** | | | |
| 17 ಶ. | ವೇದಾಂತವಿವೇಕಸಾರ (ಅದ್ವೈತ,) ಪ್ರಥಮಭಾಗ | 1 | 6 | 6 |
| 17 ಶ. | ಚಿಕದೇವರಾಯ ಬಿನ್ನಪಂ (ವಿಶಿಷ್ಟಾದ್ವೈತ,) | 0 | 10 | 0 |
| 19 ಶ. | ಜೀವೇಶ್ವರ ಸಾಂಗತ್ಯಂ (ಅದ್ವೈತ) . . | 0 | 1 | 0 |

**ಮಂ. ಆ. ರಾಮಾನುಜೈಯಂಗಾರ್ಯರ ನವೀನ ಗ್ರಂಥಗಳು :—**

| | | | |
|---|---|---|---|
| ಮಹಾಭಾರತ ಕಥಾಪ್ರಸಂಗ * ಆದಿಪರ್ವ ಮತ್ತು ಸಭಾಪರ್ವ | 0 | 9 | 0 |
| ಕವಿಸಮಯಂ–ಕಾವ್ಯರಸವನ್ನು ಬೋಧಿಸುವ ವಿಮರ್ಶೆ | 1 | 4 | 0 |
| ಸುವ್ರತ–ಕರ್ಮವಿಲಾಸವನ್ನು ಬೋಧಿಸುವ ಕಾದಂಬರಿ | 0 | 12 | 0 |
| ಕವಿಕಾರ್ಯ ಪ್ರಶಂಶೆ .. .. .. | 0 | 3 | 0 |
| ಪ್ರಮಾಣಪ್ರಮೇಯ ವಿವೇಕ–ಮತಬೋಧಾವತರಣಿಕೆ .. | 0 | 2 | 0 |
| * ಪ್ರಬಂಧಾವಳಿ ಅಥವಾ ಐಹಿಕಸುಖಸಾಧನಂ .. .. | | | |

*N.B.*—* ಈ ರೀತಿ ಗುರುತಿಸಿರುವ ಕೋಶಗಳು ಪುನರ್ಮುದ್ರಣವಾಗತಕ್ಕವುಗಳು.

*Apply to :—* **M. AJI. NARASIMHACHAR, B.A.,**
**Karnataka Kavya Kalanidhi Office,**
**Mysore.**